ಬೆಳವಣಿಗೆ, ಸಾವು ಸಮಾನವೆಂದು ಇಸ್ಲಾಮ್ ಘೋಷಿಸಿತು. "ನೀವೆಲ್ಲರೂ ಆದಮ ಮಕ್ಕಳು. ಆದಮರಾದರೋ ಮಣ್ಣಿನಿಂದ ಸೃಷ್ಟಿಸಲ್ಪಟ್ಟವರಾಗಿದ್ದಾರೆ."[1]

(ಮುಸ್ಲಿಮ್, ಅಬೂ ದಾವೂದ್

ಒಬ್ಬ ಯಜಮಾನ, ಇನ್ನೊಬ್ಬ ಗುಲಾಮನೆಂಬ ನೆಲೆಯಲ್ಲಿ ಯಾವೊಬ್ಬನಿಗೂ ಶ್ರೇಷ್ಠತೆಯಿಲ್ಲ. ದೇವಭಕ್ತಿಯೇ ಶ್ರೇಷ್ಠತೆಯ ಮಾನದಂಡವಾಗಿದೆಯೆಂದು ಇಸ್ಲಾಮ್ ಸಾರಿತು: "ತಿಳಿದಿರಲಿ! ಅರಬನಿಗೆ ಅರಬೇತರನಿಗಿಂತ, ಅರಬೇತರನಿಗೆ ಅರಬನಿಗಿಂತ ಕರಿಯನಿಗೆ ಬಿಳಿಯನಿಗಿಂತ, ಬಿಳಿಯನಿಗೆ ಕರಿಯನಿಗಿಂತ ಯಾವ ಶ್ರೇಷ್ಠತೆಯೂ ಇಲ್ಲ, ದೇವಭಕ್ತಿಯ ಆಧಾರದ ವಿನಾ."[2] (ತ್ವಬರಿ)

ಗುಲಾಮರೊಡನೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಯಜಮಾನರಿಗೆ ಆಜ್ಞಾಪಿಸಿತು: "-ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ-ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮಸ್ತುತಿಗೈಯುವವನನ್ನೂ ಅಲ್ಲಾಹ್ ಮೆಚ್ಚುವುದಿಲ್ಲ."

*(ಅನ್ನಿಸಾ: 36)*

ಗುಲಾಮ ಮತ್ತು ಮಾಲಿಕನ ಪರಸ್ಪರ ಸಂಬಂಧವು ಉಚ್ಚ-ನೀಚತೆಯ ಸಂಬಂಧವಲ್ಲ. ಅದು ಸೌಹಾರ್ದ ಮತ್ತು ಸಹೋದರತೆಯ ಸಂಬಂಧವೆಂದು ಸಮರ್ಥಿಸಲಿಕ್ಕಾಗಿ ಇಸ್ಲಾಮ್ ಆಗಮಿಸಿತು. ಮಾಲಿಕನು ದಾಸಿಯ 'ಬಂಧು' ಮತ್ತು 'ಪೋಷಕ' ಆಕೆಯ ವಿವಾಹ ವಿಷಯದಲ್ಲಿ ಆ 'ಪೋಷಕನ' ಅನುಮತಿ ಪಡೆಯಬೇಕು.

"ನಿಮ್ಮಲ್ಲಾರಾದರೂ ಕುಲೀನ ಮುಸ್ಲಿಮ್ ಸ್ತ್ರೀ (ಮುಹ್ಸನಾತ್)ಯರೊಂದಿಗೆ ವಿವಾಹ ಮಾಡಿಕೊಳ್ಳುವಷ್ಟು ಸ್ಥಿತಿವಂತನಾಗಿರದಿದ್ದರೆ, ನಿಮ್ಮ ಸ್ವಾಧೀನದಲ್ಲಿರುವ ವಿಶ್ವಾಸಿನಿಯರಾದ ದಾಸಿಯರ ಪೈಕಿ ಯಾರೊಂದಿಗಾದರೂ ವಿವಾಹ ಮಾಡಿಕೊಳ್ಳಲಿ. ಅಲ್ಲಾಹ್ ನಿಮ್ಮ ವಿಶ್ವಾಸಗಳನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ನೀವೆಲ್ಲರೂ ಒಂದೇ ವರ್ಗಕ್ಕೆ ಸೇರಿದವರು. ಆದುದರಿಂದ ನೀವು ಅವರ ಪೋಷಕರ ಅನುಮತಿಯಿಂದ ಅವರೊಂದಿಗೆ ವಿವಾಹ ಮಾಡಿಕೊಳ್ಳಿರಿ. ... ಉತ್ತಮ ರೀತಿಯಲ್ಲಿ ಅವರ ಮಹ್ರನ್ನು (ವಿವಾಹಧನ) ಅವರಿಗೆ ಸಲ್ಲಿಸಿರಿ." *(ಅನ್ನಿಸಾ:25)*

ಗುಲಾಮರು ಮತ್ತು ಮಾಲಿಕರು ಪರಸ್ಪರ ಸಹೋದರರು. ಪ್ರವಾದಿ(ಸ) ಹೇಳಿದರು:

---

1. ಮುಸ್ಲಿಮ್, ಅಬೂದಾವೂದ್.
2. ತ್ವಬರಿ ನಿವೇದಿತ ಹದೀಸ್

ರರು ನಿಮ್ಮ ಸಹೋದರರು ಮತ್ತು ಸಂಬಂಧಿಕರು. ನಿಮ್ಮ ಆಶ್ರಯದಲ್ಲಿರುವ ಓರ್ವ ೋದರನಿಗೆ ನೀವು ಸೇವಿಸುವಂತಹ ಆಹಾರವನ್ನೂ, ನೀವು ಧರಿಸುವಂತಹ ಬಟ್ಟೆಯನ್ನೂ ರಿ. ಅವರಿಗೆ ಅಸಾಧ್ಯವಾದ ಕೆಲಸವನ್ನು ಅವರ ಮೇಲೆ ಹೇರಬೇಡಿರಿ. ಅವರಿಗೆ ಕಷ್ಟದ ವಹಿಸಿಕೊಟ್ಟಾಗ ನೀವೂ ಅವರಿಗೆ ನೆರವಾಗಿರಿ." *(ಬುಖಾರಿ)*

ಗುಲಾಮರ ಮನ ನೋಯಿಸುವುದನ್ನೂ ಇಸ್ಲಾಮ್ ತಡೆದಿದೆ. ಪ್ರವಾದಿ(ಸ) ಿದರು: "ಈತ ನನ್ನ ದಾಸ. ಈಕೆ ನನ್ನ ದಾಸಿಯೆಂದು ನೀವು ಅಭಿಸಂಬೋಧಿಸಬೇಡಿರಿ." ್ಮ ಅಬೂ ಹುರೈರಾ(ರ) ಅವರು, ಗುಲಾಮನನ್ನು ಹಿಂದಿನಿಂದ ನಡೆಸಿಕೊಂಡು ುಂ ವಾಹನದಲ್ಲಿ ಪಯಣಿಸುತ್ತಿದ್ದ ಓರ್ವ ವ್ಯಕ್ತಿಯೊಡನೆ ಹೀಗೆಂದರು: "ನಿನ್ನ ಹಿಂದೆ ನನ್ನು ಕುಳ್ಳಿರಿಸು. ಆತ ನಿನ್ನ ಸಹೋದರ. ನಿನ್ನಲ್ಲಿರುವಂತಹ ಆತ್ಮವೇ ಆತನಿಗೂ ."

ಇಸ್ಲಾಮಿನ ಗುಲಾಮ ವಿಮೋಚನಾ ಪ್ರಕ್ರಿಯೆಯ ಎರಡನೆಯ ಹಂತವನ್ನು ರಿಸುವುದಕ್ಕಿಂತ ಮುಂಚೆ ಈ ಆರಂಭ ಹಂತದಲ್ಲಿಯೇ ಅದು ಸಾಧಿಸಿದ ಸುಧಾರಣೆಯ ೀಷಣೆ ಸಂಗತವೆನಿಸುತ್ತದೆ.

ಗುಲಾಮನು ಕೇವಲ ಸರಕೆಂಬ ಪರಿಸ್ಥಿತಿ ಬದಲಾಯಿತು. ಅವರು ಮಾಲಿಕರಂತೆಯೇ ್ರವಿರುವ ಮಾನವರೆಂದು ಅಂಗೀಕರಿಸಲ್ಪಟ್ಟಿತು. ಇತರ ಜನ ವಿಭಾಗಗಳು, ಗುಲಾಮರನ್ನು ಲಿಕರಿಗಿಂತ ಭಿನ್ನವಾದ ವರ್ಗವೆಂದು ಪರಿಗಣಿಸುತ್ತಿದ್ದುವು. ಗುಲಾಮಗಿರಿ ಮತ್ತು ನನೆಗಾಗಿ ಸೃಷ್ಟಿಸಲ್ಪಟ್ಟ ವಿಶಿಷ್ಟ ವರ್ಗ. ಆದ್ದರಿಂದಲೇ ಅವರನ್ನು ಶಿಕ್ಷಿಸುವುದಾಗಲೀ, ಸುವುದಾಗಲೀ, ಸುಡುವುದಾಗಲೀ ಅಥವಾ ಕಠಿಣ ಹಾಗೂ ಹೇಯ ಕೆಲಸವನ್ನು ರಿಗೆ ವಹಿಸುವುದಾಗಲೀ ಮಾಲಿಕರ ದೃಷ್ಟಿಯಲ್ಲಿ ಅಪರಾಧವಾಗಿರಲಿಲ್ಲ.[1]

ಇಸ್ಲಾಮ್ ಆತನನ್ನು ಈ ಮಟ್ಟದಿಂದ ಗೌರವಾರ್ಹವಾದ ಮಾನವೀಯ ೋದರತೆಯ ಉನ್ನತ ಪದವಿಗೇರಿಸಿತು. ಇದು ಕಾಲ್ಪನಿಕ ಲೋಕದ ಕಥೆಯಲ್ಲ. ್ಲಾಮ್ ಅದನ್ನು ಸಾಕ್ಷಾತ್ಕರಿಸಿ ತೋರಿಸಿದೆ. ಇಸ್ಲಾಮಿನ ಆರಂಭ ಕಾಲದಲ್ಲಿ ಾಮರೊಂದಿಗಿನ ವರ್ತನೆಯು ಇನ್ನಾವುದೇ ಪ್ರದೇಶದಲ್ಲಿದ್ದಿರದಂತಹ ಉನ್ನತ

---

1. ಗುಲಾಮರು ಅರ್ಥಾತ್: ಶೂದ್ರರು ದೇವನ ಪಾದಗಳಿಂದ ಸೃಷ್ಟಿಸಲ್ಪಟ್ಟವರೆಂದು ಹಿಂದುಗಳು ುತ್ತಾರೆ. ತನ್ನಿಮಿತ್ತ ಅವರನ್ನು ಸ್ವಾಭಾವಿಕವಾಗಿ ನೀಚರು ಮತ್ತು ಅಸ್ಪೃಶ್ಯರು ಎಂದು ುಸಲಾಗುತ್ತಿತ್ತು. ಈ ಸ್ಥಿತಿಯಿಂದ ವಿಮೋಚನೆ ಹೊಂದುವ ಯಾವ ಹಾದಿಯೂ ಇರಲಿಲ್ಲ. ಈ ಅವಮಾನ ಮತ್ತು ಹಿಂಸೆ ಸಹಿಸಿ ಜೀವಿಸಿದರೆ ಪ್ರಾಯಶಃ ಮುಂದಿನ ಜನ್ಮದಲ್ಲಾದರೂ ಉತ್ಕೃಷ್ಟ ುಯಾಗಿ ಹುಟ್ಟಬಹುದು. ಈ ಸಿದ್ಧಾಂತವು ಆ ಶಾಪಗ್ರಸ್ತ ಪದ್ಧತಿಯನ್ನು ಇನ್ನಷ್ಟು ಚನೀಯಗೊಳಿಸಿತು. ಹೀನಾಯ ಜೀವನವನ್ನು ಮೌನವಾಗಿ ಸಹಿಸಿ, ಅದರ ವಿರುದ್ಧ ಚಕಾರವೆತ್ತದಂತೆ ್ಯತ್ಮಿಕತೆಯ ಇನ್ನೊಂದು ಗುಲಾಮತನವು ಅವರ ಮೇಲೆ ಹೊರಿಸಲ್ಪಟ್ಟಿತು.

ಮಾನವೀಯ ಮಟ್ಟಕ್ಕೆ ತಲಪಿದ್ದಿತೆಂದು ನಿಷ್ಪಕ್ಷಮತಿಗಳಾದ ಐರೋಪ್ಯ ಬರಹಗಾ
ಒಪ್ಪಿಕೊಂಡಿದ್ದಾರೆ. ನಿರಾಕರಿಸಲಸಾಧ್ಯವಾದ ಐತಿಹಾಸಿಕ ಸತ್ಯಗಳು ಅದಕ್ಕೆ ಸಾಕ್ಷಿಯಾ
ವಿಮೋಚಿತ ಗುಲಾಮರು, ಸ್ವಾವಲಂಬನೆಗೆ ಬೇಕಾದ ಆರ್ಥಿಕ ಸ್ವಾತಂತ್ರ್ಯ ಹಾ
ಉದ್ಯೋಗಾವಕಾಶಗಳಿದ್ದರೂ ತಮ್ಮ ಪೂರ್ವ ಮಾಲಿಕರನ್ನು ತೊರೆಯ
ಒಪ್ಪುತ್ತಿರಲಿಲ್ಲವೆಂದು ಇತಿಹಾಸವು ಸಾರಿ ಹೇಳುತ್ತದೆ. ಅವರ ಪರಸ್ಪರ ಸಂಬಂ
ರಕ್ತ ಸಂಬಂಧದಂತೆ ಸುದೃಢವಾಗಿದ್ದಿತೆಂಬುದೇ ಅದಕ್ಕೆ ಕಾರಣ.

ಇಸ್ಲಾಮಿನ ಗುಲಾಮನು ಗೌರವಾರ್ಹ ಮಾನವನಾಗಿ ಮಾರ್ಪಟ್ಟನು. ಅ
ಸ್ಥಾನಮಾನಗಳಿಗೆ ಇಸ್ಲಾಮ್ ಸಂರಕ್ಷಣೆ ನೀಡಿತು. ಮಾತು-ಕೃತಿಗಳಿಂದ ಅದಕ್ಕೆ ಯಾ
ಧಕ್ಕೆಯೊದಗಿಸುವ ಅವಕಾಶವಿರಲಿಲ್ಲ. ಗುಲಾಮರೆಂದು ಅಭಿಸಂಬೋಧಿಸಬಾರದೆಂದು ಪ್ರವಾದಿ
ಆಜ್ಞಾಪಿಸಿದರು. ಗುಲಾಮತನದ ಹಳೆಯ ಸ್ಮರಣೆಗಳನ್ನು ಅಳಿಸುವ ಹಾಗೂ ಕುಟು
ಸಂಬಂಧವನ್ನು ಪ್ರತಿಬಿಂಬಿಸುವ ಶೈಲಿಯಲ್ಲಿ ಅವರನ್ನು ಅಭಿಸಂಬೋಧಿಸಬೇಕೆ
ಆದೇಶಿಸಿದರು. ಪ್ರವಾದಿ(ಸ) ಹೇಳಿದರು: "ಅವರನ್ನು ನಿಮ್ಮ ಅಧೀನಗೊಳಿಸಿದ ಅಲ್ಲಾಹ
ನಿಮ್ಮನ್ನು ಅವರ ಅಧೀನಗೊಳಿಸಲೂ ಶಕ್ತನಿದ್ದಾನೆ.[1] ಹಾಗಾದರೆ ಕೆಲವು ತಾತ್ಕಾ
ಹಿನ್ನೆಲೆಗಳಿಂದಾಗಿ ಅವರು ಗುಲಾಮರಾಗಿದ್ದಾರೆ. ನಾಳೆ ಇವರು ಇಂದಿನ ಮಾ
ಮಾಲಿಕರಾಗಲೂಬಹುದು! ತನ್ಮೂಲಕ ಮಾಲಿಕರ ಅಹಂಕಾರ-ದರ್ಪವನ್ನು ಇ
ಎಲ್ಲರನ್ನೂ ಬೆಸೆಯುವ ಮಾನವೀಯ ಸಂಬಂಧಕ್ಕೆ ಅವರನ್ನು ಮರಳಿಸಿತು. ಮಾನವೀ
ಸಮಾನತೆಯೇ ಪರಸ್ಪರರನ್ನು ಬೆಸೆಯುವ ಕೊಂಡಿಯೆಂದು ಕಲಿಸಿತು.

ಇಸ್ಲಾಮ್ ದೈಹಿಕ ಹಿಂಸೆಗಳಿಗೆ ತತ್ಸಮಾನ ಪ್ರತೀಕಾರವನ್ನು ನಿರ್ಣಯಿಸಿ
"ಯಾವನಾದರೂ ತನ್ನ ಗುಲಾಮನನ್ನು ವಧಿಸಿದರೆ ನಾವು ಆತನನ್ನೂ ವಧಿಸುತ್ತೇವೆ. ಗುಲಾ
ಮತ್ತು ಮಾಲಿಕನ ಪರಸ್ಪರ ಸಂಬಂಧವು ಕೇವಲ ಮಾನವೀಯ ಸಂಬಂಧವಾಗಿದೆಯೆಂ
ಈ ಘೋಷಣೆಯು ಸಾರುತ್ತದೆ. ತಾತ್ಕಾಲಿಕ ಕಾರಣಗಳಿಂದ ಉದ್ಭವಿಸಿರುವ ಈ ಸ್ಥಿತಿ
ಅವರ ಮೂಲಭೂತದ ಮಾನವೀಯ ಭಾವನೆಯಲ್ಲಿ ಯಾವ ಬದಲಾವಣೆಯ
ಮಾಡುವುದಿಲ್ಲ. ಆದ್ದರಿಂದ ಅವರ ಸುಭದ್ರ ಜೀವನಕ್ಕೆ ಅಗತ್ಯವಿರುವ ಸ
ಸಂರಕ್ಷಣೆಯನ್ನು ಒದಗಿಸಬೇಕೆಂದು ಅದು ಸ್ಪಷ್ಟಪಡಿಸುತ್ತದೆ. ಈ ಸಮಗ್ರ ಹಾ
ವ್ಯಾಪಕ ಸಂರಕ್ಷಣಾ ಪದ್ಧತಿಗಳು ಇತಿಹಾಸದಲ್ಲಿ ಗುಲಾಮಗಿರಿಗಾಗಿ ನಿರ್ಮಿಸಲ
ಇತರೆಲ್ಲಾ ಕಾನೂನು- ನಿಯಮಗಳಿಗಿಂತಲೂ ಅತ್ಯುತ್ಕೃಷ್ಟವಾಗಿದ್ದಿತು. ಇಸ್ಲಾಮಿಗಿ
ಮುಂಚೆ ಅಥವಾ ಅನಂತರ ಅಂತಹ ಉದಾತ್ತ ನಿಯಮಗಳು ಬೇರೆಲ್ಲಿಯೂ ಇರಲಿ

---

1. ಆಡಳಿತಗಾರರ ಕರ್ತವ್ಯಗಳ ಕುರಿತು ಇಮಾಮ್ ಗಝ್ಝಾಲಿಯವರು 'ಇ
ಉಲೂಮುದ್ದೀನ್'ನಲ್ಲಿ ಉಲ್ಲೇಖಿಸಿದ ಸುದೀರ್ಘ ಹದೀಸ್‌ನಿಂದ ಇದನ್ನು ಉದ್ಧರಿಸಲಾಗಿದೆ.
ಪ್ರವಾದಿವರ್ಯರ(ಸ) ಅಂತ್ಯೋಪದೇಶವೆಂದು ಅವರು ಹೇಳಿದ್ದಾರೆ.

ಪ್ತಿಕ್ರಮದ ವಿನಾ[1] ಗುಲಾಮನ ಮುಖಕ್ಕೆ ಕೇವಲ ಒಂದೇಟು ಹೊಡೆದರೂ, ಅದು ಲಾಮನ ವಿಮೋಚನೆಯ ಕಾನೂನುಬದ್ಧ ಕಾರಣವಾಗುವುದೆಂದು ಇಸ್ಲಾಮ್ ರ್ಣಯಿಸಿತು!

******

ಇನ್ನು ನಾವು ಗುಲಾಮರ ನೈಜ ವಿಮೋಚನೆಯ ಮುಂದಿನ ಹಂತವನ್ನು ೀಡೋಣ. ಈ ಹಿಂದೆ ಹೇಳಿರುವುದೆಲ್ಲವೂ ವಾಸ್ತವದಲ್ಲಿ ಗುಲಾಮರ ಮಾನಸಿಕ ಮೋಚನೆಗಾಗಿ ಕೈಕೊಂಡ ಕ್ರಮಗಳಾಗಿದ್ದುವು. ಆತನಿಗೆ ಆತನ ಮಾನವೀಯತೆ ಮರಳಿ ಠರೆಯಿತು. ಆತನಿಗೂ ಮಾಲಿಕನಿಗೂ ಮೂಲಭೂತವಾಗಿ ಯಾವ ವ್ಯತ್ಯಾಸವೂ ಲ್ಲವೆಂಬುದನ್ನು ಜ್ಞಾಪಿಸಿಕೊಟ್ಟು ಅವರೊಂದಿಗೆ ಮಾನವೀಯ ಗೌರವದಿಂದ ವಹರಿಸುವಂತೆ ಆಜ್ಞಾಪಿಸಿತು. ಸಾಮಾಜಿಕ ಜೀವನದಲ್ಲಿ ನೇರವಾಗಿ ವ್ಯವಹರಿಸುವ ್ವತಂತ್ರ್ಯವನ್ನು ನಿಷೇಧಿಸಲಾಗಿರುವ ಸ್ಥಿತಿಯು ತಾತ್ಕಾಲಿಕವಾಗಿದ್ದು, ಇತರೆಲ್ಲ ಮಾನವೀಯ ಕ್ಕುಗಳಿಗೆ ಆತ ಅರ್ಹನೆಂದು ಇಸ್ಲಾಮ್ ಬೋಧಿಸಿತು.

ಆದರೆ ಗುಲಾಮರ ಸುಧಾರಣಾ ಕಾರ್ಯವನ್ನು ಇಸ್ಲಾಮ್ ಇಲ್ಲಿಗೇ ನಿಲ್ಲಿಸಲಿಲ್ಲ. ಾಕೆಂದರೆ ಮಾನವನ ಸಂಪೂರ್ಣ ಸಮಾನತೆಯು ಇಸ್ಲಾಮಿನ ಅತೀ ದೊಡ್ಡ ಮೂಲ ್ಧಾಂತವಾಗಿದೆ. ಸಕಲ ಮಾನವರ ವಿಮೋಚನೆಯೇ ಅದರ ಧ್ಯೇಯ. ಆದ್ದರಿಂದ ಲಾಮರ ವಿಮೋಚನೆಗಾಗಿ ಅದು ವ್ಯಾವಹಾರಿಕ ವಿಧಾನಗಳನ್ನು ಅಳವಡಿಸಿಕೊಂಡಿತು. ದಕ್ಕಾಗಿ ಎರಡು ಮಾರ್ಗಗಳನ್ನು ಅಂಗೀಕರಿಸಿತು. ಸ್ವಾತಂತ್ರ್ಯ ದಾನ ಮತ್ತು ವಿಮೋಚನಾ ತ್ರ.

ಸ್ವಾತಂತ್ರ್ಯ ದಾನವೆಂದರೆ, ಮಾಲಿಕನು ತನ್ನ ಅಧೀನದಲ್ಲಿರುವ ಗುಲಾಮರನ್ನು ೀವ ಸಂಪ್ರೀತಿಯ ಬಯಕೆಯಿಂದ ಸ್ವತಂತ್ರಗೊಳಿಸುವುದು. ಇಸ್ಲಾಮ್ ಈ ವಿಧಾನಕ್ಕೆ ಚ್ಚು ಪ್ರೋತ್ಸಾಹ ನೀಡಿತು. ಪ್ರವಾದಿವರ್ಯರೇ(ಸ) ಅದರ ಪ್ರಪ್ರಥಮ ಾದರಿಯಾಗಿದ್ದಾರೆ. ತಮ್ಮ ಅಧೀನವಿದ್ದ ಗುಲಾಮರನ್ನು ಅವರು ವಿಮೋಚನೆಗೊಳಿಸಿದರು. ವರ ಈ ಮಾದರಿಯನ್ನು ಅವರ ಸಂಗಾತಿಗಳೂ ಪಾಲಿಸಿದರು. ಸತ್ಯನಿಷೇಧಿಗಳಾಗಿದ್ದ ರೈಷಿ ಮಾಲಿಕರ ಆಶ್ರಯದಲ್ಲಿದ್ದ ಗುಲಾಮರನ್ನು ಖರೀದಿಸಿ ಸ್ವತಂತ್ರಗೊಳಿಸಲಿಕ್ಕಾಗಿ ಬೂಬಕರ್‌ರವರು(ರ) ಅಪಾರ ಹಣ ವೆಚ್ಚ ಮಾಡಿದ್ದಾರೆ. ಬೈತುಲ್‌ಮಾಲ್ (ಸಾರ್ವಜನಿಕ ಜಾನೆ)ನಲ್ಲಿ ಮಿಗತೆ ಹಣವಿದ್ದಾಗಲೆಲ್ಲಾ ಅದನ್ನು ಗುಲಾಮರ ವಿಮೋಚನೆಗಾಗಿ ್ಯಯಿಸಲಾಗುತ್ತಿತ್ತು. ಯಹ್ಯಾ ಬಿನ್ ಸಈದ್ ಹೀಗೆಂದಿದ್ದಾರೆ: "ಉಮರ್ ಬಿನ್

---

1. ಶಿಸ್ತುಕ್ರಮಕ್ಕೂ ಕೆಲವು ಇತಿ-ಮಿತಿಗಳನ್ನು ಸೂಚಿಸಲಾಗಿದೆ. ಅದು ಮಾಲಿಕನು ತನ್ನ ಸ್ವಂತ ಕ್ಕಳಿಗೆ ನೀಡುವ ದಂಡನೆಗಿಂತ ಹೆಚ್ಚಾಗಬಾರದು.

ಅಬ್ದುಲ್ ಅಝೀಝ್ ಆಫ್ರಿಕಾದ ಝಕಾತ್ ವ್ಯವಹಾರಗಳಿಗಾಗಿ ನನ್ನನ್ನು ನೇಮಿಸಿದ
ನಾನು ಝಕಾತ್ ಸಂಗ್ರಹಿಸಿದ ಬಳಿಕ, ಅದರ ವಿತರಣೆಗಾಗಿ ಪ್ರಯತ್ನಿಸಿದಾಗ ಅ
ಸ್ವೀಕಾರಕ್ಕೆ ಒಬ್ಬನೇ ಒಬ್ಬ ಬಡವ ಕಂಡುಬರಲಿಲ್ಲ. ಉಮರ್ ಬಿನ್ ಅಬ್ದು
ಅಝೀಝ್‌ರು ಜನರನ್ನು ಅಷ್ಟೊಂದು ಶ್ರೀಮಂತಗೊಳಿಸಿದ್ದರು. ಆ ವೇಳೆ ಪ್ರಸ್ತು
ಹಣದಿಂದ ಗುಲಾಮರನ್ನು ಖರೀದಿಸಿ ವಿಮೋಚನೆಗೊಳಿಸಲಾಯಿತು."

ಹತ್ತು ಮುಸ್ಲಿಮರಿಗೆ ಓದು ಬರಹ ಕಲಿಸುವ ಗುಲಾಮರನ್ನು ಪ್ರವಾದಿ(
ಸ್ವತಂತ್ರಗೊಳಿಸುತ್ತಿದ್ದರು. ಅಥವಾ ಮುಸ್ಲಿಮ್ ಸಮುದಾಯದ ಬೇರೇನಾದರೂ ಸೇ
ಮಾಡಿದರೂ ಪ್ರವಾದಿವರ್ಯರು(ಸ) ಅವರನ್ನು ವಿಮೋಚನೆಗೊಳಿಸುತ್ತಿದ್ದರು. ಗುಲಾ
ವಿಮೋಚನೆಯನ್ನು ಕೆಲವು ಪಾಪಗಳ ಪ್ರಾಯಶ್ಚಿತ್ತವಾಗಿ ಕುರ್‌ಆನ್‌ನಲ್ಲಿ ನಿರ್ದೇಶಿಸಲ್ಪಟ್ಟಿ
ಪ್ರವಾದಿವರ್ಯರು(ಸ) ಮಾನವನ ಎಲ್ಲ ರೀತಿಯ ಪಾಪಗಳಿಗೆ ಪ್ರಾಯಶ್ಚಿತ್ತವಾ
ಗುಲಾಮರನ್ನು ಸ್ವತಂತ್ರಗೊಳಿಸುವಂತೆ ಪ್ರೇರೇಪಿಸುತ್ತಿದ್ದರು. ತನ್ಮೂಲಕ ಸಾಧ್ಯವಿದ್ದಷ
ಗುಲಾಮರನ್ನು ವಿಮೋಚನೆಗೊಳಿಸುವುದೇ ಅದರ ಉದ್ದೇಶ. ಪಾಪಗಳು ಸಾರ್ವಕಾಲಿಕವಾಗಿ
ಪ್ರವಾದಿಯವರು(ಸ) ಹೇಳಿರುವಂತೆ ಯಾರಿಂದಲೂ ತಪ್ಪು ಸಂಭವಿಸಬಹುದು!

ಆ ಪ್ರಾಯಶ್ಚಿತ್ತಗಳಲ್ಲೊಂದನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತ
ಅದರಿಂದ ಗುಲಾಮಗಿರಿಯ ಬಗ್ಗೆ ಇಸ್ಲಾಮಿನ ನಿಲುಮೆಯು ಸುಸ್ಪಷ್ಟವಾಗುವುದ
ಪ್ರಮಾದವಶಾತ್ ಓರ್ವ ಮುಸ್ಲಿಮನನ್ನು ವಧಿಸಿ ಬಿಟ್ಟರೆ, ಅದರ ಪ್ರಾಯಶ್ಚಿತ್ತವಾ
ವಧಿಸಲ್ಪಟ್ಟವನ ವಾರೀಸುದಾರರಿಗೆ ಒಪ್ಪಿಗೆಯಾಗುವಷ್ಟು ಪರಿಹಾರ ಧನವನ
ನಿಡುವುದರೊಂದಿಗೆ ಓರ್ವ ಗುಲಾಮನನ್ನೂ ಸ್ವತಂತ್ರಗೊಳಿಸಬೇಕೆಂದು ವಿಧಿಸಲಾಯಿತ

"ಯಾರಾದರೂ ಪ್ರಮಾದವಶಾತ್ ಸತ್ಯವಿಶ್ವಾಸಿಯೊಬ್ಬನನ್ನು ವಧಿಸಿ ಬಿಟ್ಟರೆ ಅದ
ಪ್ರಾಯಶ್ಚಿತ್ತವು ಒಬ್ಬ ಸತ್ಯವಿಶ್ವಾಸಿ ವ್ಯಕ್ತಿಯನ್ನು ದಾಸ್ಯದಿಂದ ಮುಕ್ತಗೊಳಿಸುವು
ಮತ್ತು ವಧಿಸಲ್ಪಟ್ಟವನ ವಾರೀಸುದಾರರು ಪರಿಹಾರಧನವನ್ನು ಕ್ಷಮಿಸದಿದ್ದರೆ ಅದನ
ಅವರಿಗೆ ಕೊಡುವುದು." *(ಅನ್ನಿಸಾ: 9*

ಇಲ್ಲಿ ಕೇವಲ ಒಂದು ಮಾನವ ಪ್ರಾಣವು ವಧಿಸಲ್ಪಟ್ಟಿದೆ. ನ್ಯಾಯೋಚಿ
ಕಾರಣವಿಲ್ಲದೆ ಅದು ಕುಟುಂಬಕ್ಕೂ ಸಮಾಜಕ್ಕೂ ನಷ್ಟಗೊಂಡಿದೆ. ಅದಕ್ಕೆ ಎರಡ
ವಿಧದ ಪರಿಹಾರಗಳನ್ನು ಇಸ್ಲಾಮ್ ನಿರ್ದೇಶಿಸಿದೆ: ಉಭಯ ಸಮ್ಮತವಾದ ಪ್ರಾಯಶ್ಚಿತ್ತ
ಮೂಲಕ ವಧಿಸಲ್ಪಟ್ಟವನ ಕುಟುಂಬಕ್ಕೂ, ಓರ್ವ ಮುಸ್ಲಿಮ್ ಗುಲಾಮನನ
ಸ್ವತಂತ್ರಗೊಳಿಸಿ, ಸಮಾಜಕ್ಕೂ ನಷ್ಟ ಪರಿಹಾರ ನೀಡುತ್ತದೆ! ಗುಲಾಮ ವಿಮೋಚನೆಯ
ಪ್ರಮಾದದಿಂದ ಕೊಲೆಯಾಗಿ ನಷ್ಟವಾದ ಪ್ರಾಣದ ಬದಲಿಗೆ ಇನ್ನೊಬ್ಬನಿಗೆ ಪ್ರಾ
ನೀಡುವುದಕ್ಕೆ ಸಮಾನವಾಗಿದೆ! ಅರ್ಥಾತ್ ಇಸ್ಲಾಮಿನ ದೃಷ್ಟಿಯಲ್ಲಿ ಗುಲಾಮತನವೆಂದ
ಮರಣ ಅಥವಾ ಮರಣ ಸಮಾನ. ಗುಲಾಮರ ಜೀವನ ಸುಭದ್ರತೆ ಮತ್ತು ಹಕ

ರಕ್ಷಣೆಯ ಸಕಲ ಏರ್ಪಾಡುಗಳನ್ನು ಮಾಡಿದ ಬಳಿಕವೂ ಹಾಗೆಂದೇ ಭಾವಿಸುತ್ತದೆ. ದ್ದರಿಂದಲೇ ಗುಲಾಮರನ್ನು ಸ್ವತಂತ್ರಗೊಳಿಸಿ ಗುಲಾಮರಿಗೆ 'ಜೀವನ ನೀಡುವ' ಾವೊಂದು ಅವಕಾಶವನ್ನೂ ಇಸ್ಲಾಮ್ ವ್ಯರ್ಥಗೊಳಿಸಲಿಲ್ಲ.

'ಸ್ವಾತಂತ್ರ್ಯ ದಾನ' ಪದ್ಧತಿಯಿಂದ ಹೆಚ್ಚಿನ ಗುಲಾಮರು ವಿಮೋಚನೆ ಗಳಿಸಿದರೆಂದು ತಿಹಾಸದಿಂದ ತಿಳಿದುಬರುತ್ತದೆ. ಇಸ್ಲಾಮಿ ಇತಿಹಾಸಕ್ಕಿಂತ ಮುಂಚೆ ಅಥವಾ ಅನಂತರ ತನಕ ಯಾವ ಸಮುದಾಯದ ಚರಿತ್ರೆಯಲ್ಲಿಯೂ ಇಷ್ಟೊಂದು ಗಣ್ಯ ಪ್ರಮಾಣದಲ್ಲಿ ಲಾಮರು ವಿಮೋಚನೆಗೊಂಡಿಲ್ಲ. ಕೇವಲ ಮಾನವೀಯ ನೀತಿಯೇ ಈ ವಿಮೋಚನೆಯ ೇರಕ ಶಕ್ತಿಯಾಗಿದ್ದಿತು. ದೇವಸಂಪ್ರೀತಿ ಗಳಿಕೆಯ ಮಾನಸಿಕ ಪ್ರೇರಣೆ- ಹೌದು ಕೇವಲ ವಸಂಪ್ರೀತಿ!

ಗುಲಾಮ ಮತ್ತು ಮಾಲಿಕನು ಪರಸ್ಪರ ಒಡಂಬಡಿಕೆಯಿಂದ ನಿರ್ಧರಿಸುವ ಮೋಚನಾ ಮೊತ್ತಕ್ಕೆ ಪ್ರತಿಯಾಗಿ ಸ್ವತಂತ್ರಗೊಳಿಸುವುದಕ್ಕೆ 'ವಿಮೋಚನಾ ಪತ್ರ'ವೆಂದು ಸರು. ಇದರಿಂದ ವಿಮೋಚನೆ ಅನಿವಾರ್ಯವಾಗುತ್ತದೆ. ಮಾಲಿಕನು ಅದನ್ನು ನಿರಾಕರಿಸುವ ಥವಾ ಅದರಲ್ಲಿ ಹಸ್ತಕ್ಷೇಪ ನಡೆಸುವ ಅವಕಾಶವಿಲ್ಲ. ನಿರ್ದಿಷ್ಟ ಮೊತ್ತವನ್ನು ದಾಯ ಮಾಡಿದ ಬಳಿಕ ವಿಮೋಚನೆಯನ್ನು ಮುಂದೂಡುವಂತೆಯೂ ಇಲ್ಲ. ಅನ್ಯಥಾ ಕಾರೀ ಅಧಿಕಾರಿಗಳು ಅಥವಾ ನ್ಯಾಯಾಧೀಶರು ಹಸ್ತಕ್ಷೇಪ ನಡೆಸಿ ಬಲ ಪ್ರಯೋಗಿಸಿ ಮೋಚನೆ ಜಾರಿಗೊಳಿಸುವರು. ವಿಮೋಚನಾ ಪತ್ರ ವ್ಯವಸ್ಥೆಯನ್ನು ರಚಿಸುವ ಮೂಲಕ ್ಲಾಮ್ ಧರ್ಮವು ಗುಲಾಮರ ವಿಮೋಚನೆಯ ಬಾಗಿಲನ್ನು ಸಂಪೂರ್ಣ ತೆರೆಯಿತು. ಾವನಾದರೊಬ್ಬ ಗುಲಾಮನ ಹೃದಯದಲ್ಲಿ ಸ್ವತಂತ್ರನಾಗಬೇಕೆಂಬ ಅಭಿಲಾಷೆ ಡಿಯೊಡೆದರೆ, ಆತನು ಮಾಲಿಕನ ಹೃದಯದಲ್ಲಿ ಎಂದಾದರೂ ಮೂಡಬಹುದಾದ ಾರ್ಯದ 'ಸ್ವಾತಂತ್ರ್ಯದಾನ' ದಿನಕ್ಕಾಗಿ ಕಾಯಬೇಕಾಗಿಲ್ಲ! ಯಾವನೇ ಗುಲಾಮನ ಮೋಚನೆಯಿಂದ ಇಸ್ಲಾಮಿ ರಾಷ್ಟ್ರದ ಸುಭದ್ರತೆಗೆ ಅಪಾಯವಿಲ್ಲವೆಂದಾದರೆ 'ವಿಮೋಚನಾ ತ್ರ' ಬರೆಯಲ್ಪಟ್ಟ ಪ್ರಥಮ ಕ್ಷಣದಿಂದಲೇ ಮಾಲಿಕನು ಅದನ್ನು ತಿರಸ್ಕರಿಸುವಂತಿಲ್ಲ. ಿವಾಯ ಆತನು ಮಾಲಿಕನಿಗಾಗಿ ಮಾಡುವ ಕೆಲಸವು ವೇತನಬದ್ಧವಾಗುವುದು. ಅಲ್ಲದೇ ವಿಮೋಚನಾ ಮೊತ್ತದ ಸಂಪಾದನೆಗಾಗಿ ಆತನಿಚ್ಛಿಸಿದರೆ ಬೇರೆಡೆಯೂ ಹೋಗಿ ಸ ಮಾಡಬಹುದು.

ಯೂರೋಪಿನಲ್ಲಿ ಈ ಸಂಪ್ರದಾಯವು 14ನೇ ಶತಮಾನದಲ್ಲಷ್ಟೇ ಜಾರಿಗೆ ಬಂತು. ್ಲಾಮ್ ಅದನ್ನು ಜಾರಿಗೊಳಿಸಿದ 700 ವರ್ಷಗಳ ಬಳಿಕ! ಅದರಲ್ಲಿಯೂ ಭಾರೀ ್ಯಾಸವಿದ್ದಿತು. ಇಸ್ಲಾಮಿನಲ್ಲಿ 'ವಿಮೋಚನಾ ಪತ್ರ' ಬರೆದುಕೊಟ್ಟ ಗುಲಾಮರಿಗೆ ಷ್ಟ್ರದ ಸಂರಕ್ಷಣೆಯಿತ್ತು. ಇಸ್ಲಾಮಿ ಪದ್ಧತಿಯ ವಿನಾ ಬೇರೆಲ್ಲಿಯೂ ಅಂತಹ ಲಭ್ಯವಿರಲಿಲ್ಲ. ಇದು ಪ್ರತಿಫಲಾಪೇಕ್ಷೆಯಿಲ್ಲದೇ ಸ್ವಯಂಪ್ರೇರಿತರಾಗಿ ದೇವಸಂಪ್ರೀತಿಯ

ಬಯಕೆ ಹಾಗೂ ದೇವೋಪಾಸನೆಯೆಂಬ ನೆಲೆಯಲ್ಲಿ ಗುಲಾಮರ ವಿಮೋಚನೆಗ
ಇಸ್ಲಾಮ್ ಮಾಡಿಟ್ಟ ಇತರ ಕ್ರಮಗಳಿಂದ ಹೊರತಾಗಿದೆ. ಝಕಾತ್ ವಿತರಣೆ ಮಾಡ
ವಿಭಾಗಗಳನ್ನು ವಿವರಿಸುತ್ತಾ ಕುರ್‌ಆನ್ ಹೀಗೆಂದಿದೆ: "ಝಕಾತ್ ದರಿದ್ರರಿಗ
ನಿರ್ಗತಿಕರಿಗೂ, ಅದರ ಕಾರ್ಯನಿರ್ವಾಹಕರಿಗೂ ... ಗುಲಾಮರ ವಿಮೋಚನೆಗಾಗಿಯ
ಇದೆ." (ಅತ್ತಾಬಃ6

'ವಿಮೋಚನಾಪತ್ರ' ಬರೆದ ಗುಲಾಮರಿಗೆ ತಮ್ಮ ಸಂಪಾದನೆಯಿಂದ ವಿಮೋಚ
ಮೊತ್ತವನ್ನು ಸಂಗ್ರಹಿಸಲಾಗದಿದ್ದರೆ, ಅವರಿಗೆ 'ಬೈತುಲ್‌ಮಾಲ್'ನಿಂದ ಝಕಾತ್‌ನ ಪಾ
ನೀಡಿ ನೆರವಾಗಬಹುದೆಂದು ಈ ಆಯತ್‌ನಿಂದ ವ್ಯಕ್ತವಾಗುತ್ತದೆ. ಈ ಎಲ್ಲ ವಿಧಾನಗಳಿ
ಗುಲಾಮರ ವಿಮೋಚನೆಗಾಗಿ ಇಸ್ಲಾಮ್ ರಚನಾತ್ಮಕ ಹೆಜ್ಜೆಯಿರಿಸಿತು. ತನ್ಮೂಲಕ ಇತಿಹಾಸ
ಸ್ಥಿತ್ಯಂತರಗಳಲ್ಲಿ ಕನಿಷ್ಠ 700 ವರ್ಷಗಳಷ್ಟು ಮುಂದೆ ಸಾಗಿತು. ಅದಲ್ಲದೇ ಸರಕಾ
ಸಂರಕ್ಷಣೆಯಂತಹ ಅತ್ಯಂತ ಕ್ರಾಂತಿಕಾರೀ ಪದ್ಧತಿಗಳನ್ನು ಅದು ಆವಿಷ್ಕರಿಸಿತು. ಲೋಕ
ಆಧುನಿಕ ಇತಿಹಾಸದ ಆರಂಭದಲ್ಲಷ್ಟೇ ಅದಕ್ಕೆ ತಲಪಿತು. ಆದರೆ ಇಸ್ಲಾಮ್, ಲೋಕ
ಇಂದಿಗೂ ಕಂಡರಿತಿಲ್ಲದ ಇತರ ಅನೇಕ ವಿಷಯಗಳನ್ನು ಜಾರಿಗೆ ತಂದಿ
ಗುಲಾಮರೊಂದಿಗೆ ಸಭ್ಯ ವರ್ತನೆ, ಸ್ವಯಂಪ್ರೇರಿತ ಸ್ವಾತಂತ್ರ್ಯದಾನ ಇತ್ಯಾದಿಗಳೆಲ್ಲ
ಅದರಲ್ಲಿ ಸೇರಿವೆ. ಆದರೆ ಈ ಎಲ್ಲ ಸುಧಾರಣಾ ಕಾರ್ಯಗಳಿಗೆ ಪಾಶ್ಚಾತ್ಯ ಲೋಕ
ಅನುಭವಿಸಿದಂತಹ ಆರ್ಥಿಕ-ರಾಜಕೀಯ ಪರಿಸ್ಥಿತಿಗಳ ಒತ್ತಡಗಳು ಕಾರಣವಾಗಿರಲೀ
ಆ ಕುರಿತು ನಾವು ಅನಂತರ ನೋಡೋಣ.

ಇಷ್ಟರಿಂದಲೇ, ಇಸ್ಲಾಮ್ ಆರ್ಥಿಕ ವಿಕಾಸ ಶೃಂಖಲೆಯ ಕೇವಲ ಒಂದು ಗೊಣ
ಹಾಗೂ ಅದರ ಐತಿಹಾಸಿಕ ನೀತಿಯು ಪೂರ್ಣಗೊಂಡಿದೆಯೆಂಬ ವಿರೋಧಾತ್ಮ
ಭೌತಿಕವಾದೀ ಕಮ್ಯೂನಿಸ್ಟರ ಕುಂಟು ನ್ಯಾಯ ಮತ್ತು ಮಿಥ್ಯ ವೈಜ್ಞಾನಿಕ ಸಿದ್ಧಾಂತಗ
ಮುರಿದು ಬೀಳುತ್ತವೆ! ಇದೋ ಆ ವಿಕಾಸಗಳನ್ನು ಇಸ್ಲಾಮ್ 7 ಶತಮಾನಗಳಷ್ಟು ಹಿಂ
ಹಾಕಿದೆ! ಇಸ್ಲಾಮ್ ಹಾಗೂ ಇತರೆಲ್ಲಾ ಪದ್ಧತಿಗಳು ಆಯಾ ಕಾಲದ ಕೇವಲ ಆರ್ಥಿ
ಪರಿಸ್ಥಿತಿಗಳ ಪರಿಣಾಮವೆಂದು ಅವರು ವಾದಿಸುತ್ತಾರೆ. ಯಾವುದೇ ಪದ್ಧತಿಯ ಆದ
ಸಿದ್ಧಾಂತಗಳು ಈ ಪರಿಣಾಮಕ್ಕೆ ಅನುಗುಣ ಮತ್ತು ಪೂರಕವಾಗಿರುವುದು. ಅದೆಂದ
ಆ ಪರಿಣಾಮವನ್ನು ಉಲ್ಲಂಘಿಸಲಾರದು. ಉಲ್ಲಂಘಿಸಲು ಅದಕ್ಕೆ ಸಾಧ್ಯವೂ ಇಲ್ಲವೆಂ
ಅವರು ಹೇಳುತ್ತಾರೆ.

ಆದರೆ ಅರೇಬಿಯ ಮತ್ತು ಲೋಕದ ಎಲ್ಲೆಡೆ ಜಾರಿಯಲ್ಲಿದ್ದ ಆರ್ಥಿಕ ಪರಿಸ್ಥಿತಿ
ಪ್ರವಾಹಕ್ಕೆ ವಿರುದ್ಧವಾಗಿ ಇಸ್ಲಾಮ್ ಸಾಗಿತ್ತು. ಇದು ಕೇವಲ ಗುಲಾಮರ ಸಮಸ್ಯೆ
ಸೀಮಿತವಲ್ಲ. ಆರ್ಥಿಕ ವಿತರಣಾ ಕ್ರಮ, ಆಡಳಿತಗಾರ ಮತ್ತು ಪ್ರಜೆ, ಕಾರ್ಮಿಕ ಮತ
ಮಾಲಿಕರ ಪರಸ್ಪರ ಸಂಬಂಧ ಮುಂತಾದುವುಗಳಲ್ಲಿಯೂ ಕ್ರಾಂತಿಕಾರೀ ಬದಲಾವಣೆಗಳ

ಡಿತು. ಇಸ್ಲಾಮ್ ಅದರ ಸಾಮಾಜಿಕ-ಆರ್ಥಿಕ ಪದ್ಧತಿಗಳನ್ನು ಸ್ವಂತಿಕೆ ಮತ್ತು ಂತ್ರ ರೂಪದಲ್ಲಿ ಅಭೂತಪೂರ್ವ ರೀತಿಯಲ್ಲಿ ಆವಿಷ್ಕರಿಸಿತು. ಇಂದಿಗೂ ಅದು ೀಕ ವಿಷಯಗಳಲ್ಲಿ, ಇತಿಹಾಸದಲ್ಲಿ ಸರಿಸಾಟಿಯಿಲ್ಲದೇ ಉಳಿದುಕೊಂಡಿದೆ.

******

ಇಲ್ಲಿ ಒಂದು ಸಂದೇಹ ಮೂಡುತ್ತದೆ. ಗುಲಾಮರ ವಿಮೋಚನೆಗಾಗಿ ಈ ದಿಟ್ಟ ಕ್ಷೆಯನ್ನಿರಿಸಿ, ಯಾವುದೇ ಹಿನ್ನೆಲೆ ಅಥವಾ ಒತ್ತಡಗಳ ಪ್ರಭಾವವಿಲ್ಲದೆ ಕ್ರಮ ಕೈಕೊಂಡ ಸ್ಲಾಮ್, ಗುಲಾಮತನದ ಉಪಾದಿಗಳನ್ನು ಸಂಪೂರ್ಣವಾಗಿ ಯಾಕೆ ಮುಚ್ಚಲಿಲ್ಲ? ಅದನ್ನು ಸ್ಟಕವಾಗಿಯೇ ಯಾಕೆ ಅಸಿಂಧುಗೊಳಿಸಲಿಲ್ಲ? ಹಾಗಿರುತ್ತಿದ್ದರೆ ಅದು ಮಾನವೀಯತೆಯ ಮೌಲ್ಯ ಸೇವೆಯಾಗುತ್ತಿರಲಿಲ್ಲವೇ? ಆ ಮೂಲಕ ಅದು ಸಮಗ್ರ, ಸಂದೇಹಾತೀತ ಮತ್ತು ವನಿಂದ ಅವತೀರ್ಣಗೊಂಡ ಒಂದು ಪದ್ಧತಿಯಾಗಿ ಅಂಗೀಕರಿಸಲ್ಪಡುತ್ತಿರಲಿಲ್ಲವೇ?

ಈ ಪ್ರಶ್ನೆಗೆ ಉತ್ತರ ನೀಡಲು ಅಂದಿನ ಸಾಮಾಜಿಕ-ಆರ್ಥಿಕ-ರಾಜಕೀಯ ರಂಗಗಳಲ್ಲಿ ಾಮರ ಪ್ರಭಾವ ಮತ್ತು ಮಾನಸಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾಗಿದೆ. ಪ್ರಸ್ತುತ ಷ್ಟವಿಕಾಂಶಗಳೇ ನಿರೀಕ್ಷಿತ ಗುಲಾಮಗಿರಿ ರದ್ಧತಿಯ ಘೋಷಣೆಯನ್ನು ತಡಗೊಳಿಸಿತು. ಸ್ತವದಲ್ಲಿ ಇಸ್ಲಾಮಿನ ನಿರೀಕ್ಷೆಗಿಂತ ಹೆಚ್ಚು ಪಥಭ್ರಷ್ಟತೆಯುಂಟಾಗದೆ ಇಸ್ಲಾಮ್ ರ ನೈಜ ಪಥದಲ್ಲಿ ಸಾಗುತ್ತಿದ್ದರೆ ಸಂಭವಿಸಬಹುದಾಗಿದ್ದುದಕ್ಕಿಂತ ಅದು ಎಷ್ಟೋ ವಾಗಿದೆಯೆಂಬ ವಸ್ತುಸ್ಥಿತಿಯನ್ನು ನಾವು ಪರಿಗಣಿಸಬೇಕು.

ಪ್ರಥಮವಾಗಿ ನಾವು ಒಂದು ವಿಷಯವನ್ನು ತಿಳಿದಿರಬೇಕು. ಇಸ್ಲಾಮಿನ ಆಗಮನ ದಲ್ಲಿ ಗುಲಾಮ ಸಂಪ್ರದಾಯವು ಸರ್ವವ್ಯಾಪಕ ಮತ್ತು ಸರ್ವಾಂಗೀಕೃತವಾಗಿದ್ದಿತು. ು ಸಮುದಾಯದ ಸಾಮಾಜಿಕ-ಆರ್ಥಿಕ ಬುನಾದಿಗಳ ಒಂದು ಭಾಗವೇ ಆಗಿತ್ತು. ನ್ನು ಯಾರೂ ದ್ವೇಷಿಸುತ್ತಿರಲಿಲ್ಲ. ಅಥವಾ ಅಪರಾಧವೆಂದು ಭಾವಿಸುತ್ತಿರಲಿಲ್ಲ. ಪದ್ಧತಿಯನ್ನು ಬದಲಾಯಿಸಬಹುದೆಂದು ಯಾರೂ ಊಹಿಸಿರಲಿಲ್ಲ. ಆದ್ದರಿಂದಲೇ ದುಷ್ಟ ಸಂಪ್ರದಾಯದ ಬದಲಾವಣೆಗೆ, ಅಥವಾ ಅದರ ನಿರ್ಮೂಲನಕ್ಕೆ ಸುದೀರ್ಘ ು ಮತ್ತು ವಿಶಿಷ್ಟ ನೀತಿಯ ಅಗತ್ಯವಿತ್ತು. ಮದ್ಯಪಾನದ ಸಂಪೂರ್ಣ ನಿಷೇಧಕ್ಕೆ ರ್ಷಗಳೇ ಬೇಕಾಯಿತು. ಆದರೆ ಮದ್ಯಪಾನವು ಕೇವಲ ವೈಯಕ್ತಿಕ ದುರ್ಗುಣವಾಗಿತ್ತು. ದಕ್ಕೆ ಸಾಮಾಜಿಕ ಸಂಬಂಧವಿದೆ ನಿಜ. ಆದರೆ ಇಸ್ಲಾಮಿಗಿಂತ ಮುಂಚೆಯೇ ಅರಬರಲ್ಲಿ ದ್ಯಪಾನಿಗಳಲ್ಲದವರೂ ಇದ್ದರು. ವಿವೇಕವಂತರಿಗೆ ಆ ದುರಭ್ಯಾಸ ಯೋಗ್ಯವಲ್ಲವೆಂದು ರು ನಂಬಿದ್ದರು. ಆದರೆ ಗುಲಾಮ ಸಂಪ್ರದಾಯವು ಸಾಮಾಜಿಕ ಜೀವನದಲ್ಲಿಯೂ, ಯಕ್ತಿಕ ಭಾವನೆಯಲ್ಲಿಯೂ ಅದಕ್ಕಿಂತ ಅಗಾಧ ಪ್ರಭಾವ ಬೀರಿತ್ತು. ಯಾಕೆಂದರೆ ು ವೈಯಕ್ತಿಕ, ಸಾಮಾಜಿಕ ಮತ್ತು ಆರ್ಥಿಕವೇ ಮುಂತಾದ ರಂಗಗಳನ್ನು ಒಳಗೊಂಡಿತ್ತು.

ಈ ಹಿಂದೆ ಹೇಳಿರುವಂತೆ ಅದನ್ನು ಯಾರೂ ವಿರೋಧಿಸುತ್ತಿರಲಿಲ್ಲ. ಆದ್ದರಿಂದ
ಅದರ ನಿರ್ಮೂಲನಕ್ಕೆ ಪ್ರವಾದಿಯವರ(ಸ) ಜೀವನಾವಧಿಗಿಂತಲೂ ಹೆಚ್ಚು ಕಾಲಬೇಕಾಗಿ
ಪ್ರವಾದಿಯ ಜೀವನಾವಧಿಯೆಂದರೆ, ಕಾನೂನು ಪದ್ಧತಿಗಳನ್ನೊಳಗೊಂಡ ದಿವ್ಯ ಸಂದೇ
ಕಾಲ. ಅಥವಾ ಸಂಕ್ಷಿಪ್ತವಾದ ಕೆಲವೇ ವರ್ಷಗಳು! ಅಲ್ಲಾಹನು ತನ್ನ ಸೃಷ್ಟಿಗಳ
ಚೆನ್ನಾಗಿ ಬಲ್ಲವನಾಗಿದ್ದಾನೆ. ಕಾನೂನಿನಿಂದ ಒಂದೇ ಬಾರಿಗೆ ಮದ್ಯನಿಷೆ
ಸಾಧ್ಯವಿರುತ್ತಿದ್ದರೆ, ಅವನು ಅದಕ್ಕಾಗಿ ಹಲವು ವರ್ಷ ಕಾಯುತ್ತಿರಲಿಲ್ಲ. ಹಾಗೆ
ಒಂದೇ ಡಂಗುರದಿಂದ ಗುಲಾಮತನವನ್ನು ಕೊನೆಗೊಳಿಸಬಹುದಾಗಿದ್ದರೆ ಆತನು ಅದ
ಅಷ್ಟೊಂದು ತಡಗೊಳಿಸುತ್ತಿರಲಿಲ್ಲ.

ಇಸ್ಲಾಮ್ ಸಾರ್ವತ್ರಿಕ ಮತ್ತು ಸಾರ್ವಕಾಲಿಕವಾಗಿದ್ದು ಚಿರಂತನ ಅಸ್ತಿತ
ಅಗತ್ಯವಿರುವ ಎಲ್ಲ ಮೌಲ್ಯಗಳನ್ನು ಒಳಗೊಂಡಿದೆಯೆಂಬುದರ ತಾತ್ಪರ್ಯವು,
ತಲೆಮಾರುಗಳಲ್ಲಿಯೂ ಉದ್ಭವಿಸುವ ಸಕಲ ಪರಿಸ್ಥಿತಿಗಳಿಗೂ ಬೇಕಾದ ಕಾನೂ
ತತ್ವಗಳು ಅದರಲ್ಲಿ ಉಲ್ಲೇಖಿಸಲ್ಪಟ್ಟಿದೆಯೆಂದಲ್ಲ. ತಲೆಮಾರುಗಳಲ್ಲಿ ಯಾವು
ಬದಲಾವಣೆಗೆ ಆಸ್ಪದವಿಲ್ಲದ ಸಮಸ್ಯೆಗಳ ಕುರಿತು ಮಾತ್ರವೇ ಹಾಗೆ ಮಾಡುತ್ತ
ಯಾಕೆಂದರೆ ಅವು ಮಾನವ ಜೀವನದಲ್ಲಿ ಆಳವಾಗಿ ಬೇರೂರಿರುವ ಸಮಸ್ಯೆಗಳಾಗಿ
ನೈಸರ್ಗಿಕ ಭಾವನೆಗಳು ಅದರಲ್ಲಿ ಸೇರಿವೆ. ಆದರೆ ನಿರಂತರ ಬದಲಾವಣೆಯಾಗ
ಪರಿಸ್ಥಿತಿಗಳಿಗೆ ಕೆಲವು ಸಾಮಾನ್ಯ ಬುನಾದಿಗಳನ್ನು ರೂಪಿಸಿದರೆ ಸಾಕಾಗುವುದು.
ಬುನಾದಿಗಳಿಗೆ ಬದ್ಧವಾಗಿದ್ದು ಮಾನವಕುಲವು ಕಾಲೋಚಿತ ಬದಲಾವಣೆ ಮ
ಸುಧಾರಣೆಗಳನ್ನು ಮಾಡಬಹುದು. ಇಸ್ಲಾಮ್ ಗುಲಾಮ ಸಂಪ್ರದಾಯದಲ್ಲಿ
ತತ್ವವನ್ನೇ ಅವಲಂಬಿಸಿದೆ. 'ಸ್ವಾತಂತ್ರ್ಯ ದಾನ' ಮತ್ತು 'ವಿಮೋಚನಾ ಪತ್ರ'ದ ಮೂ
ಅದು ಗುಲಾಮ ವಿಮೋಚನೆಯ ಬುನಾದಿಯನ್ನು ಹಾಕಿತು. ಅದನ್ನು ಅಂತಿಮವ
ಕೊನೆಗೊಳಿಸುವ ಸಂದರ್ಭವು ಬರುವ ತನಕ, ಈ ಅತಿ ಪ್ರಾಚೀನ ಜಟಿಲ ಸಮಸ್ಯೆಯಿ
ಮುಕ್ತಿ ಪಡೆಯುವ ಮಾರ್ಗವನ್ನು ಅದು ಮಾನವಕುಲಕ್ಕೆ ತೋರಿಸಿಕೊಟ್ಟಿತು.

ಇಸ್ಲಾಮ್ ಮಾನವ ಪ್ರಕೃತಿಯ ಬದಲಾವಣೆಗಾಗಿ ಆಗಮಿಸಿದ್ದಲ್ಲ. ಬದಲ
ಮಾನವನನ್ನು ಆತನ ಪ್ರಕೃತಿಗೆ ಬದ್ಧವಾಗಿರಿಸಿ ಸುಧಾರಿಸಲು ಆಗಮಿಸಿತು. ಒತ್ತ
ಉಚ್ಚಾಟನೆ ಅಥವಾ ದಮನವಿಲ್ಲದೇ ಅದನ್ನು ಗರಿಷ್ಠ ಉನ್ನತಿಗೇರಿಸುವುದೇ ಇಸ್ಲಾಮಿ
ಧ್ಯೇಯವಾಗಿದ್ದಿತು. ಕೆಲವು ವ್ಯಕ್ತಿಗಳ ಸುಧಾರಣೆಯಲ್ಲಿ ಅದು ಪವಾಡಗಳ ಮಟ್ಟ
ತಲಪಿತು. ಮಾನವೀಯ ಭಾವನೆಗಳ ಸುಧಾರಣೆಯಲ್ಲಿ ಇತಿಹಾಸದಲ್ಲಿ ಇನ್ನಾವು
ಪದ್ಧತಿಯು ಸಾಧಿಸದ ಮಹಾ ವಿಜಯವನ್ನು ಅದು ಸಾಧಿಸಿತು. ಆದರೆ ಈ ಅಪೂ
ಮಟ್ಟಕ್ಕೆ ಮಾನವರೆಲ್ಲರನ್ನೂ ಸುಧಾರಿಸುವುದು ಅದರ ಕರ್ತವ್ಯವಾಗಿರಲಿಲ್ಲ. ಅಲ್ಲಾಹ
ಬಯಕೆಯು ಹಾಗಿರುತ್ತಿದ್ದರೆ, ಆತನು ದೇವಚರರ ಮಾದರಿಯಲ್ಲಿಯೇ ಮಾನವರನ

ೃಷ್ಟಿಸುತ್ತಿದ್ದನು. ದೇವಚರರ ಕರ್ತವ್ಯಗಳನ್ನೇ ಮಾನವರಿಗೂ ನಿರ್ಣಯಿಸುತ್ತಿದ್ದನು. ದರೆ ಆತನು ಮಾನವರನ್ನು ಮಾನವನಾಗಿಯೇ ಸೃಷ್ಟಿಸಿದನು. ಆತನ ಸಾಮರ್ಥ್ಯಗಳನ್ನು ಲ್ಲಾಹ್ ಚೆನ್ನಾಗಿ ಬಲ್ಲನು. ಆತನ ಪಕ್ವತೆಗೆ ಬೇಕಾದ ಕಾಲವನ್ನೂ ಅರಿತಿದ್ದಾನೆ. ದೇನಿದ್ದರೂ, ಇಸ್ಲಾಮೇತರ ಲೋಕಕ್ಕಿಂತ 700 ವರ್ಷಗಳ ಮೊದಲೇ ಗುಲಾಮ ಮೋಚನಾ ಆಂದೋಲನವನ್ನು ಆರಂಭಿಸಿ, ಅರೇಬಿಯದಲ್ಲಿ ರೂಢಿಯಲ್ಲಿದ್ದ ಗುಲಾಮ ರಿಯ ಪ್ರಾಚೀನ ಮೂಲವನ್ನು ಅಳಿಸಿ ಹಾಕಿರುವುದೇ ಅದರ ಹಿರಿಮೆಗೆ ಸಾಕ್ಷಿಯಾಗಿದೆ. ುಂದೆ ಸಹಜವಾಗಿ ಇಸ್ಲಾಮಿ ಲೋಕದಲ್ಲಿ ಅದು ಶಾಶ್ವತವಾಗಿ ನಿಷೇಧಿಸಲ್ಪಡುತ್ತಿತ್ತು. ದರೆ ನಾಲ್ದೆಸೆಗಳಿಂದಲೂ ಗುಲಾಮತನದ ಹೊಸ ಹೊಸ ರೂಪಗಳು ಹುಟ್ಟಿಕೊಂಡುವು. ವುಗಳನ್ನು ಕೊನೆಗೊಳಿಸೋಣವೆಂದರೆ ಅವು ಇಸ್ಲಾಮಿನ ವ್ಯಾಪ್ತಿಯಲ್ಲಿರಲಿಲ್ಲ. ಅದು ಇಸ್ಲಾಮಿನ ಶತ್ರುಗಳಿಗೆ ಸಂಬಂಧಿಸಿದ ಅಥವಾ ಯುದ್ಧ ನಿಮಿತ್ತ ಉದ್ಭವಿಸುವ ುಲಾಮತನವಾಗಿದ್ದಿತು. ಆ ಕುರಿತು ಸ್ವಲ್ಪ ವಿವರವಾಗಿ ಆ ಮೇಲೆ ಚರ್ಚಿಸೋಣ.

ಎರಡನೆಯದಾಗಿ, ಸ್ವಾತಂತ್ರ್ಯವು ದಾನವಾಗಿ ದೊರೆಯಬೇಕಾದುದಲ್ಲ. ಅದು ಳಿಸಬೇಕಾದುದೆಂಬ ವಾಸ್ತವಿಕತೆಯನ್ನು ನಾವು ತಿಳಿದಿರಬೇಕು. ವಿಮೋಚನೆಯ ಡಂಗುರ ಾರಿ ಬಿಡುವುದರಿಂದ ಗುಲಾಮರ ನೈಜ ವಿಮೋಚನೆಯಾಗುವುದಿಲ್ಲ. ಇದಕ್ಕೆ ಅಮೇರಿಕದ ನುಭವವು ಸೂಕ್ತ ಉದಾಹರಣೆಯಾಗಿದೆ. ಅಬ್ರಹಾಮ್ ಲಿಂಕನ್‌ರ ಲೇಖನಿಯು ಒಮ್ಮೆ ಚಲಿಸುವುದರೊಂದಿಗೆ, ಒಂದೇ ಘೋಷಣೆಯಿಂದ ಎಲ್ಲ ಗುಲಾಮರಿಗೂ ಸ್ವಾತಂತ್ರ್ಯ ೀಡಲ್ಪಟ್ಟಿತು. ಆದರೆ ಅದರ ಅಂತಿಮ ಪರಿಣಾಮವೇನಾಯಿತು? ಕಾನೂನು ಮೂಲಕ ಾಹ್ಯವಾಗಿ ಸ್ವಾತಂತ್ರ್ಯ ನೀಡಲ್ಪಟ್ಟವರಿಗೆ ಅದನ್ನು ಅನುಭವಿಸಲಾಗಲಿಲ್ಲ. ಅವರು ತಮ್ಮ ಪೂರ್ವ ಮಾಲಿಕರ ಬಳಿಗೆ ಮರಳಿ ತಮ್ಮನ್ನು ಗುಲಾಮರಾಗಿ ಸ್ವೀಕರಿಸಬೇಕೆಂದು ಭಿನ್ನವಿಸಿದರು. ಯಾಕೆಂದರೆ ಮಾನಸಿಕವಾಗಿ ಆಗಲೂ ಅವರು ಸ್ವತಂತ್ರರಾಗಿರಲಿಲ್ಲ.

ಇದು ವಿಚಿತ್ರವೆಂದು ಭಾಸವಾದರೂ ಮನೋವಿಜ್ಞಾನದ ತತ್ವಗಳ ಆಧಾರದಲ್ಲಿ ಅವಲೋಕಿಸಿದರೆ ಅದರಲ್ಲೇನೂ ಅಚ್ಚರಿಯಿಲ್ಲ. ಗುಲಾಮನ ಮಾನಸಿಕ ಪ್ರಜ್ಞೆಯು ಸ್ವತಂತ್ರನ ಮಾನಸಿಕ ಪ್ರಜ್ಞೆಗಿಂತ ಭಿನ್ನವಾಗಿರುವುದು. ಇದಕ್ಕೆ ಪೌರಾಣಿಕರು ಭಾವಿಸಿದಂತೆ ಅವರು ಬೇರೊಂದು ವರ್ಗದಲ್ಲಿ ಸೃಷ್ಟಿಯಾಗಿದ್ದುದು ಕಾರಣವಾಗಿರಲಿಲ್ಲ. ಬದಲಾಗಿ ಅವ್ಯಾಹತ ಗುಲಾಮ ಜೀವನವು ಅವರ ಮಾನಸಿಕ ಸಾಮರ್ಥ್ಯಗಳ ನಿರ್ಮಾಣದಲ್ಲಿ ಬೀರಿದ್ದ ಪ್ರಭಾವವೇ ಕಾರಣವಾಗಿದ್ದಿತು. ತಲೆತಲಾಂತರಗಳ ಗುಲಾಮತನದಿಂದಾಗಿ ಅವರಲ್ಲಿ ವಿಧೇಯತೆ ಮತ್ತು ಅನುಸರಣೆಯ ಗುಣಗಳು ಆಳವಾಗಿ ಬೇರೂರಿದುವು. ಕರ್ತವ್ಯ ಮತ್ತು ಜವಾಬ್ದಾರಿಕೆಗಳನ್ನು ನಿರ್ವಹಿಸುವ ಮನೋಬಲ ನಾಸ್ತಿಯಾಯಿತು...

ಮಾಲಿಕನು ಆಜ್ಞಾಪಿಸುವ ಹೆಚ್ಚಿನ ಕೆಲಸಗಳನ್ನು ಗುಲಾಮನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದನು. ಆತನಿಗೆ ಅನುಸರಣೆ ಮತ್ತು ಪಾಲನೆ ಮಾತ್ರ ಸಾಧ್ಯ. ಜವಾಬ್ದಾರಿಕೆಯ

ಕ್ಷುಲ್ಲಕ ಕೆಲಸವನ್ನೂ ಆತನಿಂದ ನಿರ್ವಹಿಸಲಾಗುವುದಿಲ್ಲ. ಇದಕ್ಕೆ ಶಾರೀರಿಕ ದೌರ್ಬಲ್ಯ ಕಾರಣವಲ್ಲ. ಕೆಲವೊಮ್ಮೆ ಧೀಮಂತಿಕೆಯ ಕೊರತೆಯೂ ಇರುವುದಿಲ್ಲ. ಆದರೆ ಆತನಲ್ಲಿ ಹೊಣೆ ಹೊರುವ ಮಾನಸಿಕ ಬಲವಿರುವುದಿಲ್ಲ. ಅದರಲ್ಲಿರುವ ಕಾಲ್ಪನಿಕ ಗಂಡಾಂತರಗಳ ಬಗ್ಗೆ ಆತ ಯೋಚಿಸುತ್ತಾನೆ. ಅದು ಅನೇಕ ಜಟಿಲ ತಾಪತ್ರಯಗಳಿಗೆ ಕಾರಣವಾದೀತೆಂಬ ಶಂಕೆಯಿಂದ ಹೆದರುತ್ತಾನೆ. ಹೀಗೆ ತನ್ನ ಮಾನಸಿಕ ಗಂಡಾಂತರ ಮುಕ್ತಿಗಾಗಿ ಆತ ಅದರಿಂದ ಜಾರಿ ಕೊಳ್ಳುತ್ತಾನೆ!

ಪೌರ್ವಾತ್ಯ ಜೀವನವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಗುಲಾಮತನದ ಈ ಪರೋಕ್ಷ ಪ್ರಭಾವ ವ್ಯಕ್ತವಾಗುತ್ತದೆ. ಶಾಪಗ್ರಸ್ತ ಸಾಮ್ರಾಜ್ಯಶಾಹಿಗಳು ಪೌರ್ವಾತ್ಯರನ್ನು ಮಾನಸಿಕವಾಗಿ ಗುಲಾಮರನ್ನಾಗಿರಿಸಲಿಕ್ಕಾಗಿ ಹಾಗೆ ಮಾಡಿದ್ದರು. ಇಂದಿಗೂ ಪೌರ್ವಾತ್ಯ ರಾಷ್ಟ್ರಗಳಿಗೆ ಯೋಜನೆಗಳ ತಯಾರಿ ಮತ್ತು ತಾಂತ್ರಿಕ ಕಾಮಗಾರಿಗಳ ಉಸ್ತುವಾರಿಗೆ ಪಾಶ್ಚಾತ್ಯ ತಜ್ಞರೇ ಬೇಕು. ಇದಕ್ಕೆ ನಮ್ಮಲ್ಲಿರುವ ಪರಿಣತಿಯ ಅಭಾವ ಕಾರಣವಲ್ಲ. ಅವರ ಮಾನಸಿಕ ಗುಲಾಮತನದಿಂದ ನಾವಿನ್ನೂ ಮುಕ್ತರಾಗಿಲ್ಲ. ಯಾಕೆಂದರೆ ಅವರು ಕಲಿಸಿರುವುದೇ ಹಾಗೆ. ಉನ್ನತ ಜವಾಬ್ದಾರಿಯುತ ಹುದ್ದೆಗಳಿಗೆ ಪಾಶ್ಚಾತ್ಯರನ್ನೇ ನೇಮಿಸಿದರು. ಗುಲಾಮರಂತೆ ಆಜ್ಞಾಪಾಲನೆ ಮತ್ತು ಅನುಸರಣೆಯ ರಂಗಗಳಲ್ಲಿ ನಮ್ಮನ್ನು ನೇಮಿಸಿದರು. ಅದಕ್ಕೂ ನಾವು ಅಸಮರ್ಥರೆಂಬ ಭಾವನೆ ಕಾರಣವಲ್ಲ. ಬದಲಾಗಿ ಅದು ನಮ್ಮನ್ನು ಮಾನಸಿಕವಾಗಿ ಗುಲಾಮರನ್ನಾಗಿ ಮಾಡುವ ಉತ್ತಮ ವಿಧಾನವೆಂಬುದಾಗಿತ್ತು.

ಗುಲಾಮನ ಈ ಮನೋಭಾವವು ಆತನನ್ನು ಗುಲಾಮನಾಗಿಯೇ ಉಳಿಸಿಕೊಂಡಿತು. ರಾಷ್ಟ್ರವು ಸಾರುವ ಒಂದೇ ಡಂಗುರದಿಂದ ಈ ಮನೋಭಾವ ಅಳಿದು ಹೋಗದು. ಅದಕ್ಕಾಗಿ ಗುಲಾಮನ ಮನದಲ್ಲಿ ಅಂತರ್ಲೀನವಾಗಿರುವ ಸುಪ್ತ ಸಾಮರ್ಥ್ಯಗಳನ್ನು ಉತ್ತೇಜಿಸಿ ಬೆಳೆಸಬೇಕಾಗುವುದು. ವಿಕೃತ ಮತ್ತು ವಿರೂಪಗೊಂಡಿರುವ ಆತನ ಮನಸ್ಸನ್ನು ಸಂಪೂರ್ಣವಾಗಿ ಮಾನವೀಯ ನೀತಿಯಲ್ಲಿ ಕಟ್ಟಿ ಬೆಳೆಸಬೇಕು. ಇದನ್ನು ಬಹಳ ಸಾವಧಾನದಿಂದ ಸಾಧಿಸಬೇಕಾಗಿದೆ.

ಇಸ್ಲಾಮ್ ಹಾಗೆಯೇ ಮಾಡಿತು. ಅದು ಪ್ರಥಮತಃ ಗುಲಾಮರೊಂದಿಗೆ ಸದ್ವರ್ತನೆಯನ್ನು ಆರಂಭಿಸಿತು. ದಿಕ್ಕು ತಪ್ಪಿದ ಮನಸ್ಸನ್ನು ಪೂರ್ವಸ್ಥಿತಿಗೆ ಮರಳಿಸಲು ಸದ್ವರ್ತನೆಗೆ ಸಾಟಿಯಾದ ವಿಧಾನ ಬೇರೊಂದಿಲ್ಲ. ಗುಲಾಮನ ವಂಚಿತ ಮನಸ್ಸಿಗೆ ಅದು ಮನ್ನಣೆ ಮತ್ತು ಗೌರವವನ್ನು ತಂದು ಕೊಡುತ್ತದೆ. ಅದು ಮಾನವೀಯ ಅಸ್ತಿತ್ವದ ಪ್ರಜ್ಞೆಯನ್ನು ಆತನಲ್ಲಿ ಉದ್ದೀಪನಗೊಳಿಸುತ್ತದೆ. ಅದರಿಂದಲೇ ಆತನು ಸ್ವಾತಂತ್ರ್ಯದ ಸವಿಯನ್ನು ಅನುಭವಿಸುವಂತಾಗುತ್ತದೆ. ಆ ಬಳಿಕ, ಸ್ವಾತಂತ್ರ್ಯ ದೊರೆತರೆ ಅಮೇರಿಕದ ಗುಲಾಮರು ಮಾಡಿದಂತೆ, ಅದನ್ನು ಕೈಬಿಡಲು ಆತನು ಹಂಬಲಿಸಲಾರನು.

ಗುಲಾಮರೊಡನೆ ಉತ್ತಮವಾಗಿ ವರ್ತಿಸಿ ಅವರಿಗೆ ಮಾನವೀಯ ಅಸ್ತಿತ್ವವನ್ನು ಮರಳಿ ಕೊಡಿಸುವ ನಿಟ್ಟಿನಲ್ಲಿ ಇಸ್ಲಾಮ್ ಮಹಾ ಅದ್ಭುತವನ್ನೇ ಸಾಧಿಸಿದೆ. ನಾವು ಈ ಮೊದಲು ಪ್ರಸ್ತಾಪಿಸಿದ ಕುರ್‌ಆನ್ ವಾಕ್ಯ ಮತ್ತು ಪ್ರವಾದಿ ವಚನಗಳು ಅದಕ್ಕೆ ಉತ್ತಮ ಉದಾಹರಣೆಗಳಾಗಿವೆ. ಅದರ ಕೆಲವು ಉಜ್ವಲ ಮಾದರಿಗಳನ್ನು ನೋಡಿರಿ:

ಪ್ರವಾದಿವರ್ಯರು(ಸ) ಸ್ವತಂತ್ರ ಅರಬರು ಮತ್ತು ಗುಲಾಮರ ಮಧ್ಯೆ ಸಹೋದರತೆಯನ್ನು ಬೆಳೆಸುವುದನ್ನು ರೂಢಿಸಿದ್ದರು. ಹೀಗೆ ನೀಗ್ರೋಜಾತ ಬಿಲಾಲ್ ಬಿನ್ ರಬಾಹ್(ರ) ಮತ್ತು ಖಿಶಅಮಿಾ ವಂಶದ ಖಾಲಿದ್ ಬಿನ್ ರುವೈಹಾ(ರ)ರಲ್ಲಿಯೂ, ತನ್ನ ಗುಲಾಮ ಝೈದ್(ರ) ಮತ್ತು ಚಿಕ್ಕಪ್ಪ ಹಂಝ(ರ)ರಲ್ಲಿಯೂ, ಖಾರಿಜ್ ಬಿನ್ ಝೈದ್(ರ) ಮತ್ತು ಅಬೂಬಕರ್(ರ)ರಲ್ಲಿಯೂ ಪರಸ್ಪರ ಸಹೋದರ ಸಂಬಂಧವನ್ನು ಬೆಸೆದರು. ಈ ಸಹೋದರ ಬಾಂಧವ್ಯ ರಕ್ತಸಂಬಂಧಕ್ಕೆ ತುಲ್ಯವಾಗಿತ್ತು. ಅದು ದಾಯಾದಿ ಸಂಪತ್ತಿನಲ್ಲಿ ಸಹಭಾಗಿಯಾಗುವ ಮಟ್ಟಕ್ಕೂ ತಲಪಿತ್ತು.

ಅವರು ಅಷ್ಟಕ್ಕೇ ನಿಲ್ಲಿಸಲಿಲ್ಲ... ಅವರು ಚಿಕ್ಕಮ್ಮನ ಪುತ್ರಿ ಝೈನಬ್‌ರನ್ನು ತನ್ನ ವಿಮೋಚಿತ ಗುಲಾಮ ಝೈದ್‌ರಿಗೆ ವಿವಾಹ ಮಾಡಿ ಕೊಟ್ಟರು. ವಿವಾಹವು ಒಂದು ಹೃದಯಸ್ಪರ್ಶಿ ಘಟನೆಯಾಗಿದೆ. ಸ್ತ್ರೀಯರಲ್ಲಿ ಅದು ವಿಶೇಷವಾಗಿರುತ್ತದೆ. ಆಕೆಯು ತನಗಿಂತ ಯೋಗ್ಯನಾದ ಓರ್ವನನ್ನು ವಿವಾಹವಾಗಬಯಸುತ್ತಾಳೆ. ಸಂಪತ್ತು, ಸ್ಥಾನಮಾನ ಮತ್ತು ಕುಲದಲ್ಲಿ ತನಗಿಂತ ಕೆಳಗಿರುವ ಓರ್ವರನ್ನು ಪತಿಯಾಗಿ ಸ್ವೀಕರಿಸಲು ಆಕೆ ಒಪ್ಪಲಾರಳು. ಅದು ತನ್ನ ಗೌರವ ಮತ್ತು ಪ್ರತಿಷ್ಠೆಗಳಿಗೆ ಕುಂದೆಂದು ಆಕೆ ಭಾವಿಸುತ್ತಾಳೆ. ಆದರೆ ಪ್ರವಾದಿವರ್ಯರು(ಸ) ಅವೆಲ್ಲಕ್ಕಿಂತ ಉನ್ನತವಾದ ಧ್ಯೇಯವನ್ನು ಬಯಸಿದ್ದರು. ಅದು ಗುಲಾಮರನ್ನು ಮಾನವಕುಲವು ದೂಡಿ ಹಾಕಿದ್ದ ಕೆಸರ ಹೊಂಡದಿಂದ ಸಮಾಜದ ಅತ್ಯುನ್ನತ ಕುಟುಂಬವಾಗಿದ್ದ ಖುರೈಶರ ಮಟ್ಟಕ್ಕೆ ಏರಿಸುವುದಾಗಿತ್ತು.

ಪ್ರವಾದಿವರ್ಯರು(ಸ) ಗುಲಾಮರ ಸುಧಾರಣಾ ಕಾರ್ಯವನ್ನು ಅಲ್ಲಿಯೂ ಕೊನೆಗೊಳಿಸಲಿಲ್ಲ...

ಅವರು ಅರೇಬಿಯದ ಗಣ್ಯರಾಗಿದ್ದ ಅನ್ಸಾರ್ ಮತ್ತು ಮುಹಾಜಿರ್‌ಗಳನ್ನೊಳಗೊಂಡ ಮುಸ್ಲಿಮ್ ಸೇನೆಯ ದಂಡಾಧಿಪತಿಯಾಗಿ ತನ್ನ ಗುಲಾಮನಾಗಿದ್ದ ಝೈದ್‌ರನ್ನು(ರ) ನೇಮಿಸಿದರು. ಝೈದ್ ವಧಿಸಲ್ಪಟ್ಟಾಗ ಅವರ ಪುತ್ರ ಉಸಾಮರನ್ನು(ರ) ನೇಮಿಸಿದರು. ಆ ಸೇನೆಯಲ್ಲಿದ್ದ ಸೈನಿಕರು ಯಾರು? ಪ್ರವಾದಿಯ ಮಂತ್ರಿಗಳೂ ಅನಂತರ ಖಲೀಫರಾದ ಅಬೂಬಕರ್ ಮತ್ತು ಉಮರ್(ರ)ರಂತಹ ಗಣ್ಯರು! ಆಗ ಗುಲಾಮರಿಗೆ ಕೇವಲ ಮಾನವೀಯ ಸಮಾನತೆಯನ್ನು ಮಾತ್ರ ನೀಡಿದ್ದಲ್ಲ. "ಸ್ವತಂತ್ರರ" ಮುಂದಾಳ್ತನ ಮತ್ತು ನಾಯಕತ್ವವನ್ನು ಪ್ರವಾದಿವರ್ಯರು(ಸ) ಅವರಿಗೆ ನೀಡಿದರು. ಅದನ್ನೇ ಅವರು ಹೀಗೆ ಹೇಳಿದ್ದರು: "ದ್ರಾಕ್ಷೆಯ ಗೊಂಚಲಿನಂತೆ ತಲೆಯು ಜಡೆಗಟ್ಟಿದ್ದ ಓರ್ವ ನೀಗ್ರೋ

ಗುಲಾಮ ನಿಮ್ಮ ಆಡಳಿತಗಾರನಾಗಿ ನೇಮಿಸಲ್ಪಟ್ಟರೂ, ಆತನು ದಿವ್ಯ ಗ್ರಂಥಕ್ಕನುಸಾ ನ್ಯಾಯ ಪಾಲಿಸುವ ತನಕ, ನೀವು ಆತನನ್ನು ಅನುಸರಿಸಿರಿ." (ಬುಖಾ

ಈ ಘೋಷಣೆಯಿಂದ ಗುಲಾಮರನ್ನು ಇಸ್ಲಾಮ್, ರಾಷ್ಟ್ರದ ಅತ್ಯುನ್ನ ಪದವಿಗೇರಿಸಿತು. ಮುಸ್ಲಿಮರ ಖಲೀಫ ಸ್ಥಾನಕ್ಕೆ ತನ್ನ ಬಳಿಕ ಓರ್ವರನ್ನು ನಿಶ್ಚಯಿಸು ಸಮಸ್ಯೆ ಉದ್ಭವಿಸಿದಾಗ ಉಮರ್(ರ) ಹೇಳಿದರು: "ಅಬೂಹುದೈಫರ ಗುಲಾಮ ಸಾಲಿಮ ಬದುಕಿದ್ದರೆ, ನಾನು ಅವರನ್ನೇ ಖಲೀಫರಾಗಿ ನೇಮಿಸುತ್ತಿದ್ದೆ."

ಗುಲಾಮರನ್ನು ಗೌರವಿಸುವ ಮನೋಜ್ಞ ಮಾದರಿಯೊಂದನ್ನು ಉಮರ್(ರ ಪ್ರದರ್ಶಿಸಿದ್ದಾರೆ. ಯುದ್ಧಾರ್ಜಿತ ಸಂಪತ್ತಿನ ಬಗ್ಗೆ ಬಿಲಾಲ್‌ರು ಉಮರ್‌ರನ್ನು(ರ) ತೀವ್ರವಾ ವಿರೋಧಿಸಿದರು. ಅವರ ವಿರೋಧವು ತೀಕ್ಷ್ಣವಾಗಿ, ಅವರನ್ನು ಸ್ಥಿಮಿತದಲ್ಲಿಡುವ ಉಪಾಯಗಾಣ ಉಮರ್(ರ) ಹೀಗೆಂದರು:

"ಅಲ್ಲಾಹನೇ! ಬಿಲಾಲ್ ಮತ್ತು ಅವರ ಸಂಗಡಿಗರನ್ನು ಎದುರಿಸುವ ಶಕ್ತಿಯನ್ನು ನನ ನೀಡು"- ಅಧಿಕಾರರೂಢ ಖಲೀಫರು ಆಜ್ಞಾಪಿಸಿದರೆ ಅನುಸರಿಸಬಹುದೆಂಬ ಖಚಿ ಭರವಸೆಯಿದ್ದೂ ಅವರು ಹಾಗೆ ಹೇಳಿದ್ದರು!

ಇಸ್ಲಾಮ್ ಜಾರಿಗೊಳಿಸಿದ ಈ ಎಲ್ಲ ಮಾದರೀ ಕ್ರಮಗಳು, ನಾವು ಈ ಅಧ್ಯಾಯ ಆರಂಭದಲ್ಲಿ ಸೂಚಿಸಿದಂತೆ ಗುಲಾಮರ ಮಾನಸಿಕ ವಿಮೋಚನೆ ಮತ್ತು ಅವರಲ್ಲಿ ತಮ ವ್ಯಕ್ತಿತ್ವದ ಪ್ರಜ್ಞೆಯನ್ನು ಬೆಳೆಸಲಿಕ್ಕಾಗಿತ್ತು. ಅದು ವಿಮೋಚನೆಯನ್ನು ಸುಭದ್ರಗೊಳಿಸು ಏಕೈಕ ಉತ್ತಮ ವಿಧಾನವಾಗಿತ್ತು.

ಸ್ವಾತಂತ್ರ್ಯ ದಾನಕ್ಕಾಗಿ ಪ್ರೇರೇಪಿಸಿ, ಅದನ್ನು ಎಲ್ಲ ರೀತಿಯಿಂದಲೂ ಇಸ್ಲಾಮ ಪ್ರೋತ್ಸಾಹ ನೀಡಿತೆಂಬುದು ನಿಜ. ಆದರೆ ಅದು ಕೂಡಾ ಗುಲಾಮರಿಗೆ ಮಾನಸಿ ವಿಮೋಚನೆ ನೀಡುವ ತರಬೇತಿ ಕಾರ್ಯಕ್ರಮದ ಭಾಗವಾಗಿತ್ತು. ಸ್ವಾತಂತ್ರ್ಯ ಗಳಿಸಿ ತಮ್ಮ ಮಾಲಿಕರು ಅನುಭೋಗಿಸುವಂತಹ ಹಕ್ಕುಗಳನ್ನು ನಾವೂ ಅನುಭವಿಸಬಹುದೆಂ ಭರವಸೆಯನ್ನು ಅವರಲ್ಲಿ ಮೂಡಿಸುವುದೇ ಅದರ ಉದ್ದೇಶವಾಗಿತ್ತು. ತನ್ಮೂಲ ಅವರಲ್ಲಿ ಸ್ವಾತಂತ್ರ್ಯ ಪ್ರಜ್ಞೆ ಬೆಳೆಯುವುದು. ಸ್ವಾತಂತ್ರ್ಯದ ಹಾದಿಯಲ್ಲಿ ಎದುರಿಸಬೇಕಾ ಸಂಕಷ್ಟಗಳನ್ನು ಸಹಿಸುವ ಹಾಗೂ ಹೊಣೆ ವಹಿಸುವ ಧೈರ್ಯ ಹೆಚ್ಚುವುದು. ಅಂತಹ ವಾತಾವರಣದಲ್ಲಿ ಅವರಿಗೆ ಸ್ವಾತಂತ್ರ್ಯ ನೀಡಲು ಇಸ್ಲಾಮ್ ಆಸಕ್ತಿಯಿಂದ ಮುಂದಡಿಯಿಡುತ್ತದೆ. ವಿಮೋಚನಾ ಪತ್ರದ ಯೋಜನೆಯಿಂದ ಅದನ್ನೇ ನಿರೀಕ್ಷಿಸಲಾಗಿತ್ತು ಆ ಸಂದರ್ಭದಲ್ಲಿ ಅವರು ಸ್ವಾತಂತ್ರ್ಯಕ್ಕೆ ಅರ್ಹರೂ, ಅದರ ಸಂರಕ್ಷಣೆಗೆ ಯೋಗ್ಯರೂ ಆಗಿರುತ್ತಾರೆ.

ಜನರನ್ನು ಸ್ವಾತಂತ್ರ್ಯ ಸಂಪಾದನೆಗಾಗಿ ಪ್ರೇರೇಪಿಸಿ, ಅದಕ್ಕೆ ಬೇಕಾದ ವಾತಾವರಣವನ್ನು ನಿರ್ಮಿಸಿ, ಅವರು ಅದಕ್ಕೆ ಸ್ವಯಂ ಸಿದ್ಧರಾದ ಮರು ಕ್ಷಣದಲ್ಲಿಯೇ ಅವರಿಗೆ ಸ್ವಾತಂತ್ರ್ಯ

ೀಡುವಂತಹ ಪದ್ಧತಿಗೂ, ಸಮಸ್ಯೆ ಉಲ್ಬಣಗೊಂಡು, ಆರ್ಥಿಕ-ಸಾಮಾಜಿಕ ಕ್ರಾಂತಿಗಳು ುಗಿಲೆದ್ದು, ಸಾವಿರಾರು ಮಂದಿ ಪ್ರಾಣ ತೆತ್ತ ಬಳಿಕ ಗತ್ಯಂತರವಿಲ್ಲದೇ ಅರೆ ಮನಸ್ಸಿನಿಂದ ್ವತಂತ್ರ್ಯ ನೀಡುವಂತಹ ಪದ್ಧತಿಗೂ ಅಜಗಜಾಂತರವಿದೆ.

ಗುಲಾಮರ ಸಮಸ್ಯೆಯಲ್ಲಿ ಅವರ ಬಾಹ್ಯ ಮತ್ತು ಆಂತರಿಕ ವಿಮೋಚನೆಗಾಗಿ ೈಜವಾಗಿ ಪ್ರಯತ್ನಿಸಿರುವುದೇ ಇಸ್ಲಾಮಿನ ಅತೀ ದೊಡ್ಡ ಹೆಗ್ಗಳಿಕೆಯಾಗಿದೆ. ಅದು ಅಬ್ರಹಾಂ ಿಂಕನ್ ಮಾಡಿದಂತೆ ಮಾನಸಿಕ ಸುಧಾರಣೆಯ ಬುನಾದಿಯಿಲ್ಲದೇ ಒಂದೇ ಘೋಷಣೆಯಿಂದ ಮಸ್ಯೆಯ ಪರಿಹಾರಕ್ಕಾಗಿ ಪ್ರಯತ್ನಿಸಲಿಲ್ಲ. ಇದರಿಂದ ಮಾನವ ಸ್ವಭಾವದ ಕುರಿತು ಸ್ಲಾಮಿಗಿರುವ ಅಗಾಧ ಜ್ಞಾನ ಹಾಗೂ ಸಮಸ್ಯೆಗಳನ್ನು ಅತ್ಯುತ್ತಮ ರೀತಿಯಲ್ಲಿ ವ್ಯವಹರಿಸುವ ಾತುರ್ಯವೂ ವ್ಯಕ್ತವಾಗುತ್ತದೆ. ಸ್ವಂತ ಹಕ್ಕುಗಳ ಬಗ್ಗೆ ಗುಲಾಮರಲ್ಲಿಯೂ, ಗುಲಾಮರ ್ಥಾನಮಾನಗಳ ಬಗ್ಗೆ ಮಾಲಿಕರಲ್ಲಿಯೂ ತಿಳುವಳಿಕೆ ಮೂಡಿಸಿದ ಬಳಿಕ, ಸ್ನೇಹ-ಸೌಹಾರ್ದದ ಾತಾವರಣದಲ್ಲಿ ಇಸ್ಲಾಮ್ ಆ ಸಮಸ್ಯೆಯನ್ನು ಕೈಗೆತ್ತಿಕೊಂಡಿತು. ಇಲ್ಲಿ ಯುರೋಪಿನಲ್ಲಿ ಂಭವಿಸಿದಂತೆ, ದ್ವೇಷಾಸೂಯೆಯ ಅಗ್ನಿ ಜ್ವಾಲೆಯಿಂದ ಭುಗಿಲೆದ್ದ ಘೋರ ಸಂಘರ್ಷದ ಾತಾವರಣದಲ್ಲಿ ಗುಲಾಮರು ಹಕ್ಕುಗಳಿಗಾಗಿ ಮೊರೆಯಿಡುವ ವಾತಾವರಣವಿರಲಿಲ್ಲ. ಾಗೆಯೇ ಯೂರೋಪಿನಂತೆ ಭೀಕರ ಸಂಘರ್ಷಗಳಿಗೆ ಎಡೆಗೊಟ್ಟು ಮಾನವಕುಲದ ೆಳವಣಿಗೆಯನ್ನು ಕುಂಠಿತಗೊಳಿಸಲೂ ಕಾರಣವಾಗಲಿಲ್ಲ.

ಕೊನೆಯದಾಗಿ ಗುಲಾಮ ವಿಮೋಚನಾ ಪ್ರಕ್ರಿಯೆಯನ್ನು ಸಹಜ ಮತ್ತು ಾವಧಾನದಿಂದ ಅಂತಿಮ ಪರಿಣಾಮಕ್ಕೆ ತಲಪಿಸಲಿಕ್ಕಾಗಿ ಇಸ್ಲಾಮ್ ನಿರ್ಣಯಿಸಿದ ಅತೀ ೊಡ್ಡ ಬುನಾದಿಯೇನೆಂದು ನೋಡೋಣ.

ಗುಲಾಮತನದ ಮೂಲಗಳಲ್ಲಿ ಇಸ್ಲಾಮಿನ ನಿಯಂತ್ರಣಕ್ಕೆ ಮೀರಿದ ಒಂದು ಮೂಲದ ಹೊರತು ಇತರೆಲ್ಲವನ್ನೂ ಅದು ಮುಚ್ಚಿ ಬಿಟ್ಟಿತು. ಯುದ್ಧವೇ ಉಳಿದಿದ್ದ ಆ ಏಕೈಕ ಮೂಲ. ಆ ಕುರಿತು ಸ್ವಲ್ಪ ವಿವರವಾಗಿ ಹೇಳಬಯಸುತ್ತೇನೆ-

ಆ ಕಾಲದಲ್ಲಿ ಯುದ್ಧ ಕೈದಿಗಳನ್ನು ಗುಲಾಮರನ್ನಾಗಿ ಮಾಡುವ ಅಥವಾ ವಧಿಸುವ ಸಂಪ್ರದಾಯವಿದ್ದಿತು.[1] ಇದು ಪುರಾತನ ಮಾನವರಲ್ಲಿದ್ದ ಸಂಪ್ರದಾಯ. ಅದು ಇತಿಹಾಸದ ಯಾವ ಕಾಲದಲ್ಲೂ ಮಾನವಕುಲದ ಬೆನ್ನು ಬಿಡಲಿಲ್ಲ.

ಈ ಪದ್ಧತಿಯು ರೂಢಿಯಲ್ಲಿದ್ದ ಕಾಲದಲ್ಲಿಯೇ ಇಸ್ಲಾಮ್‌ನ ಉದಯವಾಯಿತು.

---

1. Universal History of the World ಎಂಬ ಇತಿಹಾಸ ವಿಜ್ಞಾನ ಕೋಶದ 2273ನೇ ಪುಟದಲ್ಲಿ ಹೀಗಿದೆ: "ಸನ್ 599ರಲ್ಲಿ ರೋಮನ್ ಚಕ್ರವರ್ತಿಯಾಗಿದ್ದ ಮೋರಿಸನು ತನ್ನ ಧನ ಮೋಹದಿಂದಾಗಿ - ವೈರಿಗಳ ವಶವಾಗಿದ್ದ ಕೆಲವು ಸಹಸ್ರ ಯುದ್ಧ ಕೈದಿಗಳನ್ನು ಪರಿಹಾರ ನೀಡಿ ಸ್ವತಂತ್ರಗೊಳಿಸಲು ನಿರಾಕರಿಸಿದ ಕಾರಣ ಅವರನ್ನು ಸಾಮೂಹಿಕವಾಗಿ ವಧಿಸಲಾಯಿತು."

ಮುಸ್ಲಿಮರು ಮತ್ತು ವೈರಿಗಳ ನಡುವೆ ಹಲವು ಯುದ್ಧಗಳು ನಡೆದುವು. ಮುಸ್ಲಿಮ ಕೈದಿಗಳನ್ನು ವೈರಿಗಳು ಗುಲಾಮರನ್ನಾಗಿ ಮಾಡುತ್ತಿದ್ದರು. ಅವರ ಸ್ವಾತಂತ್ರ್ಯವನ್ನು ಕಸಿದು ಆ ಕಾಲದ ಗುಲಾಮರೊಡನೆ ವರ್ತಿಸುತ್ತಿದ್ದ ರೀತಿಯಲ್ಲಿ ಅವರೊಡನೆ ಕ್ರೂರ ಹಾಗ ಕಿರಾತವಾಗಿ ವರ್ತಿಸಲಾಗುತ್ತಿತ್ತು. ಸ್ತ್ರೀಯರ ಮಾನಹಾನಿ ಮಾಡುತ್ತಿದ್ದರು. ಒಬ್ಬ ಮಹಿಳೆಯನ್ನು ತಂದೆ, ಮಗ ಮತ್ತು ಸ್ನೇಹಿತರು ಒಟ್ಟಿಗೆ ಹಂಚಿ ಕೊಳ್ಳುವ ಸಂಪ್ರದಾಯವಿತ್ತು ಅವರೊಂದಿಗೆ ಅಮಾನವೀಯವಾಗಿ ವರ್ತಿಸುತ್ತಿದ್ದರು. ಮಕ್ಕಳನ್ನು ಗುಲಾಮರನ್ನಾಗಿ ಮಾಡಿದ ಆ ಮಕ್ಕಳು ಅಭಿಶಪ್ತ ಗುಲಾಮಗಿರಿಯ ಕರಾಳತೆಯಲ್ಲಿಯೇ ಬೆಳೆಯಬೇಕಾಗಿತ್ತು.

ಆದ್ದರಿಂದ, ಸ್ವಾಧೀನವಾದ ಶತ್ರು ಸೈನಿಕರೆಲ್ಲರನ್ನೂ ವಿಮೋಚನೆಗೊಳಿ ಬಿಡುವುದೆಂಬುದು ಕೇವಲ ಇಸ್ಲಾಮಿನ ವ್ಯಾಪ್ತಿಗೊಳಪಟ್ಟ ವಿಷಯವಾಗಿರಲಿಲ್ಲ ಸ್ವಬಾಂಧವರು ಮತ್ತು ಅನುಯಾಯಿಗಳು ವೈರಿಗಳ ಕೈಗೆ ಸಿಲುಕಿ ಅವಮಾನ ಮತ್ತ ನರಕಯಾತನೆ ಅನುಭವಿಸುತ್ತಿರುವಾಗ ತಮ್ಮ ಯುದ್ಧ ಕೈದಿಗಳನ್ನು ಬಿಡುಗಡೆಗೊಳಿಸಿ ವೈರಿಗಳಿಗೇ ಅಸ್ತ್ರ ನೀಡುವುದು ಉತ್ತಮ ಯುದ್ಧ ತಂತ್ರವಲ್ಲ. ಇಲ್ಲಿ ತತ್ಸಮಾ ವರ್ತನೆಯೇ ನ್ಯಾಯವಾಗಿರುವುದು.

ಯುದ್ಧ ಕೈದಿಗಳನ್ನು ಗುಲಾಮರನ್ನಾಗಿಸುವ ಸಂಪ್ರದಾಯವು ವೈರಿಗಳಲಿ ರೂಢಿಯಲ್ಲಿರುವ ತನಕ ಇಸ್ಲಾಮಿಗೂ ಅದು ಅನಿವಾರ್ಯವಾಗಿತ್ತು. ಈ ಬಗ್ಗೆ ಅದ ಏನೂ ಮಾಡಲಾಗದ ಸ್ಥಿತಿಯಲ್ಲಿತ್ತು. ಯುದ್ಧ ಕೈದಿಗಳ ವಿಷಯದಲ್ಲಿ ಲೋಕ ಗುಲಾಮಗಿರಿಯ ವಿನಾ ಬೇರೆ ಸಂಪ್ರದಾಯವನ್ನು ಸಾರ್ವತ್ರಿಕವಾಗಿ ಅಂಗೀಕರಿಸುವಂತಾಗು ವರೆಗೆ ಈ ನೀತಿ ಅನಿವಾರ್ಯವಾಗಿತ್ತು. ಹಾಗಿದ್ದರೂ ಯುದ್ಧಗಳು ಮತ್ತು ಯುದ್ಧ ಕೈದಿಗಳ ಸಮಸ್ಯೆಯಲ್ಲಿ ಇಸ್ಲಾಮ್ ಮತ್ತು ಇತರ ಪದ್ಧತಿಗಳಲ್ಲಿದ್ದ ಭಾರೀ ಅಂತರವನ ನಾವು ಗಮನಿಸಬೇಕು.

ಇಸ್ಲಾಮಿ ಲೋಕದ ಹೊರಗೆ ನಡೆಯುತ್ತಿದ್ದ ಹಾಗೂ ಈಗಲೂ ನಡೆಯುತ್ತಿರು ಯುದ್ಧಗಳ ಮೂಲೋದ್ದೇಶವು ಕೊಳ್ಳೆ-ಶೋಷಣೆ ಮತ್ತು ಗುಲಾಮಗಿರಿಯಾಗಿದೆ. ಅನ್ಯರನ ಗುಲಾಮರನ್ನಾಗಿಸಲಿಕ್ಕಾಗಿಯೂ ದಿಗ್ವಿಜಯದಿಂದ ಹಿರಿಮೆ ಸಾಧಿಸಲಿಕ್ಕಾಗಿಯೂ, ಜನರನ ಉಪವಾಸವಿರಿಸಿ ಸಂಪತ್ತು ಮತ್ತು ಆದಾಯಗಳ ಶೋಷಣೆಗಾಗಿಯೂ ನಡೆಯುತ್ತಿದ್ದ ಯುದ್ಧಗಳು! ಯಾವನಾದರೊಬ್ಬ ರಾಜನ ಅಥವಾ ಮಂತ್ರಿಯ ಸ್ವಾರ್ಥ ಹಿತಾಸಕ್ತಿಯ ಈಡೇರಿಕೆಗಾಗಿ, ಆತನ ವೈಯಕ್ತಿಕ ಅಹಂಕಾರದ ಸಂತೃಪ್ತಿಗಾಗಿ, ಸೇಡು ತೀರಿಸಲಿಕ್ಕಾ ಹೀಗೆ ಕ್ಷುಲ್ಲಕ ಮತ್ತು ನೀಚ ಕಾರ್ಯಗಳಿಗಾಗಿ ಯುದ್ಧಗಳು ನಡೆಯುತ್ತಿದ್ದುವು ಗುಲಾಮರನ್ನು ತಾತ್ವಿಕ ಭಿನ್ನತೆ ಅಥವಾ ನೈತಿಕ, ವೈಚಾರಿಕ ಅಥವಾ ಮಾನಸಿಕ ನೀಚತೆಗಾ ಗುಲಾಮರನ್ನಾಗಿ ಮಾಡಿದ್ದಲ್ಲ. ಬದಲಾಗಿ ಅವರು ಯುದ್ಧದಲ್ಲಿ ಸೋತರೆಂಬುದೇ ಅದಕ ಕಾರಣವಾಗಿತ್ತು.

ಚಾರಿತ್ರ್ಯ ಹನನ, ನಗರಗಳ ಧ್ವಂಸ, ವಯೋವೃದ್ಧರು, ಸ್ತ್ರೀಯರು ಮತ್ತು ಮಕ್ಕಳ ತ್ಯೆ ಇತ್ಯಾದಿಗಳಿಂದ ಅವರನ್ನು ತಡೆಯುವ ಯಾವ ನ್ಯಾಯನೀತಿಯೂ ಆ ುದ್ಧಗಳಲ್ಲಿರಲಿಲ್ಲ. ಉದಾತ್ತ ಧ್ಯೇಯ ಅಥವಾ ತತ್ವಾದರ್ಶಗಳ ಬುನಾದಿಯಿಲ್ಲದ ುದ್ಧಗಳ ಮಟ್ಟಿಗೆ ಅವು ಸ್ವಾಭಾವಿಕವೂ ಹೌದು.

ಇಸ್ಲಾಮ್ ಅವೆಲ್ಲವನ್ನೂ ನಿಷೇಧಿಸಿತು. ದೇವಮಾರ್ಗದ ಯುದ್ಧದ ವಿನಾ ತರೆಲ್ಲಾ ರೀತಿಯ ಯುದ್ಧಗಳನ್ನು ನಿಷೇಧಿಸಿತು... ಮುಸ್ಲಿಮರನ್ನು ಆಕ್ರಮಿಸುವ, ಮತ್ತು ಲಾತ್ಕಾರದಿಂದ ಜನರು ಧರ್ಮ ನಂಬಿಕೆಗಳನ್ನು ತೊರೆಯುವಂತೆ ಮಾಡುವ ಹಾಗೂ ುಕ್ತ ಧರ್ಮ ಪ್ರಚಾರಗಳನ್ನು ತಡೆಯುವ ಎಲ್ಲ ರೀತಿಯ ದುಷ್ಟ ಶಕ್ತಿಗಳ ವಿರುದ್ಧ ುದ್ಧವನ್ನು ಅನುಮತಿಸಿತು...

"ನಿಮ್ಮೊಡನೆ ಯುದ್ಧ ಮಾಡುವವರೊಡನೆ ನೀವೂ ಅಲ್ಲಾಹನ ಮಾರ್ಗದಲ್ಲಿ ಆದರೆ ುದ್ಧ ಮಾಡಿರಿ. ಆದರೆ ನೀವು ಅತಿಕ್ರಮಿಸಬೇಡಿರಿ. ಅತಿಕ್ರಮಿಸುವವರನ್ನು ಅಲ್ಲಾಹನು ಚ್ಚುವುದಿಲ್ಲ." (ಅಲ್‌ಬಕರಃ: 190)

"ಭೂಮಿಯಲ್ಲಿ ಫಿತ್ನ (ಹಿಂಸೆ) ಕೊನೆಗೊಂಡು ಧರ್ಮವು ಸಂಪೂರ್ಣವಾಗಿ ಲ್ಲಾಹನಿಗಾಗಿ ಆಗುವ ತನಕ ಈ ಸತ್ಯನಿಷೇಧಿಗಳೊಡನೆ ಹೋರಾಡಿರಿ."

(ಅಲ್ ಅನ್‌ಫಾಲ್: 39)

ಯಾರ ಮೇಲೆಯೂ ಬಲಾತ್ಕಾರವಾಗಿ ಹೇರದ ಸ್ವತಂತ್ರ ಧರ್ಮಪ್ರಚಾರವೇ ಇದರ ುದ್ದೇಶ. "ದೀನ್‌ನ (ಧರ್ಮ) ವಿಷಯದಲ್ಲಿ ಯಾವುದೇ ಒತ್ತಾಯವಿಲ್ಲ, ಬಲಾತ್ಕಾರವಿಲ್ಲ. ರ್ಮಾರ್ಗವು ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ." (ಅಲ್ ಬಕರಃ: 256)

ಇಂದು ಇಸ್ಲಾಮೀ ಲೋಕದಲ್ಲಿ ತಮ್ಮ ಧರ್ಮದಲ್ಲಿಯೇ ಸ್ಥಿರವಾಗಿರುವ ುಹೂದಿಯರು ಮತ್ತು ಕ್ರೈಸ್ತರಿರುವುದೇ ಇಸ್ಲಾಮ್ ಖಡ್ಗದಿಂದ ವ್ಯಾಪಿಸಿದೆಯೆಂಬ ುದವನ್ನು ಹುಸಿಗೊಳಿಸುತ್ತದೆ[1]

ಜನರು ಇಸ್ಲಾಮ್ ಸ್ವೀಕರಿಸಿದರೆ ಅಥವಾ ಸನ್ಮಾರ್ಗ ಪಡೆದರೆ ಆ ಬಳಿಕ ಯುದ್ಧ ಥವಾ ಜಗಳವಾಗಲೀ, ಒಂದು ಸಮುದಾಯವು ಇನ್ನೊಂದನ್ನು ದಮನಿಸುವ ಯತ್ನವಾಗಲೀ ಇರುವುದಿಲ್ಲ. ಜಗತ್ತಿನಾದ್ಯಂತವಿರುವ ಮುಸ್ಲಿಮರಲ್ಲಿ ಯಾವ ಭಿನ್ನತೆಯೂ ಲ್ಲ. ಅರಬನಿಗೆ ಅರಬೇತರನಿಗಿಂತ ಯಾವ ಶ್ರೇಷ್ಠತೆಯೂ ಇಲ್ಲ, ದೇವಭಕ್ತಿಯ ವಿನಾ.

ಒಂದು ವಿಭಾಗವು ಇಸ್ಲಾಮ್ ಸ್ವೀಕರಿಸದೆ ಇಸ್ಲಾಮೀ ಪದ್ಧತಿಯ ಆಶ್ರಯದಲ್ಲಿ ಂತ ವಿಶ್ವಾಸಾದರ್ಶಗಳಿಂದ ಜೀವಿಸಬಯಸಿದರೆ ಅದಕ್ಕೂ ಅವಕಾಶವಿದೆ. ಅವರ ಮೇಲೆ ಾವುದೇ ವಿಧದ ಒತ್ತಡ ಅಥವಾ ಬಲಾತ್ಕಾರವನ್ನು ಹೇರುವುದಿಲ್ಲ. ಆದರೆ ಆತನ ್ರಾಣ, ಸೊತ್ತು ಮತ್ತು ಗೌರವಗಳಿಗೆ ಇಸ್ಲಾಮ್ ನೀಡುವ ಸಂರಕ್ಷಣೆಗಾಗಿ ಆತನು

[1] ಓರ್ವ ಪಾಶ್ಚಾತ್ಯ ಕ್ರೈಸ್ತರಾಗಿರುವ ಟಿ.ಡಬ್ಲ್ಯು. ಅರ್ನಾಳ್ಡ್ ಇದನ್ನು ಒಪ್ಪಿದ್ದಾರೆ.

'ಜಿಝಿಯಾ' ತೆರಬೇಕು. ಆತನ ಸಂರಕ್ಷಣೆಯ ಹೊಣೆಯನ್ನು ಮುಸ್ಲಿಮ
ವಹಿಸಿಕೊಳ್ಳದಿದ್ದರೆ ಆತನು 'ಜಿಝಿಯಾ' ನೀಡಬೇಕಾಗಿಲ್ಲ. ಆತನು ತೆತ್ತ 'ಜಿಝಿಯಾ'ವ
ಹಿಂತಿರುಗಿಸಬೇಕು[1] ಇನ್ನು ಅವರು ಇಸ್ಲಾಮನ್ನೂ, ಜಿಝಿಯಾವನ್ನೂ ಒಟ್ಟಿಗೆ ನಿರಾಕರಿಸಿದ
ಅವರ ಧೋರಣೆಯು ವೈರತ್ವವೆನಿಸುವುದು. ಆತ ಶಾಂತಿಯುತ ಆದರ್ಶ ಪ್ರಚಾರವ
ಒಪ್ಪುವುದಿಲ್ಲವೆಂದೇ ಭಾವಿಸಬೇಕಾಗುತ್ತದೆ. ತನ್ಮೂಲಕ ಅವರು ಸತ್ಯಪ್ರಕಾಶ ಮ
ಸನ್ಮಾರ್ಗ ಪ್ರಾಪ್ತಗೊಳಿಸಬಲ್ಲಂತಹ ಜನತೆಯನ್ನು ಬಲ ಮತ್ತು ಹಠ ಪ್ರಯೋಗ
ಅದರಿಂದ ತಡೆಯುತ್ತಿದ್ದಾರೆ.

ಅಂತಹ ಸಂದರ್ಭಗಳಲ್ಲಿ ಇಸ್ಲಾಮ್ ಯುದ್ಧಕ್ಕೆ ಮನ್ನಣೆ ನೀಡಿದೆ. ಆದರೆ ಎಚ್ಚ
ನೀಡದೆ, ಪೂರ್ವ ಘೋಷಣೆಯಿಲ್ಲದೆ ಅಥವಾ ಭೂಮಿಯಲ್ಲಿ ರಕ್ತಪಾತವನ್ನು ತಪ್ಪಿಸಿ ಶಾಂ
ಸ್ಥಾಪನೆಯ ಕೊನೆಯ ಅವಕಾಶವನ್ನು ನೀಡದೆ ಅದು ಯುದ್ಧಕ್ಕೆ ಧುಮುಕುವುದಿಲ್ಲ. "ಅವ
ಶಾಂತಿಗೆ ವಾಲಿದರೆ ನೀವೂ ಶಾಂತಿಗೆ ವಾಲಿರಿ. ಅಲ್ಲಾಹನಲ್ಲಿ ಭರವಸೆಯಿಡಿರಿ."
(ಅಲ್ ಅನ್‌ಫಾಲ್:6

ಇದು ಇಸ್ಲಾಮೀ ಯುದ್ಧದ ನೀತಿ. ಜಯಿಸುವ ಮೋಹ ಅಥವಾ ಶೋಷಣೆ
ಮನೋಭಾವವು ಅದಕ್ಕೆ ಪ್ರೇರಕವಲ್ಲ. ಓರ್ವ ಸ್ವೇಚ್ಛಾಧಿಪತಿಯ ಅಹಂಕಾರ ಅಥ
ಸೇನಾಧಿಪತಿಯ ರಕ್ತದಾಹಕ್ಕೆ ಅದರಲ್ಲಿ ಸ್ಥಾನವಿರಲಿಲ್ಲ. ಅದು ಮಾನವರನ
ಸನ್ಮಾರ್ಗದೆಡೆಗೊಯ್ಯುವ ಶಾಂತಿಯುತ ಮಾರ್ಗಗಳೆಲ್ಲ ತಡೆ ಹಿಡಿಯಲ್ಪಟ್ಟರೆ, ಮಾನವ
ಕ್ಷೇಮಾಭಿವೃದ್ಧಿಗಾಗಿ ದೇವಮಾರ್ಗದಲ್ಲಿ ನಡೆಯುವ ಯುದ್ಧವಾಗಿತ್ತು.

ಅದಲ್ಲದೇ ಪ್ರಸ್ತುತ ಯುದ್ಧಕ್ಕೂ ಕೆಲವು ನೀತಿ ನಿಯಮಗಳಿವೆ. ಪ್ರವಾದಿವರ್ಯರು(
ತಮ್ಮ ಅಂತ್ಯೋಪದೇಶದಲ್ಲಿ ಈ ರೀತಿ ಎಚ್ಚರಿಸಿದ್ದರು: "ನೀವು ಅಲ್ಲಾಹನ ನಾಮದಿಂ
ದೇವಮಾರ್ಗದಲ್ಲಿ ಹೋರಾಡಿರಿ. ನೀವು ದೇವನಿಷೇಧಿಗಳ ವಿರುದ್ಧ ಹೋರಾಡಿ

1. ಇದಕ್ಕೆ ಹಲವು ಉದಾಹರಣೆಗಳಿವೆ. ಆ ಪೈಕಿ ಎರಡು ಘಟನೆಗಳನ್ನು ಸರ್.ಟಿ.ಡಬ್ಲ್ಯು
ಅರ್ನಾಲ್ಡ್ ತನ್ನ 'ಪ್ರೀಚಿಂಗ್ ಆಫ್ ಇಸ್ಲಾಮ್' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ:

"ಹೀರಾದ ಪರಿಸರದವರೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಈ ರೀತಿ ನಮೂದಿಸಲಾಗಿತ್ತು
ನಿಮಗೆ ನಾವು ಸಂರಕ್ಷಣೆ ನೀಡಿದರೆ ನೀವು ಜಿಝಿಯಾ ಕೊಡಬೇಕು. ಇಲ್ಲದಿದ್ದರೆ ಕೊಡುವುದು ಬೇಡ
(P85

ಇನ್ನೊಂದೆಡೆ ಹೀಗಿದೆ: ಅರಬ್ ಸೇನಾಧಿಪತಿ ಅಬೂ ಉಬೈದರು ಆ ಸುದ್ದಿ ತಿಳಿದಾಗ (ರೋಮಿ
ಅಧಿಪತಿ ಯುದ್ಧಕ್ಕೆ ಹೊರಟಿರುವನೆಂಬ ಸುದ್ದಿ) ಸಿರಿಯಾದಲ್ಲಿ ಸ್ವಾಧೀನಪಡಿಸಿದ ಪ್ರದೇಶಗ
ಗವರ್ನರರಿಗೆ, ಅಲ್ಲಿ ಸಂಗ್ರಹಿಸಿದ ಜಿಝಿಯಾವನ್ನು ಮರಳಿಸುವಂತೆ ಆದೇಶಿಸಿದರು. ಅಲ್ಲಿನ ಜನರಿ
ಹೀಗೆಂದು ತಿಳಿಸಿದರು: ನಮ್ಮ ವಿರುದ್ಧ ಸೇನಾ ಸಿದ್ಧತೆ ನಡೆಯುತ್ತಿದೆಯೆಂಬ ಸುದ್ದಿ ತಿಳಿದು ನಿಮ್ಮಿಂ
ಸಂಗ್ರಹಿಸಿದ ಜಿಝಿಯಾವನ್ನು ನಾವು ಹಿಂತಿರುಗಿಸುತ್ತಿದ್ದೇವೆ. ಒಪ್ಪಂದದಂತೆ ನಾವು ನಿಮಗೆ ಸಂರಕ್ಷ
ನೀಡಬೇಕು. ಆದರೆ ಇಂದು ಅದು ನಮ್ಮಿಂದ ಸಾಧ್ಯವಿಲ್ಲದಂತಹ ಪರಿಸ್ಥಿತಿಯುಂಟಾಗಿದೆ. ಆದ್ದರಿಂ
ನಿಮ್ಮಿಂದ ವಸೂಲು ಮಾಡಿರುವುದನ್ನು ಹಿಂತಿರುಗಿಸಲಾಗುತ್ತಿದೆ. ಇನ್ನು, ಒಂದು ವೇಳೆ ಅಲ್ಲಾಹ
ನಮಗೆ ನೆರವಾದರೆ, ನಮ್ಮ ಒಪ್ಪಂದವನ್ನು ಆ ಮೇಲೆ ಊರ್ಜಿತಗೊಳಿಸೋಣ."

ಯುದ್ಧದ ವೇಳೆ ನೀವು ಅನ್ಯಾಯವೆಸಗಬೇಡಿರಿ. ಅಂಗಗಳನ್ನು ಛೇದಿಸಬೇಡಿರಿ. ಮಕ್ಕಳನ್ನು ವಧಿಸಬೇಡಿರಿ." (ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

ಮುಸ್ಲಿಮರನ್ನು ಆಕ್ರಮಿಸಲಿಕ್ಕಾಗಿ ಶಸ್ತ್ರಸಜ್ಜಿತವಾಗಿರುವ ಶತ್ರುವಿನ ವಿನಾ ಅನ್ಯರನ್ನು ವಧಿಸಬಾರದು. ಧ್ವಂಸ ಮತ್ತು ಮಾನಹಾನಿ ಮಾಡಬಾರದು. ಅಕ್ರಮ ಮತ್ತು ಗಲಭೆ ಹಬ್ಬಿಸಬಾರದು.

"ವಿನಾಶಕಾರಿಗಳನ್ನು ಅಲ್ಲಾಹನು ಖಂಡಿತವಾಗಿಯೂ ಮೆಚ್ಚುವುದಿಲ್ಲ."
(ಅಲ್‌ಕಸಸ್:77)

ಮುಸ್ಲಿಮರು ನಡೆಸಿದ ಎಲ್ಲ ಯುದ್ಧಗಳಲ್ಲಿಯೂ ಭವ್ಯ ಪರಂಪರೆಯನ್ನು ಉಳಿಸಿಕೊಂಡಿದ್ದರು. ಕೊನೆಯ ಶಿಲುಬೆ ಯುದ್ಧಗಳಲ್ಲಿಯೂ! ಹಿಂದೆ ತಮ್ಮನ್ನು ಸೋಲಿಸಿ, ಮಾನಹಾನಿ ಮಾಡಿ, ಪವಿತ್ರ ಮಸ್ಜಿದುಲ್ ಅಕ್ಸಾ ಮಸೀದಿಯನ್ನು ಆಕ್ರಮಿಸಿ, ಅದರಲ್ಲಿ ಅಭಯ ಪಡೆದಿದ್ದವರನ್ನು ವಧಿಸಿ ರಕ್ತದ ಹೊಳೆ ಹರಿಸಿದ್ದಂತಹ ವೈರಿಗಳನ್ನು ಸೋಲಿಸಿದ ಬಳಿಕವೂ ಮುಸ್ಲಿಮರು ತಮ್ಮ ಭವ್ಯ ಪರಂಪರೆಯನ್ನು ಉಳಿಸಿಕೊಂಡಿದ್ದರು. ವಾಸ್ತವದಲ್ಲಿ ಸಮಾನ ಪ್ರತೀಕಾರಕ್ಕೆ ಧರ್ಮವೇ ಅನುಮತಿ ನೀಡಿತ್ತು. "ನಿಮ್ಮ ಮೇಲೆ ಕೈ ಮಾಡಿದವರ ಮೇಲೆ ನೀವೂ ಅದೇ ರೀತಿಯಲ್ಲಿ ಕೈಮಾಡಿರಿ." (ಅಲ್‌ಬಕರಃ: 194)

ಆದರೂ ಇತಿಹಾಸದಲ್ಲಿ ಈ ತನಕ ಇನ್ನಾರಿಗೂ ಪ್ರದರ್ಶಿಸಲಾಗದಂತಹ ಅತ್ಯುನ್ನತ ಮಾದರಿಯನ್ನು ಮುಸ್ಲಿಮರು ಕೊಡುಗೆಯಿತ್ತರು. ಇದು ಯುದ್ಧದ ಉದ್ದೇಶಗಳು ಮತ್ತು ಯುದ್ಧ ನೀತಿಯಲ್ಲಿ ಮುಸ್ಲಿಮರು ಹಾಗೂ ಇತರರಲ್ಲಿದ್ದ ಮೂಲಭೂತ ವ್ಯತ್ಯಾಸವಾಗಿದೆ. ಸತ್ಯಮಾರ್ಗದ ವಿರುದ್ಧ ಬಲವಾಗಿ ಹೋರಾಡುವ ಹಾಗೂ ಬಹುದೇವಾರಾಧನೆ ಮತ್ತು ಮೂರ್ತಿಪೂಜೆಯನ್ನೇ ಬಿಗಿ ಹಿಡಿದಿರುವ ಜನರನ್ನು ಇಸ್ಲಾಮ್ ಅಪೂರ್ಣರೆಂದು ಭಾವಿಸಬಹುದಿತ್ತು; ಆ ಕಾರಣದಿಂದಲೇ ಅವರನ್ನು ಗುಲಾಮರನ್ನಾಗಿಯೂ ಮಾಡಬಹುದಾಗಿತ್ತು. ಆ ಜನರು ಸತ್ಯವನ್ನು ದರ್ಶಿಸಿಯೂ ಕತ್ತಲೆಯಲ್ಲಿಯೇ ದೃಢವಾಗಿ ನಿಲ್ಲಬೇಕಾದರೆ ಅವರ ಬುದ್ಧಿಗೆ ಏನೋ ಗಾಢ ಮಂಕು ಕವಿದಿರಬೇಕು. ಅವರ ಮಾನವೀಯ ಜೀವನವು ಅಪೂರ್ಣವಾಗಿರುವುದು. ಅವರು ಮಾನವೀಯ ಘನತೆ ಮತ್ತು ಮಾನವೀಯ ಸ್ವಾತಂತ್ರ್ಯಕ್ಕೆ ಅನರ್ಹರು.

ಆದರೆ ಇಸ್ಲಾಮ್ ಆ ಮಾರ್ಗವನ್ನೆಂದೂ ಅವಲಂಬಿಸಲಿಲ್ಲ. ಅವರನ್ನು ಅಪೂರ್ಣರೆಂದು ಗಣಿಸಿ ಗುಲಾಮರನ್ನಾಗಿ ಮಾಡಲಿಲ್ಲ. ಅದು ಕೇವಲ ಸಮಾನತೆಯಿಂದಲೇ ವರ್ತಿಸಿತು. "ಯುದ್ಧ ಕೈದಿಗಳ ಬಗ್ಗೆ ವೈರಿಗಳು ಬೇರೊಂದು ನೀತಿಯನ್ನು ಅಂಗೀಕರಿಸಲು ಸಿದ್ಧರಾಗುವ ತನಕ" ಎಂಬ ಗಡುವನ್ನೂ ಗುಲಾಮ ಸಂಪ್ರದಾಯಕ್ಕೆ ಇರಿಸಿತು. ಮುಸ್ಲಿಮ್ ಯುದ್ಧ ಕೈದಿಗಳು ಏಕಪಕ್ಷೀಯವಾಗಿ ಗುಲಾಮಗಿರಿಗೆ ಗುರಿಯಾಗದಿರಲಿಕ್ಕಾಗಿಯಷ್ಟೇ ಆ ತೀರ್ಮಾನ ಕೈಗೊಳ್ಳಲಾಗಿತ್ತು.

ಇಲ್ಲಿ ಎತ್ತಿ ಹೇಳಬೇಕಾದ ಇನ್ನೊಂದು ಪ್ರಾಮುಖ್ಯ ವಿಷಯವಿದೆ: "ನಿಶ್ಶರ್ತವಾಗಿ ಅಥವಾ ಪ್ರತಿಫಲ ಪಡೆದು ಬಿಟ್ಟುಬಿಡಿರಿ". (ಸೂರಃ ಮುಹಮ್ಮದ್) ಎಂಬ ಯುದ್ಧ ಕೈದಿಗಳಿಗೆ ಸಂಬಂಧಿಸಿದ ಏಕೈಕ ಕುರ್‌ಆನ್ ವಾಕ್ಯವು ಕೈದಿಗಳನ್ನು ಗುಲಾಮರಾಗಿಸುವ ವಿಷಯವನ್ನು ಪ್ರಸ್ತಾಪಿಸಿಲ್ಲ. ಅದೊಂದು ಶಾಶ್ವತ ನಿಯಮವಾಗದಿರಲೆಂಬುದೇ ಅದರ ಉದ್ದೇಶವಾಗಿದೆ. ಪ್ರಾಯಶ್ಚಿತ್ತ ಪಡೆದು ವಿಮೋಚಿಸುವ ಬಗ್ಗೆ ಹೇಳಿತು. ಪ್ರತಿಫಲ ಪಡೆಯದೆ ವಿಮೋಚಿಸುವ ಬಗ್ಗೆಯೂ ಹೇಳಿತು. ಯಾಕೆಂದರೆ ಅವು ಶೀಘ್ರ ಅಥವಾ ವಿದೂರ ಭವಿಷ್ಯದಲ್ಲಿ ಯುದ್ಧ ಕೈದಿಗಳೊಂದಿನ ವರ್ತನೆಯಲ್ಲಿ ಮಾನವಕುಲಕ್ಕೆ ಸೀಮಿತಗೊಳಿಸಬಯಸಿದ್ದ ಶಾಶ್ವತ ಕ್ರಮಗಳಾಗಿದ್ದುವು. ಮುಸ್ಲಿಮರು ಗುಲಾಮ ಸಂಪ್ರದಾಯವನ್ನು ನಿರ್ಬಂಧಿತ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿ ಅಂಗೀಕರಿಸಿದ್ದರೇ ವಿನಾ ನಿರ್ದಿಷ್ಟ ಇಸ್ಲಾಮೀ ಕಾನೂನಿಗೆ ಬದ್ಧರಾಗಿಯಲ್ಲ.

ಹಾಗೆಯೇ ಯುದ್ಧ ಕೈದಿಗಳನ್ನು ಗುಲಾಮರಾಗಿಸುವುದು ಇಸ್ಲಾಮಿನ ಸ್ಥಿರ ಸಂಪ್ರದಾಯವಾಗಿರಲಿಲ್ಲ. ಶಾಂತಿ ಕಾಲದಲ್ಲಿ ಅವರನ್ನು ಗುಲಾಮರನ್ನಾಗಿಸುತ್ತಿರಲಿಲ್ಲ. ಬದ್ರ್ ಯುದ್ಧದ ವೇಳೆ ಸೆರೆ ಸಿಕ್ಕಿದ ಕೈದಿಗಳನ್ನು ಪ್ರವಾದಿವರ್ಯರು(ಸ) ಯಾವ ಪ್ರತಿಫಲವನ್ನೂ ಪಡೆಯದೆ ಸ್ವತಂತ್ರಗೊಳಿಸಿದರು. ಇನ್ನು ಕೆಲವರನ್ನು ಪ್ರಾಯಶ್ಚಿತ್ತ ಪಡೆದು ವಿಮೋಚನೆಗೊಳಿಸಲಾಯಿತು.

ನಜ್ರಾನ್‌ನ ಕ್ರೈಸ್ತರಿಂದ 'ಜಿಝಿಯಾ' ಸ್ವೀಕರಿಸಿ, ಅವರ ಕೈದಿಗಳನ್ನು ಮರಳಿಸಲಾಯಿತು. ಭವಿಷ್ಯದಲ್ಲಿ ಮಾನವಕುಲವು ಗುಲಾಮಗಿರಿಯಂತಹ ಅಭಿಶಪ್ತ ಪದ್ಧತಿಯನ್ನು ಕೈಬಿಡುವಾಗ ಮಾದರಿಯಾಗಿರಲೆಂದು ಹಾಗೆ ಮಾಡಲಾಯಿತು. ಇದು ಉದ್ವೇಗದ ನಿಯಂತ್ರಣ ಹಾಗೂ ಯುದ್ಧ ವೇಳೆಯಲ್ಲಿಯೂ ಮಾನವೀಯತೆಗೇರಲು ಸಾಧ್ಯವಿರುವಂತಹ ಹಂತದಲ್ಲಿ ಸ್ವೀಕರಿಸಲಿಕ್ಕಾಗಿ ತೋರಿಸಿಕೊಟ್ಟ ಮಾದರಿಯಾಗಿದೆ. ಅಂತಹ ಸಂದರ್ಭಗಳಲ್ಲಿ ಇಸ್ಲಾಮ್ ಅದನ್ನು ಪ್ರಪ್ರಥಮವಾಗಿ ಸ್ವೀಕರಿಸುತ್ತದೆ. ಮತ್ತು ಪ್ರಥಮವಾಗಿ ಅದನ್ನು ಜಾರಿಗೊಳಿಸುತ್ತದೆ.

ಇಸ್ಲಾಮಿನ ಸ್ವಾಧೀನವಿದ್ದ ಕೈದಿಗಳೊಡನೆ ಈ ಹಿಂದೆ ವಿವರಿಸಿದಂತೆ ಗೌರವಾರ್ಹವಾಗಿ ಮತ್ತು ಮಾನವೀಯತೆಯಿಂದ ವರ್ತಿಸಲಾಗುತ್ತಿತ್ತೆಂಬುದನ್ನೂ ನಾವಿಲ್ಲಿ ಜ್ಞಾಪಿಸಬೇಕು. ಅವರು ಹಿಂಸೆ ಅಪಮಾನಗಳನ್ನು ಅನುಭವಿಸಬೇಕಾಗಿಲ್ಲ. ಅವರ ಮನಸ್ಸು ಸ್ವಾತಂತ್ರ್ಯಕ್ಕಾಗಿ ಹಂಬಲಿಸುವಾಗ, ಅವರು ಅದರ ಜವಾಬ್ದಾರಿಕೆಗಳನ್ನು ಸ್ವಯಂ ವಹಿಸಿಕೊಳ್ಳಲು ಸಿದ್ಧರಾದೊಡನೆಯೇ ವಿಮೋಚನೆಯ ಕವಾಟವನ್ನು ಅವರಿಗಾಗಿ ತೆರೆಯುತ್ತದೆ. ಅವರಲ್ಲಿ ಹೆಚ್ಚಿನವರು ಕೈದಿಗಳಾಗಿ ಸೆರೆ ಸಿಕ್ಕುವುದಕ್ಕಿಂತ ಮುಂಚೆಯೂ ಸ್ವತಂತ್ರರಾಗಿರಲಿಲ್ಲವೆಂಬುದು ಬೇರೆ ವಿಷಯ. ಮುಸ್ಲಿಮರ ವಿರುದ್ಧ ಯುದ್ಧಕ್ಕಾಗಿ ಕಳುಹಿಸಲ್ಪಟ್ಟವರಲ್ಲಿ ಹೆಚ್ಚಿನವರು ರೋಮ್ ಮತ್ತು ಪರ್ಶಿಯನರ ಗುಲಾಮರೇ ಆಗಿದ್ದರು.

ಇಸ್ಲಾಮ್ ಸ್ತ್ರೀಯರ ಮಾನ-ಮರ್ಯಾದೆಗಳನ್ನು ಗುಲಾಮತನದಲ್ಲಿಯೂ ಗೌರವಿಸಿತು.

ಇಸ್ಲಾಮೇತರ ರಾಷ್ಟ್ರಗಳಲ್ಲಿದ್ದಂತೆ ಆಕೆಯನ್ನು ಕಂಡವರೆಲ್ಲರ ಕಾಮಶಮನಕ್ಕಾಗಿ ಬಳಸಿ, ಅವಳ ಅಭಿಮಾನವನ್ನು ಛಿದ್ರಗೊಳಿಸಲು ಇಸ್ಲಾಮ್ ಅನುಮತಿಸಲಿಲ್ಲ. ಅವರನ್ನು ಕೇವಲ ಅವರ ಯಜಮಾನರ ಒಡೆತನಕ್ಕೆ ಬಿಟ್ಟಿತು. ಆತನ ವಿನಾ ಆಕೆಯೊಂದಿಗೆ ಇನ್ನಾರೂ ಸಂಬಂಧ ಬೆಳೆಸಬಾರದು. 'ವಿಮೋಚನಾಪತ್ರ' ಬರೆದು ಸ್ವಾತಂತ್ರ್ಯ ಪಡೆಯುವ ಹಕ್ಕನ್ನು ಅವರಿಗೂ ನೀಡಿತು. ಹಾಗೆಯೇ ಯಜಮಾನನಿಂದ ಆಕೆಗೆ ಮಗು ಹುಟ್ಟಿದರೂ ಆಕೆ ಸ್ವತಂತ್ರಳಾಗುವಳು. ಆಕೆಯ ಆ ಮಗುವೂ ಸ್ವತಂತ್ರವಾಗುವುದು. ಇಸ್ಲಾಮ್ ಅಜ್ಞಾಪಿಸಿದ ಸದ್ವರ್ತನೆಗಳೆಲ್ಲವೂ ಅವರಿಗೂ ದೊರೆಯುತ್ತಿತ್ತು.

*****

ಇದು ಇಸ್ಲಾಮಿನ ಗುಲಾಮ ಸಂಪ್ರದಾಯದ ಕಥೆ. ಮಾನವೇತಿಹಾಸದ ಉಜ್ವಲ ಅಧ್ಯಾಯ. ವಸ್ತುತಃ ಒಂದು ಬುನಾದಿಯೆಂಬ ನೆಲೆಯಲ್ಲಿ ಗುಲಾಮತನವನ್ನು ಇಸ್ಲಾಮ್ ಅಂಗೀಕರಿಸಲಿಲ್ಲ. ಗುಲಾಮರ ವಿಮೋಚನೆಗಾಗಿ ಅದು ನಾನಾ ರೀತಿಯಿಂದ ಪ್ರಯತ್ನಿಸಿರುವುದೇ ಅದಕ್ಕೆ ಸಾಕ್ಷಿಯಾಗಿದೆ. ಅದರ ಮೂಲವನ್ನೇ ಅಳಿಸಲಿಕ್ಕಾಗಿ ಇಸ್ಲಾಮ್ ಗರಿಷ್ಠ ಪ್ರಯತ್ನ ನಡೆಸಿತು. ಇಸ್ಲಾಮ್ ಏಕಪಕ್ಷೀಯವಾಗಿ ನಿರ್ಧರಿಸಲಾಗದ ಹಾಗೂ ಅದರ ಹತೋಟಿಯಲ್ಲಿಲ್ಲದ ಅನಿವಾರ್ಯ ಪರಿಸ್ಥಿತಿಯಿದ್ದಿತು. ಅದು ಇಸ್ಲಾಮಿನ ಹತೋಟಿಯಲ್ಲಿಲ್ಲದ ರಾಷ್ಟ್ರಗಳು ಮತ್ತು ಜನತೆಗೆ ಸಂಬಂಧಿಸಿದ ಸಮಸ್ಯೆಯಾಗಿತ್ತು. ಅವರು ಯುದ್ಧದಲ್ಲಿ ಸೆರೆಸಿಕ್ಕಿದ ಮುಸ್ಲಿಮ್ ಕೈದಿಗಳನ್ನು ಗುಲಾಮರನ್ನಾಗಿಸಿ ಕ್ರೂರವಾಗಿ ಹಿಂಸಿಸುತ್ತಿದ್ದರು. ಆದ್ದರಿಂದ (ಗುಲಾಮರನ್ನು ಹೀನವಾಗಿ ನಡೆಸಿಕೊಳ್ಳದೆ, ಗುಲಾಮರನ್ನಾಗಿ ಮಾಡುವ ತತ್ವದ ಮಟ್ಟಿಗಾದರೂ) ತತ್ಸಮಾನ ನೀತಿಯನ್ನು ಅಂಗೀಕರಿಸಲು ಅದು ನಿರ್ಬಂಧಿತವಾಯಿತು. ಗುಲಾಮಗಿರಿಯ ಸಂಪೂರ್ಣ ರದ್ದತಿಗೆ ಇಸ್ಲಾಮಿಗೆ ತಡೆಯಾಗಿದ್ದ ಆ ಏಕೈಕ ಉಪಾದಿಯನ್ನು ಕೊನೆಗೊಳಿಸಲು ಲೋಕದ ಇತರ ಶಕ್ತಿಗಳ ಸಹಕಾರವೂ ಅಗತ್ಯವಿತ್ತು. ಆ ಸಹಕಾರ ದೊರೆತ ಕ್ಷಣದಲ್ಲಿಯೇ ಇಸ್ಲಾಮ್ ಘಂಟಾಘೋಷವಾಗಿ ಸಾರಿರುವ ಸರ್ವಸಮಾನತೆ ಮತ್ತು ಸ್ವಾತಂತ್ರ್ಯದ ತತ್ವಕ್ಕೆ ಮರಳುವುದು.

ಮುಸ್ಲಿಮ್ ಲೋಕದಲ್ಲಿ ವಿವಿಧ ಕಾಲಗಳಲ್ಲಿ ರೂಢಿಯಲ್ಲಿದ್ದ ಅಪಹರಣ, ಕಿತ್ತಾಟ ಮತ್ತು ಬೆಲೆ ನೀಡಿ ಖರೀದಿಸುವ ಗುಲಾಮತನವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಅದನ್ನು ಇಸ್ಲಾಮಿನೊಂದಿಗೆ ಸೇರಿಸಿ ಹೇಳುವುದೆಂದರೆ, ಇಂದಿನ ಮುಸ್ಲಿಮ್ ಆಡಳಿತಗಾರರ ದುಷ್ಕೃತ್ಯ ಮತ್ತು ದಬ್ಬಾಳಿಕೆಗಳನ್ನು ಇಸ್ಲಾಮಿನ ಮೇಲೆ ಹೊರಿಸುವುದಕ್ಕೆ ಸಮಾನವಾಗಿದೆ. ಅದು ಸತ್ಯ-ನ್ಯಾಯಗಳಿಗೆ ಭೂಷಣವಲ್ಲ.

ಈ ಬಗ್ಗೆ ನಾವು ಕೆಲವು ವಾಸ್ತವಿಕಾಂಶಗಳನ್ನು ತಿಳಿದಿರಬೇಕಾಗಿದೆ.

1. ಇತರ ಪದ್ಧತಿಗಳಲ್ಲಿ ಯಾವ ನಿರ್ಬಂಧ ಪರಿಸ್ಥಿತಿಯಿರದಿದ್ದರೂ ಗುಲಾಮತನದ

ಹಲವು ರೂಪಗಳು ಅಸ್ತಿತ್ವದಲ್ಲಿದ್ದುವು. ಒಂದು ಜನತೆಯು ಇನ್ನೊಂದು ಜನತೆಯನ್ನು ಒಂದು ವರ್ಗವು ಇನ್ನೊಂದು ವರ್ಗವನ್ನು, ಶಕ್ತನು ಅಶಕ್ತನನ್ನು ಅಧೀನಗೊಳಿಸಿ ಗುಲಾಮರನ್ನಾಗಿ ಮಾಡಿಕೊಂಡಿದ್ದರು. ಕೇವಲ ವಿಶಿಷ್ಟ ವರ್ಗವೊಂದರಲ್ಲಿ ಜನಿಸಿದ್ದಕ್ಕಾಗಿ ಗುಲಾಮರನ್ನಾಗಿಸಲಾಯಿತು. ಇಸ್ಲಾಮ್ ಈ ಎಲ್ಲ ವಿಧಾನಗಳನ್ನೂ ನಿಷೇಧಿಸಿತು. ಇಸ್ಲಾಮಿನ ನಿಯಂತ್ರಣದಲ್ಲಿಲ್ಲದ ನಿರ್ಬಂಧಿತ ವಾತಾವರಣದಲ್ಲಿ ಮಾತ್ರ ಅದಕ್ಕೆ ತಾತ್ಕಾಲಿಕ ಅಂಗೀಕಾರ ನೀಡಿತು. ಕ್ರಮಾನುಗತವಾಗಿ ಅದನ್ನು ಸಂಪೂರ್ಣ ಕೊನೆಗೊಳಿಸುವ ಕಾರ್ಯಕ್ರಮಗಳನ್ನೂ ರೂಪಿಸಿತು.

2. ಯಾವ ನಿರ್ಬಂಧ ಸ್ಥಿತಿಯೂ ಇಲ್ಲದೆ ಗುಲಾಮತನದ ಮೂಲಗಳನ್ನು ಬೆಳೆಸುತ್ತಿದ್ದ ಐರೋಪ್ಯರು ಅದು ಪ್ರತಿಕೂಲವಾದ ಬಳಿಕವಷ್ಟೇ ರದ್ದುಗೊಳಿಸಿದರು. ಅವರ ಬರೆಹಗಾರರೇ ಒಪ್ಪಿಕೊಂಡಿರುವಂತೆ, ಗುಲಾಮರಿಂದ ಉತ್ಪಾದನೆ ಕಡಿಮೆಯಾಗಿ, ಕ್ಲಿಷ್ಟಜೀವನ, ಆಲಸ್ಯ ಮತ್ತು ಅನಾರೋಗ್ಯಗಳಿಂದ ಗುಲಾಮನು ಮಾಲಿಕನಿಗೆ ಒಂದು ಹೊರೆಯಾಗಿ ಪರಿಣಮಿಸಿದ ಬಳಿಕವೇ ಅವರಿಗೆ ಸ್ವಾತಂತ್ರ್ಯ ನೀಡಿದರು! ಅದರಲ್ಲಿ ಲಾಭನಷ್ಟಗಳನ್ನು ಲೆಕ್ಕ ಹಾಕುವ ಆರ್ಥಿಕ ದೃಷ್ಟಿ ಮಾತ್ರವಿತ್ತು. ಮಾನವನ ಗೌರವಕ್ಕೆ ಮನ್ನಣೆ ನೀಡುವ ಮಾನವೀಯ ಮೌಲ್ಯಗಳಿಗಾಗಿ ಅವರು ಗುಲಾಮರಿಗೆ ಸ್ವಾತಂತ್ರ್ಯ ನೀಡಿದ್ದಲ್ಲ. ಅದಲ್ಲದೇ ಗುಲಾಮರು ನಿರಂತರವಾಗಿ ಮುನ್ನಡೆಸಿದ ಕ್ರಾಂತಿಗಳಿಂದಾಗಿ ಗುಲಾಮ ಸಂಪ್ರದಾಯವನ್ನು ಹೆಚ್ಚು ಕಾಲ ಉಳಿಸಿಕೊಳ್ಳಲೂ ಅವರಿಗೆ ಸಾಧ್ಯವಾಗಲಿಲ್ಲ.

ಹಾಗಿದ್ದರೂ ಐರೋಪ್ಯರು ಅವರಿಗೆ ಆ ವೇಳೆಯೂ ಸ್ವಾತಂತ್ರ್ಯ ನೀಡಲಿಲ್ಲ. ಮಾಲಿಕನು ಗುಲಾಮನನ್ನು ಮಣ್ಣಿನ ಗುಲಾಮನನ್ನಾಗಿ ಮಾಡಿದನು. ಭೂಮಿಯ ಕ್ರಯ-ವಿಕ್ರಯಗಳಲ್ಲಿ ಅವರನ್ನೂ ಸೇರಿಸಲಾಯಿತು. ಆತನು ಅದರಲ್ಲಿಯೇ ದುಡಿಯಬೇಕು. ಅದನ್ನು ಆತನು ಬಿಟ್ಟು ಹೋಗಬಾರದು. ಒಂದು ವೇಳೆ ಯಾರಾದರೂ ಅಲ್ಲಿಂದ ತಪ್ಪಿಸುವ ಪ್ರಯತ್ನ ನಡೆಸಿದರೆ, ಆತನನ್ನು ಬಂಡುಕೋರನೆಂದು ಪರಿಗಣಿಸಿ ಕಾನೂನಿನ, ಬಲದಿಂದ ಆತನನ್ನು ಸರಪಳಿಯಲ್ಲಿ ಬಿಗಿದು, ದೇಹಕ್ಕೆ ಕೊಳ್ಳಿಯಿಟ್ಟು ಹಿಂಸಿಸಿ ಮರಳಿ ತರುತಿದ್ದರು. 18ನೇ ಶತಮಾನದಲ್ಲಿ ಫ್ರೆಂಚ್ ಕ್ರಾಂತಿಯು ಭುಗಿಲೇಳುವ ತನಕ ಯೂರೋಪಿನಲ್ಲಿ ಈ ರೀತಿಯ ಗುಲಾಮ ಸಂಪ್ರದಾಯ ರೂಢಿಯಲ್ಲಿತ್ತು. ಅಂದರೆ ಇಸ್ಲಾಮ್ ವಿಮೋಚನಾ ನೀತಿಯನ್ನು ಅಂಗೀಕರಿಸಿದ್ದ 1100 ವರ್ಷಗಳ ಬಳಿಕ!

3. ಮೋಡಿ ಮಾತುಗಳಿಂದ ನಾವು ವಂಚಿತರಾಗಬಾರದು. ಯೂರೋಪಿನಲ್ಲಿ ಫ್ರೆಂಚ್ ಕ್ರಾಂತಿಯು ಗುಲಾಮ ಸಂಪ್ರದಾಯವನ್ನು ಕೊನೆಗೊಳಿಸಿತು. ಅಮೇರಿಕದಲ್ಲಿ ಲಿಂಕನ್ ಗುಲಾಮಗಿರಿಯನ್ನು ಕೊನೆಗೊಳಿಸಿದನು. ತರುವಾಯ, ಗುಲಾಮಗಿರಿಯ ವಿಮೋಚನೆಗೆ ಲೋಕ ಒಗ್ಗಟ್ಟಾಯಿತು... ಇದೆಲ್ಲವೂ ಕೇವಲ ಬೂಟಾಟಿಕೆ. ಅನ್ಯಥಾ ಯಾವ ಗುಲಾಮಗಿರಿ ರದ್ದುಗೊಂಡಿದೆ? ಲೋಕದ ನಾನಾ ಭಾಗಗಳಲ್ಲಿ ಇಂದಿಗೂ

ಮೆರೆಯುತ್ತಿರುವ ಸಂಪ್ರದಾಯವನ್ನು ಯಾವ ಹೆಸರಿನಿಂದ ಕರೆಯೋಣ?

ಅಲ್ಜೀರಿಯದ ಮುಸ್ಲಿಮರೊಡನೆ ಫ್ರಾನ್ಸ್ ಅನುವರ್ತಿಸಿದ ನೀತಿಯೇನು? ೀಗ್ರೋಗಳೊಡನೆ ಅಮೇರಿಕನರು ವರ್ತಿಸುತ್ತಿರುವ ರೀತಿ ಹೇಗಿದೆ? ದಕ್ಷಿಣ ಆಫ್ರಿಕದ ರಿಯರೊಡನೆ ಬಿಳಿಯರ ವರ್ತನೆ ಹೇಗಿದೆ?

ಗುಲಾಮತನವೆಂದರೆ ಒಂದು ಜನತೆಯು ಇನ್ನೊಂದು ಜನತೆಯೊಡನೆ ತೋರುವ ಧೇಯತೆಯಷ್ಟೇ ಇತರರಿಗೆ ನೀಡಲ್ಪಡುವ ಮಾನವೀಯ ಹಕ್ಕುಗಳನ್ನು ಒಂದು ವರ್ಗಕ್ಕೆ ಮಾತ್ರ ನಿಷೇಧಿಸುವುದಲ್ಲಷ್ಟೇ ಅಥವಾ ಗುಲಾಮತನಕ್ಕೆ ಬೇರೇನಾದರೂ ಅರ್ಥವಿದೆಯೇ? ಾಗಿದ್ದರೆ ಗುಲಾಮಗಿರಿ ಎಂಬ ಪದಕ್ಕೆ ಅವರು ನೀಡುವ ಅರ್ಥವೇನು? ಅಥವಾ ಸ್ವಾತಂತ್ರ್ಯ- ಸಮಾನತೆ-ಸಹೋದರತೆ' ಇತ್ಯಾದಿ ಘೋಷಣೆಗಳ ತಾತ್ಪರ್ಯವೇನು? ಮಾನವಕುಲವು ಈ ತನಕ ಕಂಡಿರುವುದರಲ್ಲಿ ಅತ್ಯಂತ ಹೇಯ ಮತ್ತು ಪೈಶಾಚಿಕ ಥ್ಯಗಳು ಅವುಗಳ ಹಿಂದೆ ತಾಂಡವವಾಡುವುದಿದ್ದರೆ ಆ ಮನಮೋಹಕ ಘೋಷಣೆಗಳ ರ್ಥವೇನು?

ಇಸ್ಲಾಮ್ ಸ್ವಂತ ಆತ್ಮಸಾಕ್ಷಿಯೊಂದಿಗೂ ಮಾನವರೊಂದಿಗೂ ನಿಷ್ಕಳಂಕವಾಗಿ ೀಗೆಂದಿತು: ಇದು ಗುಲಾಮಗಿರಿ. ಅದರ ಏಕೈಕ ಕಾರಣ ಇಂತಿದೆ. ಅದರಿಂದ ವಿಮೋಚನೆ ಡೆಯುವ ಮಾರ್ಗವು ಮುಕ್ತವಾಗಿದೆ. ಅದನ್ನು ಸಂಪೂರ್ಣ ಮುಚ್ಚಿಡುವ ಸಾಧ್ಯತೆಯೂ ಸ್ತಿತ್ವದಲ್ಲಿದೆ. ಆದರೆ ಯುದ್ಧ ಕೈದಿಗಳನ್ನು ಗುಲಾಮರನ್ನಾಗಿ ಮಾಡುವುದಿಲ್ಲವೆಂಬ ಷಯದಲ್ಲಿ ಲೋಕವು ಸಹಮತ ಹೊಂದುವುದರಲ್ಲಿ ಅದರ ಯಶಸ್ಸು ಅಡಕವಾಗಿದೆ. ಆದರೆ ಿಂದು ಜೀವಿಸುತ್ತಿರುವ ಪೊಳ್ಳು ನಾಗರಿಕತೆಗೆ ಅದನ್ನು ಬಹಿರಂಗವಾಗಿ ಹೇಳುವ ೈರ್ಯವಿಲ್ಲ. ಅವರು ತಮ್ಮೆಲ್ಲ ಸಾಮರ್ಥ್ಯಗಳನ್ನು ಪೊಳ್ಳು ತಥ್ಯಗಳಿಗೆ ಬಣ್ಣ ಲೇಪಿಸಿ, ನಸ್ಸನ್ನು ಮಂಕುಗೊಳಿಸುವ ಘೋಷ ವಾಕ್ಯಗಳನ್ನು ಸೃಷ್ಟಿಸುವುದಕ್ಕಾಗಿ ನಿಯೋಗಿಸುತ್ತಿದ್ದಾರೆ.

ಸ್ವಾತಂತ್ರ್ಯ ಮತ್ತು ಮಾನವೀಯ ಹಕ್ಕುಗಳ ಬೇಡಿಕೆಯನ್ನು ಮುಂದಿರಿಸಿದರೆಂಬ ರಣಕ್ಕಾಗಿ ಅವರು ಟುನೀಶ್ಯ, ಮೊರೊಕ್ಕೊ ಮತ್ತು ಅಲ್ಜೀರಿಯಾಗಳಲ್ಲಿ ಲಕ್ಷಗಟ್ಟಲೆ ಮಾನವರನ್ನು ವಧಿಸಿದರು. ಅವರು ಮಾಡಿದ ಅಪರಾಧವೇನು? ಜನ್ಮಭೂಮಿಯಲ್ಲಿ ಾರ ಹಂಗೂ ಇಲ್ಲದೆ ಜೀವಿಸುವ ಸ್ವಾತಂತ್ರ್ಯ, ಸ್ವಂತ ಭಾಷೆಯನ್ನಾಡುವ, ಧರ್ಮದಲ್ಲಿ ಂಬಿಕೆಯಿಡುವ ಹಾಗೂ ತಮ್ಮ ಸೇವೆಯನ್ನು ಅನ್ಯರಿಗೆ ಒತ್ತೆಯಿಡದಿರುವ ಸ್ವಾತಂತ್ರ್ಯ, ಜಕೀಯ ಮತ್ತು ಆರ್ಥಿಕ ರಂಗಗಳಲ್ಲಿ ಜಗತ್ತಿನೊಡನೆ ನೇರವಾಗಿ ವ್ಯವಹರಿಸುವ ವಕಾಶ- ಇವುಗಳನ್ನು ಅವರು ಬೇಡಿದ್ದರು.

ಆ ಕಾರಣಕ್ಕಾಗಿ ಅವರು ಸಹಸ್ರಾರು ಮಂದಿಯನ್ನು ಸಾಮೂಹಿಕವಾಗಿ ವಧಿಸಿದರು.

ಅನ್ನ, ನೀರು ನೀಡದೆ ಅವರನ್ನು ಕೊಳಕು ಸೆರೆಮನೆಗಳಲ್ಲಿ ಕೂಡಿ ಹಾಕಿ, ಅವ ಅಭಿಮಾನವನ್ನು ಕಿತ್ತುಕೊಂಡರು. ತರುಣಿಯರ ಮಾನಭಂಗ ಮಾಡಿದರು. ವಿನಾ ಕಾರಣವಾಗಿ ಕೊಂದು ಹಾಕಿದರು. ಗರ್ಭಿಣಿಯರ ಹೊಟ್ಟೆ ಸಿಗಿದು ಗರ್ಭಸ್ಥ ಶಿಶುವನ್ನು ಹೊರ ತೆಗೆದರು... ಗಂಡೋ-ಹೆಣ್ಣೋ ಎಂಬ ಸಂದೇಹ ನಿವಾರಣೆಗಾಗಿ! ಇದನ್ನೇ 20ನೇ ಶತಮಾನದ ಸಂಸ್ಕೃತಿ, ನಾಗರಿಕತೆ, ಸ್ವಾತಂತ್ರ್ಯ, ಸಮಾನತೆ, ಸಹೋದರತೆ, ಇತ್ಯಾದಿ ಆಧುನಿಕ ವಿಚಾರಧಾರೆಗಳ ಪ್ರಚಾರವೆಂದು ಕರೆಯಲಾಗುತ್ತಿದೆ!!

ಆದರೆ 1400 ವರ್ಷಗಳ ಹಿಂದೆ, ಗುಲಾಮಗಿರಿಯು ಒಂದು ತಾತ್ಕಾಲಿ ಪ್ರಕ್ರಿಯೆಯಾಗಿದೆ. ಅದು ಶಾಶ್ವತ ಪದ್ಧತಿಯಲ್ಲವೆಂದು ಸಕ್ರಿಯವಾಗಿ ಘೋಷಿಸಿ ಸ್ವಯಂಪ್ರೇರಣೆಯಿಂದ ಎಲ್ಲ ಪರಿಸ್ಥಿತಿಗಳಲ್ಲಿಯೂ ಮಾನವಕುಲವನ್ನು ಗೌರವಿಸಿ ಇಸ್ಲಾಮ್ ಪ್ರದರ್ಶಿಸಿದ ಮಾದರಿಯೋಗ್ಯ ವ್ಯವಹಾರ ನೀತಿಯು ಪ್ರಾಚೀನ, ಪ್ರತಿಗಾಮಿ ಮತ್ತು ಕಿರಾತವಂತೆ!!

ಅಮೇರಿಕನರು ಹೋಟೆಲು ಮತ್ತು ಕ್ಲಬ್ಬುಗಳ ಮುಂದೆ 'ಕೇವಲ ಬಿಳಿಯರಿ ಅಥವಾ ಇನ್ನೂ ಸ್ವಲ್ಪ ಕೀಳಾಗಿ 'ಕರಿಯರಿಗೆ ಮತ್ತು ನಾಯಿಗಳಿಗೆ ಪ್ರವೇಶವಿಲ್ಲ' ಎಂ ಜಾಹೀರು ಫಲಕಗಳನ್ನು ತೂಗಾಡಿಸುತ್ತಾರೆ. 'ನಾಗರಿಕತೆ' ಸಾಧಿಸಿದ ಬಿಳಿಯರ ಗುಂ ಓರ್ವ ನೀಗ್ರೋನನ್ನು ನಡುಬೀದಿಯಲ್ಲಿ ಕೆಡವಿ ಚಪ್ಪಲಿಯಿಂದ ಹೊಡೆದು ತುಳಿದ ಕೊಲ್ಲುವಾಗ ಪೊಲೀಸನು ಮೂಕಪ್ರೇಕ್ಷಕನಾಗಿ ಕೈಕಟ್ಟಿ ನಿಲ್ಲುತ್ತಾನೆ. ಧರ್ಮ, ಭಾಷ ಮಾನವೀಯ ಬಾಂಧವ್ಯದ ಮಾತಂತಿರಲಿ- ತನ್ನ ಸಹೋದರನಾದ ಆತನ ರಕ್ಷಣೆಗಾ ಒಂದು ಕಿರು ಬೆರಳನ್ನೂ ಅಲುಗಾಡಿಸುವುದಿಲ್ಲ. ಯಾಕೆಂದರೆ ಆತ ನೀಗ್ರೋ. ಆ ನಿರ್ಲಜ್ಜಿತ ಬಿಳಿ ಹೆಣ್ಣಿನೊಂದಿಗೆ- ಆಕೆಯ ಅಪೇಕ್ಷೆಯಂತೆ ವಿಹರಿಸಿದನಂತೆ!

ಇದು 20ನೇ ಶತಮಾನವು ಸಾಧಿಸಿರುವ ಉನ್ನತಿ ಮತ್ತು ನಾಗರಿಕತೆಯ ಹೆಗ್ಗಳಿ ಅದೇ ಸಂದರ್ಭದಲ್ಲಿ ಅತ್ತ ಓರ್ವ ಅಗ್ನಿಆರಾಧಕ ಗುಲಾಮನು ಖಲೀಫ ಉಮರ್‌ರಿ ಕೊಲೆ ಬೆದರಿಕೆ ಹಾಕುತ್ತಾನೆ. ಇದನ್ನು ತಿಳಿದ ಖಲೀಫರು ಆತನನ್ನು ಬಂಧಿ ಸೆರೆಯಲ್ಲಿಡುವುದಿಲ್ಲ ಅಥವಾ ಗಡೀಪಾರು ಮಾಡುವುದಿಲ್ಲ. ಬದಲಾಗಿ 'ಗುಲಾಮ ನನ್ನನ್ನು ಬೆದರಿಸುತ್ತಿದ್ದಾನೆ'ಂದಷ್ಟೇ ಹೇಳಿರುವ ಖಲೀಫರು ಎಂತಹ ಕಿರಾತತನ ತೋರಿದರು ಮಾನವೀಯ ಗೌರವವನ್ನು ಅವರು ಎಷ್ಟೊಂದು ಅಪಮಾನಿಸಿದರು? ತರುವಾ ಆತನನ್ನು ಸ್ವತಂತ್ರವಾಗಿ ನಡೆದಾಡಲು ಬಿಡುತ್ತಾರೆ. ಮುಸ್ಲಿಮರ ಖಲೀಫನನ್ನು ಆ ವಧಿಸುತ್ತಾನೆ. ಅಪರಾಧವೆಸಗುವುದಕ್ಕಿಂತ ಮುಂಚೆ ಆ ವ್ಯಕ್ತಿಯ ಬಂಧನಕ್ಕೆ ಸಾಕಷ ಪುರಾವೆಯಿಲ್ಲವೆಂಬ ಕಾರಣಕ್ಕಾಗಿ ಆತನನ್ನು ಬಿಡಲಾಗಿತ್ತು!

ಸ್ವಾಭಿಮಾನ ಪ್ರಜ್ಞೆ ಜಾಗೃತವಾಗಿ ಸ್ವಾತಂತ್ರ್ಯ ಬಯಸಿದ್ದಕ್ಕಾಗಿ ಆಫ್ರಿಕದ ಕರಿಯ ಅನುಭವಿಸುತ್ತಿರುವ ದುರಂತ ಕಥೆಗಳು; ಅವರ ಮಾನವೀಯ ಹಕ್ಕುಗಳ ನಿಷೇ

ಸಾಮೂಹಿಕ ಹತ್ಯೆ-ಇಂಗ್ಲಿಷ್ ಪತ್ರಿಕೆಗಳ ನೀಚ ಭಾಷೆಯಲ್ಲಿಯೇ ಹೇಳುವುದಿದ್ದರೆ 'ಬೇಟೆಯಾಡುವುದು'- ಇವೆಲ್ಲವೂ ಬ್ರಿಟಿಷರ ಪರಮೋನ್ನತ ನೀತಿ; ಮಾನವ ನಾಗರಿಕತೆಯ ಉತ್ತುಂಗ ಶಿಖರ! ಲೋಕದ ಸೂತ್ರಧಾರಿಯಾಗಿರುವ ಯೂರೋಪು ಅಂಗೀಕರಿಸಿದ ಮಹಾ ಸಿದ್ಧಾಂತಗಳು!!

ಆದರೆ ಕೇವಲ ಸಮಾನ ವರ್ತನೆಗಾಗಿ, ಒಂದು ತಾತ್ಕಾಲಿಕ ಕ್ರಮವೆಂಬ ನೆಲೆಯಲ್ಲಿ- ಶಾಶ್ವತ ನೀತಿಯಾಗಿರಲಿಲ್ಲ- ಯುದ್ಧ ಕೈದಿಗಳನ್ನು ಗುಲಾಮರನ್ನಾಗಿ ಮಾಡಿದ ಇಸ್ಲಾಮ್ ಕಿರಾತವಂತೆ. ಅದು ಅತಿ ಪ್ರಾಚೀನ. ಯಾಕೆಂದರೆ, ಅದು ಮಾನವರನ್ನು 'ಬೇಟೆಯಾಡಲು' ಕಲಿಸಿಲ್ಲ. ಮೈಬಣ್ಣ ಕರ್‍ರಗಿರುವುದರಿಂದ ಅವರನ್ನು ಕೊಂದು ಆನಂದಿಸಲಿಲ್ಲ. ಅದರ ಮೂರ್ಖತನ ಎಲ್ಲಿಗೆ ತಲಪಿತ್ತೆಂದು ತಿಳಿಯಬೇಕೆ? ಅದು ಹೇಳಿತು: "ದ್ರಾಕ್ಷೆ ಗೊಂಚಲಿನಂತೆ ಜಡೆ ಕಟ್ಟಿದ ತಲೆಯಿರುವ ಓರ್ವ ನೀಗ್ರೋ ಗುಲಾಮನೇ ನಿಮ್ಮ ಆಡಳಿತಗಾರನಾದರೂ ನೀವು ಆತನ ಆಜ್ಞಾಪಾಲನೆ ಮಾಡಬೇಕು."

******

ಆದರೆ, ಮಹಿಳೆಯರ ಸಮಸ್ಯೆಯು ಇದಕ್ಕಿಂತ ಭಿನ್ನವಾಗಿದೆ-

ಯುದ್ಧ ಕೈದಿಗಳಾದ ಸ್ತ್ರೀಯರನ್ನು ಅವರ ಸಂರಕ್ಷಕನಾದ ಪುರುಷನ ಅಧೀನದಲ್ಲಿ ವಾಸಿಸಲು ಇಸ್ಲಾಮ್ ಅನುಮತಿ ನೀಡಿತು. ಕೇವಲ ಆತನೊಬ್ಬನೇ ಅವರೊಡನೆ ಸಂಬಂಧ ಬೆಳೆಸಬಹುದು[1] ಇಚ್ಛೆಯಿದ್ದರೆ ಅವರನ್ನು ವಿವಾಹವಾಗಬಹುದು. ಈ ಕ್ರಮವನ್ನು ಯೂರೋಪು ದ್ವೇಷಿಸುತ್ತದೆ. ತರುಣಿಯರನ್ನು ಭೋಗ ವಸ್ತುವೆಂದು ಪರಿಗಣಿಸುತ್ತದೆ. ಮಾನವನ ಪೈಶಾಚಿಕ ಕಾಮಾಸಕ್ತಿಯನ್ನು ಶಮನಿಸುವುದನ್ನೇ ಸ್ತ್ರೀಯರ ಜೀವನೋದ್ದೇಶವಾಗಿಸಿ, ಅವರನ್ನು ಗೌರವಾದರವಿಲ್ಲದ ಶವದಂತೆ ವೀಕ್ಷಿಸುವ ಈ ಮ್ಲೇಚ್ಛ ಪೈಶಾಚಿಕತೆಯಿಂದ ಅವರನ್ನು ಇಸ್ಲಾಮ್ ದೂರ ನಿಲ್ಲಿಸುತ್ತದೆ!

ಈ ರಂಗದಲ್ಲಿ ವ್ಯಭಿಚಾರಕ್ಕೆ ಮನ್ನಣೆ ನೀಡದಿರುವುದೇ ಇಸ್ಲಾಮಿನ ಮಹಾ ಪಾತಕ! ಇಸ್ಲಾಮೇತರ ಲೋಕದಲ್ಲಿ ಯುದ್ಧ ಬಂಧಿಗಳಾದ ಸ್ತ್ರೀಯರನ್ನು ಸಂರಕ್ಷಿಸುವ ಜನರಿಲ್ಲದೇ ಅವರನ್ನು ಅಪಮಾನ, ಅಸಹಾಯಕತೆಯ ದುರಂತ ಕೂಪಕ್ಕೆ ಎಸೆಯಲಾಗುತ್ತಿತ್ತು. ಆ ತರುಣಿಯರ ಯಜಮಾನರಿಗೆ ಅವರ ಬಗ್ಗೆ ಯಾವ ಆತ್ಮಾಭಿಮಾನವೂ ಇರಲಿಲ್ಲ. ಅವರನ್ನು ಅಭಿಶಪ್ತ ದೇಹ ಮಾರಾಟಕ್ಕಾಗಿ ಬಳಸಲಾಗುತ್ತಿತ್ತು. ಚಾರಿತ್ರ್ಯ ಮಾರುವ ಈ ಹೇಯ ವ್ಯಾಪಾರದಿಂದ ಸಂಪಾದಿಸುವುದೇ ಅವರ ಸಂಪ್ರದಾಯವಾಗಿತ್ತು. ಆದರೆ

1. ರಾಜಂದಿರು ಮತ್ತು 'ಖಲೀಫರ' ಅಂತಃಪುರಗಳಲ್ಲಿ ದಾಸಿ ಮತ್ತು ಸೇವಕಿಯರಾಗಿ ಗುಲಾಮ ಸ್ತ್ರೀಯರನ್ನು ಖರೀದಿಸಿ ಇರಿಸಿಕೊಳ್ಳುವ ಸಂಪ್ರದಾಯವು ಇಸ್ಲಾಮಿ ವೃತ್ತದಿಂದ ಹೊರತಾಗಿದೆಯೆಂದು ಇದರಿಂದ ವ್ಯಕ್ತವಾಗುತ್ತದೆ.

'ಪ್ರತಿಗಾಮಿ' ಇಸ್ಲಾಮ್ ವ್ಯಭಿಚಾರಕ್ಕೆ ಅನುಮತಿ ನೀಡಲಿಲ್ಲ. ಆ ಪಾಪ ಕೂಪದಿಂದ ಸಮಾಜವನ್ನು ಪರಿಶುದ್ಧಗೊಳಿಸಲು ಇಸ್ಲಾಮ್ ಅಪೇಕ್ಷಿಸಿತು.

ಆದ್ದರಿಂದಲೇ ಆ ತರುಣಿಯರನ್ನು ಅವರ ಯಜಮಾನರ ಆಶ್ರಯಕ್ಕೆ ಸೀಮಿತಗೊಳಿಸಿತು. ಅವರ ಅಶನ - ವಸನ, ವಸತಿಯ ಹೊಣೆಯನ್ನು ಯಜಮಾನನ ಮೇಲೆ ಹೊರಿಸಿತು. ತನ್ನ ಲೈಂಗಿಕ ಬೇಡಿಕೆಯನ್ನು ಪೂರೈಸುವುದರೊಂದಿಗೆ, ಅವರ ಬೇಡಿಕೆಗಳನ್ನು ಈಡೇರಿಸುವ ಜವಾಬ್ದಾರಿಕೆಯನ್ನು ಆತನಿಗೆ ನೀಡಿತು.

ಆದರೆ ಯೂರೋಪಿನ ಆತ್ಮಸಾಕ್ಷಿಗೆ ಈ ಪಾಶವೀಯತೆಯನ್ನು ಸಹಿಸಲಾಗಲಿಲ್ಲ. ತನ್ನಿಮಿತ್ತ ಅದು ವ್ಯಭಿಚಾರಕ್ಕೆ ಒಪ್ಪಿಗೆ ನೀಡಿತು. ಅದಕ್ಕೆ ಕಾನೂನಿನ ಸಂರಕ್ಷಣೆ ಮತ್ತು ಸೌಲಭ್ಯಗಳನ್ನು ಒದಗಿಸಿಕೊಟ್ಟಿತು.

ಓರ್ವ ವ್ಯಭಿಚಾರಿಣಿಗೆ ಮಾನವೆಲ್ಲಿದೆ? ಅಪೇಕ್ಷಕರೆಲ್ಲರನ್ನೂ ಸಂತೃಪ್ತಗೊಳಿಸುವ ಆ ಹತಭಾಗ್ಯಳ ಮಾನವೀಯತೆ ಎಲ್ಲಿದೆ? ಅವಳಿಂದ ಅಪೇಕ್ಷಿಸುವ ಬೇಡಿಕೆಯೇನು? ಮಾನವನು ಕೇಳಬಹುದಾದ ಅತ್ಯಂತ ನೀಚ ಬೇಡಿಕೆ! ಪ್ರೀತಿ ಅನುರಾಗದ ಸ್ಪಂದನವಿಲ್ಲದ ಆತ್ಮ ಸಂತೃಪ್ತಿಯ ಗಂಧ ಗಾಳಿಯೂ ಸೋಂಕದ ಮಾಂಸದಾಹ! ಈ ಶಾರೀರಿಕ ಹಾಗೂ ಆಧ್ಯಾತ್ಮಿಕ ಮ್ಲೇಚ್ಛತೆಯೆಲ್ಲಿ? ಇಸ್ಲಾಮ್‌ನಲ್ಲಿ ಯಜಮಾನರು ಮತ್ತು ದಾಸಿಯರಲ್ಲಿದ್ದ ಸಂಬಂಧವೆಲ್ಲಿ?

ಇಸ್ಲಾಮ್ ಸ್ವಂತ ಆತ್ಮಸಾಕ್ಷಿಯೊಂದಿಗೂ ಸುಸ್ಪಷ್ಟವಾಗಿ ಮತ್ತು ಕೆಚ್ಚಿನಿಂದ ಈ ರೀತಿ ಸಾರಿತು: ಇದು ಗುಲಾಮತನ; ಇವರು ನಿಮ್ಮ ದಾಸಿಯರು; ಇವರೊಡನೆ ಸಭ್ಯತೆಯಿಂದ ವರ್ತಿಸುವ ರೀತಿ ಹೀಗಿದೆ!

ಆದರೆ, ಕೇವಲ ಇದೊಂದೇ ಮಾನವಕುಲದ ಶಾಶ್ವತ ಪದ್ಧತಿಯೆಂದು ಇಸ್ಲಾಮ್ ಹೇಳಲಿಲ್ಲ. ಇದು ಭವಿಷ್ಯದಲ್ಲಿಯೂ ಸ್ತ್ರೀಯರ ಗೌರವಕ್ಕೆ ತಕ್ಕುದಾದ ನೀತಿಯೆಂದೂ ಹೇಳಲಿಲ್ಲ. ಇದು ಯುದ್ಧ ನಿಮಿತ್ತ ಉದ್ಭವಿಸಿರುವ ಅನಿವಾರ್ಯ ಪರಿಸ್ಥಿತಿಯೆಂದೂ ಲೋಕವು ಯುದ್ಧ ಕೈದಿಗಳನ್ನು ಗುಲಾಮರನ್ನಾಗಿ ಮಾಡುವ ಬದಲಿಗೆ ಬೇರೊಂದು ಕ್ರಮವನ್ನು ಅಂಗೀಕರಿಸಲು ಸಿದ್ಧವಾದರೆ ಇದು ಕೊನೆಗೊಳ್ಳುವುದೆಂದೂ ಹೇಳಿತು.

ಆದರೆ ಆಧುನಿಕ ಪೊಳ್ಳು ನಾಗರಿಕತೆಗೆ ಅದನ್ನು ನಿಸ್ಸಂಕೋಚವಾಗಿ ಬಹಿರಂಗಪಡಿಸುವ ಆತ್ಮಸ್ಥೈರ್ಯವಿಲ್ಲ. ವೇಶ್ಯಾವೃತ್ತಿಯನ್ನು ಅವರು ಗುಲಾಮತನವೆಂದು ಹೆಸರಿಸುವುದಿಲ್ಲ. ಅವರು ಅದನ್ನು 'ಸಾಮಾಜಿಕ ಅನಿವಾರ್ಯತೆ'ಯೆಂದೇ ವರ್ಣಿಸುತ್ತಾರೆ!

ಅದೇಕೆ ಅನಿವಾರ್ಯ ಸ್ಥಿತಿಯಾಗಬೇಕು? ಕಾರಣವಿದೆ. 'ಸುಸಂಸ್ಕೃತ' ಐರೋಪ್ಯ ಪ್ರಜೆಯು ಯಾರ ಸಂರಕ್ಷಣಾ ಭಾರವನ್ನೂ ವಹಿಸಿಕೊಳ್ಳಲು ಸಿದ್ಧನಿಲ್ಲ. ಅದು ಹೆಂಡತಿ ಮಕ್ಕಳು ಅಥವಾ ಇನ್ನಾರಾಗಿದ್ದರೂ ಸರಿಯೇ. ಹೊಣೆಗಾರಿಕೆಯಿಲ್ಲದೇ ಸುಖ ಪಡೆಯುವುದೆ

ನರ ಧ್ಯೇಯ. ತನ್ನ ಮಾಂಸ ತೃಷೆಯನ್ನು ಇಂಗಿಸುವ ಸ್ತ್ರೀ ದೇಹವಷ್ಟೇ ಆತನಿಗೆ ಅಗತ್ಯ. ೆ ಏನೆಂಬ ಪ್ರಶ್ನೆ ಆತನಿಗೆ ಮುಖ್ಯವಲ್ಲ. ಆಕೆಗೆ ಆತನ ಬಗ್ಗೆ ಅಥವಾ ಆತನಿಗೆ ಆಕೆಯ ಗ್ಗೆಯಿರುವ ಭಾವನೆಗಳು ಆತನಿಗೆ ಸಮಸ್ಯೆಯಲ್ಲ. ಆತ ಕೇವಲ ಕಾಮಕೇಳಿ ನಡೆಸುಪಶು! ೆ ನಿರಾತಂಕವಾಗಿ ಆತನ ದಾಹವನ್ನು ಶಮನಿಸುವ ಹೆಣ! ಕೇವಲ ಒಬ್ಬನನ್ನಲ್ಲ. ದಿಯಲ್ಲಿ ಬರುವ ಎಲ್ಲರನ್ನೂ ಆಕೆ ಸ್ವಾಗತಿಸುತ್ತಾಳೆ.

ಇದುವೇ ಆಧುನಿಕ ಯುಗದಲ್ಲಿ ಸ್ತ್ರೀಯರನ್ನು ಗುಲಾಮರನ್ನಾಗಿಸುವ ಪಾಶ್ಚಾತ್ಯ ೋಕದ 'ಸಾಮಾಜಿಕ ಅನಿವಾರ್ಯತೆ'

ಐರೋಪ್ಯ ಪ್ರಜೆಯು 'ಮಾನವೀಯತೆ'ಯ ಮಟ್ಟಕ್ಕೇರಿ, ಮಿತಿಮೀರಿದ ಅಹಂಕಾರವನ್ನು ಪ್ಪ ನಿಯಂತ್ರಿಸಲು ಸಿದ್ಧನಾದರೆ, ಅದು ಖಂಡಿತವಾಗಿಯೂ 'ಅನಿವಾರ್ಯತೆ'ಯಾಗಿ ಳಿಯುವುದಿಲ್ಲ.

ನಾಗರಿಕ ಯೂರೋಪಿನಲ್ಲಿ ವೇಶ್ಯಾವೃತ್ತಿಯನ್ನು ನಿಷೇಧಿಸಿದ ರಾಷ್ಟ್ರಗಳು ಅದು ಯರ ಗೌರವಕ್ಕೆ ಧಕ್ಕೆಯೊದಗಿಸುತ್ತದೆಂಬ ಭಾವನೆಯಿಂದ ನಿಷೇಧಿಸಿದ್ದಲ್ಲ. ಅಥವಾ ಯ ನೈತಿಕ, ಮಾನಸಿಕ ಮತ್ತು ಧಾರ್ಮಿಕ ಮಟ್ಟವು ಅದನ್ನು ಮೀರಿಸಿದ್ದರಿಂದಲ್ಲ. ಖಂಡಿತಾ ್ಲ, ಬದಲಾಗಿ ಸಮಾಜದ ಸಾಮಾನ್ಯ ಸ್ತ್ರೀಯರು ಆ 'ರಂಗ'ವನ್ನು ಸ್ವಾಧೀನಪಡಿಸಿದುದರಿಂದಾಗಿ ್ಯೋಗ ಮತ್ತು ಜೀವನೋಪಾಯವೆಂಬ ಅದರ ಪ್ರಸ್ತುತತೆ ನಷ್ಟವಾಯಿತು. ತರುವಾಯ, ಕಾರವು ಅದರಲ್ಲಿ ಹಸ್ತಕ್ಷೇಪ ನಡೆಸುವ ಅಗತ್ಯ ಬೀಳಲಿಲ್ಲ.

ಆದರೂ ಅವರು ಇಸ್ಲಾಮಿನ 'ದಾಸಿ ಪದ್ಧತಿ'ಯನ್ನು ಟೀಕಿಸುವ ಧೈರ್ಯ ತೋರಿದರು. ು 1400 ವರ್ಷಗಳ ಹಿಂದೆ ಜಾರಿಯಲ್ಲಿದ್ದ ಕೇವಲ ತಾತ್ಕಾಲಿಕ ಪದ್ಧತಿಯಾಗಿತ್ತು. ್ಲಮ್ ಅದನ್ನು ಚಿರಸ್ಥಾಯಿಗೊಳಿಸಲಿಲ್ಲ. ಆದರೂ ಆ ಪದ್ಧತಿಯು ಇಂದು ಈ 20ನೇ ಮಾನದ ಪದ್ಧತಿಗಿಂತ ಎಷ್ಟೋ ಪಾಲು ಸಭ್ಯ ಮತ್ತು ಗೌರವಾರ್ಹವಾಗಿತ್ತು. ಆಧುನಿಕ ರಿಕತೆಯು ಇಂದಿನ ವ್ಯವಸ್ಥೆಯನ್ನು ಸ್ವಾಭಾವಿಕ ಮತ್ತು ಸಹಜ ಪದ್ಧತಿಯೆಂದು ಗಣಿಸುತ್ತಿದೆ. ಯಾರಿಗೂ ಅದರ ಬಗ್ಗೆ ದ್ವೇಷ ಅಥವಾ ವಿರೋಧವಿಲ್ಲ. ಯಾರೂ ನ್ನು ಬದಲಾಯಿಸಲು ಪ್ರಯತ್ನಿಸುವುದಿಲ್ಲ. ಜೀವನಾಂತ್ಯದವರೆಗೆ ಅದು ುದುವರಿಯುವ ಬಗ್ಗೆ ಯಾರಿಗೂ ಆತಂಕವಿಲ್ಲ.

ವೇಶ್ಯೆಯರ ರಂಗವನ್ನು ವಶಪಡಿಸಿಕೊಂಡ ಸಮಾಜದ ಸಾಮಾನ್ಯ ಸ್ತ್ರೀಯರು, ರ ಒತ್ತಡವೂ ಇಲ್ಲದೆ ಸ್ವಇಚ್ಛೆಯಿಂದ ಅದಕ್ಕೆ ಸಿದ್ಧರಾಗುತ್ತಾರೆಂದು ಯಾರೂ ಸಬೇಡಿರಿ. ಆ ವಿಷಯದಲ್ಲಿ ಅವರು ಸಂಪೂರ್ಣ ಸ್ವತಂತ್ರರೆಂದೂ ವಾದಿಸಬೇಡಿರಿ. ಂತ್ರರಾದ ಅನೇಕ ಗುಲಾಮರು ಸ್ವಾತಂತ್ರ್ಯವನ್ನು ಸ್ವಯಮೇವ ಮರಳಿಸಿದ ಅನೇಕ ಹರಣೆಗಳಿವೆ. ಯಾರ ಒತ್ತಡವೂ ಇಲ್ಲದೇ ಅವರು ಗುಲಾಮತನವನ್ನೇ ಪುನಃ

ಅಂಗೀಕರಿಸಿದರು. ಆದರೆ ಇಸ್ಲಾಮಿನಲ್ಲಾಗಲೀ ಇನ್ನಾವುದೇ ಪದ್ಧತಿಯಲ್ಲಾಗಲೀ ಪ್ರಸ
ಘಟನೆಯನ್ನು ಗುಲಾಮತನದ ಸಮರ್ಥನೆಗಾಗಿ ಉದ್ಧರಿಸುವುದಿಲ್ಲ. ಜನರನ್ನು ಆಥಿ
ಸಾಮಾಜಿಕ, ರಾಜಕೀಯ, ವೈಚಾರಿಕ ಮತ್ತು ನೈತಿಕ ಹಿನ್ನೆಲೆಗಳಿಂದ ಗುಲಾಮತ
ಧುಮುಕುವಂತೆ ಪ್ರಚೋದಿಸುವಂತಹ ಸಾಮಾಜಿಕ ಪದ್ಧತಿಯನ್ನು ನಾವು ಅದರ ಹಿ
ದರ್ಶಿಸಬೇಕು. ಐರೋಪ್ಯ 'ನಾಗರಿಕತೆ'ಯು ವೇಶ್ಯಾವೃತ್ತಿಗೆ ದೂಡಿ ಅದಕ್ಕೆ ಮಾ
ನೀಡುವಂತದ್ದಾಗಿದೆ. ಅದು ಅಧಿಕೃತ ವೇಶ್ಯಾವೃತ್ತಿಯಾಗಿರಬಹುದು ಅಥವಾ ಸಮಾ
ಕುಲೀನ ಸ್ತ್ರೀಯರು ನಡೆಸುವ ವ್ಯಭಿಚಾರವಾಗಿರಬಹುದು.

ಇದು 20ನೇ ಶತಮಾನದ ವರೆಗಿನ ಐರೋಪ್ಯ ಗುಲಾಮಗಿರಿಯ ಕಥೆ. ಪುರು
ಸ್ತ್ರೀಯರ, ಸಮುದಾಯಗಳ ಮತ್ತು ವರ್ಗಗಳ ಗುಲಾಮಗಿರಿ. ಇಸ್ಲಾಮ್ ಎದುರಿಸಬೇಕಾ
ಯಾವ ಅನಿವಾರ್ಯ ಪರಿಸ್ಥಿತಿಯೂ ಅಲ್ಲಿರಲಿಲ್ಲ- ಐರೋಪ್ಯ ಪ್ರಜೆಯ ದುಷ್ಟ
ಸ್ವಾರ್ಥ ಮತ್ತು ಅಹಂಕಾರದ ಹೊರತು!

ಕಮ್ಯೂನಿಸ್ಟ್ ರಾಷ್ಟ್ರಗಳು ಅದರ ಪ್ರಜೆಗಳಿಗೆ ಉದ್ಯೋಗ ಅಥ
ಉದ್ಯೋಗಾವಕಾಶವನ್ನು ಆರಿಸುವ ಸ್ವಾತಂತ್ರ್ಯವನ್ನೂ ನೀಡದೆ ಅವರನ್ನು ಗುಲಾಮರ
ಮಾಡುವ ಬಗ್ಗೆ ಯಾರೂ ಚಕಾರವೆತ್ತುವುದಿಲ್ಲ. ಹಾಗೆಯೇ ಕಾರ್ಮಿಕನಿಗೆ, ತ
ಸ್ವಾಮ್ಯಕ್ಕೊಳಪಡುವ ಮಾಲಿಕನನ್ನು ಆರಿಸುವ ಸ್ವಾತಂತ್ರ್ಯವನ್ನು ಮಾತ್ರ ನೀ
ಪಾಶ್ಚಾತ್ಯ ಭಂಡವಾಳಶಾಹೀ ಜಗತ್ತಿನ ಗುಲಾಮಗಿರಿಯನ್ನೂ ನಾವು ಬಿಟ್ಟು ಬಿಡುತ್ತೆ

ಅದಂತಿರಲಿ, ಆ ಬಗ್ಗೆ ವಾದಿಸಲು ಮತ್ತು ಸಮರ್ಥಿಸಲು ಬೇಕಷ್ಟು ಜನರಿರಬಹು
ಆದರೆ ವಾಸ್ತವಿಕತೆಯನ್ನು ಗ್ರಹಿಸಲು ನಾವಿಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿರುವ ಗುಲಾಮತ
ಮಾದರಿಗಳೇ ಧಾರಾಳ ಸಾಕು. ಹೌದು, ನಾಗರಿಕತೆ ಮತ್ತು ಸಾಮಾಜಿಕ ಪ್ರಗತಿಯ ಹೆಸರಿ
ನಡೆಯುತ್ತಿರುವ ಗುಲಾಮಗಿರಿ! ಇನ್ನೊಮ್ಮೆ ನೋಡಿರಿ! ಅತ್ತ ಹದಿನಾಲ್ಕು ಶತಮಾ
ಹಿಂದಿನ ಇಸ್ಲಾಮಿ ಸಂದೇಶದಿಂದ ಮಾನವಕುಲವು ಪ್ರಗತಿ ಸಾಧಿಸಿತೇ? ಅಥವಾ
ಚೆಲ್ಲಾಪಿಲ್ಲಿಯಾಗಿ ಹಿಂದೆ ಸರಿಯುತ್ತಿದೆಯೇ? ಹೌದು, ಮಾನವಕುಲವು ಸಿಲುಕಿ
ಗಾಡಾಂಧಕಾರದಿಂದ ಮುಕ್ತಿ ಪಡೆಯಲು ಅದಕ್ಕೆ ಇಸ್ಲಾಮಿ ಸನ್ಮಾರ್ಗದ
ಕೈದೀವಿಗೆಯಷ್ಟೇ ಅಗತ್ಯವಾಗಿದೆಯಲ್ಲವೇ?

*

# ಇಸ್ಲಾಮ್ ಮತ್ತು ಜಾಗೀರುದಾರಿ ಪದ್ಧತಿ

ಇತ್ತೀಚೆಗೆ ಓರ್ವ ವಾರ್ಸಿಟಿ ವಿದ್ಯಾರ್ಥಿಯು ಸಮರ್ಪಿಸಿದ ಉಪನ್ಯಾಸದಲ್ಲಿ ಇಸ್ಲಾಮನ್ನು ಜಾಗೀರುದಾರೀ ಪದ್ಧತಿ (Feudalism) ಯೆಂದು ಸಮರ್ಥಿಸಿ, ಆ ಉಪನ್ಯಾಸಕ್ಕಾಗಿ ಆತನಿಗೆ ಸ್ನಾತಕ ಬಿರುದು ದೊರೆಯಿತೆಂದೂ ಕೇಳಿದೆ! ಈ ವಿದ್ಯಾರ್ಥಿ ಮತ್ತು ಅಧ್ಯಾಪಕರ ಬಗ್ಗೆ ನನಗೆ ಅಚ್ಚರಿಯಾಯಿತು. ಪ್ರಾಯಶಃ ವಿದ್ಯಾರ್ಥಿಯು ಹಳಿಗೇಡಿಯಾಗಿರಬಹುದು. ಅಥವಾ ದುರುದ್ದೇಶಿಯಾಗಿರಬಹುದು. ಆದರೆ ಗೌರವಾನ್ವಿತ ಹಾಗೂ ಪರಿಣತ ಅಧ್ಯಾಪಕರನ್ನು ಏನೆಂದು ಹೇಳೋಣ. ಅವರಿಗೇನಾಯಿತು? ಐತಿಹಾಸಿಕ ಘಟನೆಗಳು ಮತ್ತು ಸಾಮಾಜಿಕ ಆರ್ಥಿಕ ಪದ್ಧತಿಗಳನ್ನು ತಿಳಿದುಕೊಳ್ಳುವ ವಿಚಾರದಲ್ಲಿ ಅವರು ಇಷ್ಟೊಂದು ಕೆಳಮಟ್ಟಕ್ಕೆ ಹೇಗೆ ತಲಪಿದರು?

ಆದರೆ, ಆ ಸನ್ಮಾನ್ಯ ಅಧ್ಯಾಪಕರ ಹಿನ್ನೆಲೆಯನ್ನು ಜ್ಞಾಪಿಸಿದಾಗ ನನ್ನ ಅಚ್ಚರಿ ದೂರಾಯವಾಯಿತು. ಅವರು ಭಾವೀ ಜನಾಂಗಗಳನ್ನು ಕೆಡಿಸಲಿಕ್ಕಾಗಿ ವಸಾಹತುಶಾಹೀ ಶಕ್ತಿಗಳು ಬೆಳೆಸಿದ ಹೊಸ ತಲೆಮಾರಿನವರಲ್ಲ, ಅವರು ಉನ್ನತ 'ಶಿಕ್ಷಣ'ಕ್ಕಾಗಿ ಯೂರೋಪಿಗೆ ಕಳುಹಿಸಲ್ಪಟ್ಟವರಾಗಿದ್ದರು. ಮಾತ್ರವಲ್ಲ ಅದು ಸ್ವಸಂಸ್ಕೃತಿ ಮತ್ತು ನಾಗರಿಕತೆಗಳ ಕುರಿತು ಅಜ್ಞ ಹಾಗೂ ಅಪರಿಚಿತರಾದ ವಿಭಾಗವೊಂದನ್ನು ಬೆಳೆಸುವ ಒಳಸಂಚಿನ ಭಾಗವಾಗಿತ್ತು. ಆದ್ದರಿಂದಲೇ ಆ ಅಧ್ಯಾಪಕರು ಸ್ವಯಂ ತಮ್ಮ ತಮ್ಮ ಧಾರ್ಮಿಕ ಪರಂಪರೆಗಳನ್ನೂ ದ್ವೇಷಿಸಿ, ತಮ್ಮ ಇತಿಹಾಸ ಮತ್ತು ವಿಶ್ವಾಸಾದರ್ಶಗಳನ್ನೂ ನಿಂದಿಸುವ ಹಾಗೂ ತಮ್ಮ ಪಾಶ್ಚಾತ್ಯ ಗುರುಗಳ ಹೆಜ್ಜೆಯನ್ನು ಚಾಚೂ ತಪ್ಪದೆ ಪ್ರಾಮಾಣಿಕವಾಗಿ ಅನುಸರಿಸುವ ಅಧ್ಯಾಪಕರಾಗಿದ್ದರು!

ಜಾಗೀರುದಾರೀ ಪದ್ಧತಿ ಎಂದರೇನು? ಅದರ ಗುಣ ವೈಶಿಷ್ಟ್ಯಗಳೇನು?

ಡಾ। ರಾಶಿದ್ ಬರಾವಿಯವರ 'ಸಮಾಜವಾದೀ ಪದ್ಧತಿ' ಎಂಬ ಗ್ರಂಥದಲ್ಲಿ, ಜಾಗೀರುದಾರಿಯನ್ನು ವಿವರಿಸುವ ಭಾಗವನ್ನು ನಾನಿಲ್ಲಿ ಉಲ್ಲೇಖಿಸುತ್ತೇನೆ. ಸ್ವಾಭಾವಿಕವಾಗಿ ಪಾಶ್ಚಾತ್ಯ ಲೇಖಕರನ್ನು ಅವಲಂಬಿಸಿ ಬರೆದಿರುವ ಪ್ರಸ್ತುತ ಗ್ರಂಥದ ವಿವರಣೆಗಳ ಬಗ್ಗೆ ನಾವು ಸಂದೇಹ ಪಡಬೇಕಾಗಿಲ್ಲವಷ್ಟೇ.

"ಜಾಗೀರುದಾರಿಯು ವಿಶಿಷ್ಟ ರೀತಿಯ ಉತ್ಪಾದನಾ ಕ್ರಮ. ಶಾಶ್ವತ ಜೀತಪದ್ಧತಿಯೇ (Serfdom) ಅದರ ಪ್ರಮುಖ ವೈಶಿಷ್ಟ್ಯ. ಭೂಮಾಲಿಕನಿಗೆ ಅಥವಾ ಆತನ ಕಾರ್ಯನಿರ್ವಾಹಕನಿಗೆ ಉತ್ಪಾದನೆಯಿಂದ ನಿಶ್ಚಿತ ಪಾಲು ಪಡೆಯುವ ಹಕ್ಕಿರುವುದು. ಅದನ್ನು ಹಣ ಯಾ ಜೀತದಾಳುಗಳ ದುಡಿಮೆಯ ರೂಪದಲ್ಲಿಯೂ ಪಡೆಯಬಹುದು. ಇದನ್ನು ಸ್ವಲ್ಪ ವಿವರವಾಗಿ ಹೇಳುತ್ತೇನೆ. ಜಾಗೀರುದಾರೀ ಸಮಾಜವು ಎರಡು ಭಿನ್ನ ವರ್ಗಗಳಾಗಿ

ವಿಂಗಡಿಸಲ್ಪಟ್ಟಿದೆ. 1. ಜಾಗೀರುದಾರರು ಅಥವಾ ಭೂಮಾಲಿಕರು. 2. ಒಕ್ಕಲಿಗ
ಅಥವಾ ಜೀತದಾಳುಗಳು. ಇವರಲ್ಲಿ ಹಲವು ವರ್ಗದವರಿದ್ದಾರೆ. ಉದಾ: ರೈತರು, ರೈ
ಕಾರ್ಮಿಕರು, ಗುಲಾಮರು ಇತ್ಯಾದಿ.

ಈ ಪೈಕಿ ಒಂದು ವಿಭಾಗವು ಇತರೆಲ್ಲಾ ವಿಭಾಗಗಳಿಗಿಂತ ಕ್ಷಿಪ್ರವಾ
ಶೋಷಿಸಲ್ಪಟ್ಟಿತು. ರೈತರು ಅರ್ಥಾತ್ ಮೂಲ ಉತ್ಪಾದಕರು. ಅವರಿಗೆ ನಿರ್ದಿ
ಪ್ರಮಾಣದ ಭೂಮಿಯನ್ನು ಸ್ವಾಧೀನವಿರಿಸಿ, ಅದರ ಉತ್ಪಾದನೆಯ ಒಂದು ಪಾಲನ
ಅನುಭೋಗಿಸುವ ಹಕ್ಕಿದ್ದಿತು. ಆದರೆ ಅದರಲ್ಲಿಯೇ ಅವರು ಸ್ವಜೀವನ ವೆಚ್ಚವನ
ಬೇಸಾಯಕ್ಕೆ ಸಂಬಂಧಪಟ್ಟ ಇತರ ಅವಶ್ಯಕತೆಗಳನ್ನೂ ಪೂರೈಸಿಕೊಳ್ಳಬೇಕಾಗಿತು
ಅದಲ್ಲದೇ ಇನ್ನೂ ಅನೇಕ ಜವಾಬ್ದಾರಿಕೆಗಳು ಅವರ ಹೆಗಲ ಮೇಲೆ ಬೀಳುತ್ತಿತ್ತು. ಸ್ವಂ
ಸಲಕರಣೆ ಮತ್ತು ಜಾನುವಾರುಗಳನ್ನು ಬಳಸಿ ದೊರೆಯ ಜಮೀನಿನಲ್ಲಿ ವಾರದಲ್ಲೊಂ
ದಿನ ದುಡಿಯಬೇಕಾಗಿತ್ತು. ಹಬ್ಬ ಮತ್ತು ವಿಶೇಷ ದಿನಗಳಲ್ಲಿ ಕಾಣಿಕೆಗಳನ
ಸಲ್ಲಿಸಬೇಕಾಗಿತ್ತು. ಇವೆಲ್ಲವುಗಳ ಹೊರತು, ಧಾನ್ಯಗಳನ್ನು ಹುಡಿ ಮಾಡಿಸುವುದು ಮತ
ದ್ರಾಕ್ಷಾ ರಸ ಹಿಂಡುವುದೆಲ್ಲವನ್ನೂ ಧನಿಯ ಸ್ವಾಮ್ಯದಲ್ಲಿರುವ ಗಿರಣಿಗಳಲ್ಲಿಯೆ
ಮಾಡಿಸಬೇಕು...

"ಆಡಳಿತ ಮತ್ತು ನ್ಯಾಯಾಧಿಕಾರವನ್ನು ಧನಿಯೇ ನಡೆಸುತ್ತಿದ್ದನು. ಅರ್ಥಾತ
ತನ್ನ ಕ್ಷೇತ್ರದ ಸಾಮಾಜಿಕ-ರಾಜಕೀಯ ಜೀವನದ ನಿಯಂತ್ರಣವು ಧನಿಯ ಹಸ್ತಗಳಲ್ಲಿದ್ದುವ

"ಜಾಗೀರುದಾರೀ ಪದ್ಧತಿಯಲ್ಲಿ ನೇರ ಉತ್ಪಾದಕನಿಗೆ ಅರ್ಥಾತ್ ರೈತನಿ
ನಾವಿಂದು ಅರ್ಥೈಸುವಂತಹ ಯಾವ ಸ್ವಾತಂತ್ರ್ಯವೂ ಇರಲಿಲ್ಲ. ಆತನಿಗೆ ಭೂಮಿ
ಸಂಪೂರ್ಣ ಒಡೆತನದ ಹಕ್ಕು ಇರಲಿಲ್ಲ. ಅದನ್ನು ದಾನ ಮಾಡುವ, ಮಾರಾಟ ಮಾಡು
ಅಥವಾ ಅದರ ವಾರೀಸುದಾರನಾಗುವ ಹಕ್ಕಿರಲಿಲ್ಲ. ಆತನ ಸ್ವಹಿತಾಸಕ್ತಿಗಳಿಗೆ ವಿರುದ್ಧವಾ
ಸ್ವಂತ ವೆಚ್ಚ ಮತ್ತು ಮೇಲ್ವಿಚಾರಣೆಯಿಂದ ಧನಿಯ ಹೊಲದಲ್ಲಿ ದುಡಿಯಲು
ನಿರ್ಬಂಧಿತನಾಗಿದ್ದನು. ಅದಲ್ಲದೇ ತನ್ನ ಜೀವ ಸಂಬಂಧಕ್ಕಾಗಿ ಧನಿಗೆ ಅಪಾರ ತೆ
ನೀಡಬೇಕಾಗಿತ್ತು. ಜಮೀನಿನೊಂದಿಗೆ ಆತನನ್ನೂ ಹಸ್ತಾಂತರಿಸುವುದರಿಂದಾಗಿ ಆತ
ಹೊಸ ಹೊಸ ಧನಿಗಳನ್ನು ಸ್ವೀಕರಿಸಬೇಕಾಗುತ್ತಿತ್ತು. ತನ್ನ ಹೊಲವನ್ನು ತೊರೆ
ಬೇರೊಬ್ಬ ಧನಿಯನ್ನು ಹೊಂದುವ ಸ್ವಾತಂತ್ರ್ಯ ಆತನಿಗಿರಲಿಲ್ಲ. ವಾಸ್ತವದಲ್ಲಿ ಆತ
ಪ್ರಾಚೀನ ಯುಗದ ಗುಲಾಮ ಮತ್ತು ಆಧುನಿಕ ಯುಗದ ಒಕ್ಕಲಿಗರ ಮಧ್ಯದ ಒಂ
ಕೊಂಡಿಯಾಗಿದ್ದನು."

"ಧನಿಯೇ ತನ್ನ ರೈತನಿಗೆ ನೀಡಬೇಕಾದ ಜಮೀನಿನ ಗಾತ್ರವನ್ನು ನಿರ್ಧರಿಸುತ್ತಿದ್ದನ
ಜೀತದಾಳುವು ಸಲ್ಲಿಸಬೇಕಾದ ಸೇವೆಯ ಪ್ರಮಾಣವನ್ನೂ ಆತನೇ ನಿರ್ಣಯಿಸುತ್ತಿದ್ದನ
ಈ ನಿರ್ಧಾರದಲ್ಲಿ ರೈತನ ಜೀವನಾವಶ್ಯಕತೆಗಳನ್ನಾಗಲೀ, ರೂಢಿಯಲ್ಲಿರುವ ಸೇ

ಂಪ್ರದಾಯಗಳನ್ನಾಗಲೀ ಧನಿಯು ಲೆಕ್ಕಿಸುತ್ತಿರಲಿಲ್ಲ."

ಮುಂದುವರಿಯುತ್ತಾ ಅವರು ಬರೆಯುತ್ತಾರೆ:"ಆದ್ದರಿಂದಲೇ 13 ನೇ ಶತಮಾನದ ರ್ಮಿಕರು, ಜೀತದಾಳುಗಳು ಮತ್ತು ರೈತರು 'ಕಾನೂನುಬಾಹಿರ' ಪಲಾಯನ ಂದೋಲನವನ್ನು ಆರಂಭಿಸಿದ್ದರು. ಈ ಆಂದೋಲನವು 'ರೈತರ ಪಲಾಯನ' ಎಂಬ ಸರಿನಿಂದ ಖ್ಯಾತವಾಗಿದೆ. ಇದರಿಂದ ರೈತ ಕಾರ್ಮಿಕರ ತೀವ್ರ ಅಭಾವವುಂಟಾಯಿತು. ಮೊನ್ದಾರರು ಓಡಿಹೋದ ರೈತರನ್ನು ಹಿಡಿದು ತರುವ ತೀವ್ರ ಪ್ರಯತ್ನ ನಡೆಸಿದರು. ತಿಯೊಬ್ಬರು ತಂತಮ್ಮ ಕೈವಶವಾಗುವ ಗುಲಾಮರನ್ನು-ರೈತರನ್ನು ಆಯಾ ಧನಿಗಳಿಗೆ ರಳಿ ಒಪ್ಪಿಸಬೇಕೆಂದು ಪರಸ್ಪರ ಒಪ್ಪಂದ ಮಾಡಿಕೊಂಡರು. ಆದರೆ ಪಲಾಯನ ಕ್ರಿಯೆಯು ಒಂದು ಸಾರ್ವತ್ರಿಕ ಆಂದೋಲನವಾಗಿತ್ತು. ಪ್ರತಿಯೊಬ್ಬ ಧನಿಯೂ ತಮ್ಮ ರ್ಮಿಕರನ್ನು ಕಳೆದುಕೊಂಡಿದ್ದನು. ಬದಲಿಗೆ ಬೇರೆ ಕಾರ್ಮಿಕರ ಅಗತ್ಯವೂ ಇತ್ತು. ಡಿಹೋದ ಕಾರ್ಮಿಕರು ಮರಳಿ ಬರುವ ತನಕ ಕಾಯುವಂತಿರಲಿಲ್ಲ. ಆದ್ದರಿಂದ ಪ್ಪಂದಗಳನ್ನು ಅವರೇ ಸ್ವಯಂ ಉಲ್ಲಂಘಿಸಿದರು. ಅದರೊಂದಿಗೆ ಭೂಮಾಲಿಕರ ರಸ್ಪರ ಸಹಕಾರ ಪ್ರಯತ್ನ ವಿಫಲವಾಯಿತು. ಈ ಸಮಸ್ಯೆಯ ಪರಿಹಾರದ ಬಗ್ಗೆ ಲೋಚಿಸ ತೊಡಗಿದರು. ಹೀಗೆ ಕಡ್ಡಾಯ ಸೇವೆಯ ಬದಲಾಗಿ ಕಾರ್ಮಿಕರಿಗೆ ಹಣದ ಾಪದಲ್ಲಿ ವೇತನ ನೀಡುವ ಪದ್ಧತಿಯು ಆರಂಭಗೊಂಡಿತು.

"ಈ ಮೂಲಕ ಅನೇಕ ರೈತರು ಧಾರಾಳ ಸಂಪಾದಿಸಿದರು. ಆಡಳಿತಾಧಿಕಾರಿ, ಮೊನ್ದಾರ ಮತ್ತು ಮಧ್ಯವರ್ತಿಗಳ ಬೇಡಿಕೆಗಳನ್ನು ಅವರು ಚೆನ್ನಾಗಿ ಶೋಷಿಸಿದರು. ನುಕೂಲ ಪರಿಸ್ಥಿತಿಗಳಲ್ಲಿ ಅವರು ಸ್ವಾತಂತ್ರ್ಯವನ್ನೂ ಖರೀದಿಸಿದರು. 14ನೇ ಶತಮಾನದ ರೆಗೆ ಇಂತಹ ಘಟನೆಗಳು ವ್ಯಾಪಕವಾಗಿ ನಡೆದಿರಲಿಲ್ಲ. ಆದರೂ ಜಾಗೀರುದಾರೀ ಮಾಜದ ಬುನಾದಿಗಳಲ್ಲಿ ಬಿರುಕುಂಟಾಗಿತ್ತೆಂಬುದು ಗಮನಾರ್ಹ. ಅನಂತರದ ಶಮಾನಗಳಲ್ಲಷ್ಟೇ ಪ್ರಸ್ತುತ ಪ್ರಕ್ರಿಯೆ ಪೂರ್ಣಗೊಂಡಿತು."[1]

ಇದುವೇ ಜಾಗೀರುದಾರೀ ಪದ್ಧತಿಯ ಮುಖ್ಯ ವೈಶಿಷ್ಟ್ಯ. ಇತರ ಪದ್ಧತಿಗಳ ಗುಣ ಶಿಷ್ಟ್ಯಗಳೊಂದಿಗೆ ಬೆರೆತು, ಜಾಗೀರುದಾರೀ ಪದ್ಧತಿಯ ಸ್ವರೂಪವು ನಮಗೆ ಸ್ಪಷ್ಟವಾಗದಿರಲಿಕ್ಕಾಗಿ ಅದನ್ನು ಇಲ್ಲಿ ಪ್ರತ್ಯೇಕವಾಗಿ ವಿವರಿಸಲಾಗಿದೆ. ಹಾಗಿದ್ದರೆ, ಇಸ್ಲಾಮಿನಲ್ಲಿ ಂತಹ ಜಾಗೀರುದಾರೀ ಪದ್ಧತಿ ಯಾವಾಗ ಮತ್ತು ಎಲ್ಲಿ ಜ್ಯಾರಿಯಲ್ಲಿದ್ದಿತು? ಹುಶಃ ಇಸ್ಲಾಮೀ ಲೋಕದಲ್ಲಿ ಕೆಲವು ಕಾಲ ರೂಢಿಯಲ್ಲಿದ್ದ ಧನಿ-ಒಕ್ಕಲು ಪದ್ಧತಿಯ ಾಹ್ಯ ರೂಪವು ಸಂಶೋಧಕರಲ್ಲಿ ಭಿನ್ನಾಭಿಪ್ರಾಯವನ್ನು ಹುಟ್ಟಿಸಿರಬಹುದು. ಅಥವಾ ಸ್ಲಾಮಿನ ಮುಖಕ್ಕೆ ಮಸಿ ಬಳೆಯಲಿಕ್ಕಾಗಿ ಕೆಲವು ಕುಬುದ್ಧಿಯವರು ಆ ಹಿನ್ನೆಲೆಯನ್ನು

1. ಡಾ| ರಾಶಿದ್ ಬರಾವಿ-ಅನ್ನಿಝಾಮುಲ್ ಇಶ್ತಿರಾಕಿ- ಪು.22-23.

ಬಳಸಿಕೊಂಡಿರಬಹುದು. ಆದರೆ ಅದು ಕೇವಲ ತಾತ್ಕಾಲಿಕ ಮತ್ತು ಬಾಹ್ಯ ರೂಪವಾಗಿದ್ದಿತು ಈ ಮಂದಿಯ ಚರ್ವಿತಚರ್ವಣ ಆರೋಪಗಳಿಗೆ ಅದರಲ್ಲಿ ಯಾವ ಸಮರ್ಥನೆಯು ಇಲ್ಲ. ಇಸ್ಲಾಮಿ ಸಮಾಜದಲ್ಲಿ ರೂಢಿಯಲ್ಲಿದ್ದ ಸಂಪ್ರದಾಯ ಮತ್ತು ಜಾಗೀರುದಾರಿ ಪದ್ಧತಿಯನ್ನು ನಾವೊಮ್ಮೆ ಪರಸ್ಪರ ಹೋಲಿಸಿ ನೋಡೋಣ.

1. ಶಾಶ್ವತ ಜೀತ ಪದ್ಧತಿ (Serfdom)

2. ರೈತನ ಮೇಲೆ ಹೊರಿಸಲಾದ ಭಾರೀ ಕರ್ತವ್ಯಗಳು. ಅವು ಈ ಕೆಳಗಿನಂತಿವೆ

(ಅ) ವಾರದಲ್ಲೊಂದು ದಿನ ಧನಿಯ ಹೊಲದಲ್ಲಿ ಸಲ್ಲಿಸಬೇಕಾದ ಕಡ್ಡಾಯ-ವೇತನ ರಹಿತ ಸೇವೆ.

(ಆ) ವಿಶೇಷ ಸಂದರ್ಭಗಳಲ್ಲಿ ನಿರ್ವಹಿಸಬೇಕಾದ ಧನಿಯ ಕಡ್ಡಾಯ ಸೇವೆಗಳು

(ಇ) ಹಬ್ಬ, ಹರಿದಿನ ಮತ್ತು ವಿಶೇಷ ದಿನಗಳಲ್ಲಿ ಧನಿಗೆ ಸಲ್ಲಿಸಬೇಕಾದ ಕಪ್ಪಕಾಣಿಕೆಗಳು.

(ಈ) ಧನಿಯ ಗಿರಣಿಯಲ್ಲಿ ಧಾನ್ಯಗಳನ್ನು ಹುಡಿ ಮಾಡಿಸುವುದು. (ದ್ರಾಕ್ಷಿಯ ವಿಷಯವನ್ನು ನಾವು ನಿರ್ಲಕ್ಷಿಸೋಣ. ಯಾಕೆಂದರೆ ಇಸ್ಲಾಮ್ ಮದ್ಯವನ್ನು ನಿಷೇಧಿಸಿದೆಯಷ್ಟೆ.)

3. ರೈತನ ಅಧೀನವಿರಬೇಕಾದ ಜಮೀನಿನ ವಿಸ್ತೀರ್ಣ, ಆತ ಸಲ್ಲಿಸ ಬೇಕಾದ ಸೇವೆ ಮತ್ತು ಸುಂಕಗಳನ್ನು ಧನಿಯೇ ತನ್ನಿಷ್ಟ ಪ್ರಕಾರ ನಿರ್ಣಯಿಸುತ್ತಿದ್ದನು.

4. ಸಾರ್ವಜನಿಕ ಕಾನೂನುಗಳು ಅಸ್ತಿತ್ವದಲ್ಲಿರದ್ದರಿಂದ, ಕಾನೂನು ಮತ್ತು ನೀತಿ ನ್ಯಾಯಗಳ ಜ್ಯಾರಿಯಲ್ಲಿ ಧನಿಯೇ ಸರ್ವತಂತ್ರ ಸ್ವತಂತ್ರನಾಗಿದ್ದನು.

5. ಈ ಪದ್ಧತಿಯು ಶಿಥಿಲಗೊಂಡಾಗ ರೈತರು ತಮ್ಮ ಸ್ವಾತಂತ್ರ್ಯವನ್ನು ಖರೀದಿಸಲು ನಿರ್ಬಂಧಿತರಾದರು.

ಇದೋ ಇಸ್ಲಾಮಿ ಇತಿಹಾಸವು ಒಂದು ತೆರೆದ ಪುಸ್ತಕದಂತೆ ನಿಮ್ಮ ಮುಂದಿದೆ ನೋಡಿರಿ! ಈ ವೈಶಿಷ್ಟ್ಯಗಳು ಅದರಲ್ಲಿ ಎಲ್ಲಾದರೂ ಕಾಣಸುತ್ತಿದೆಯೇ?

ಗುಲಾಮ ಸಂಪ್ರದಾಯದಲ್ಲಿದ್ದುದರ ಹೊರತು, ಇಸ್ಲಾಮಿಗೆ ಚಿರಜೀತ ಪದ್ಧತಿಯು ಸಂಪೂರ್ಣ ಅಪರಿಚಿತವಾಗಿದೆ. ಗುಲಾಮ ಸಂಪ್ರದಾಯದ ವಾಸ್ತವಿಕತೆ, ಅದರ ಹಿನ್ನೆಲೆ ಅದರ ವಿಮೋಚನಾ ಮಾರ್ಗ ಇತ್ಯಾದಿಗಳ ಬಗ್ಗೆ ನಾವು ಹಿಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಿದ್ದೇವೆ. ಜಮೀನಿನ ಗುಲಾಮತನವೂ ಇಸ್ಲಾಮಿಗೆ ಅಪರಿಚಿತವಾಗಿದೆ. ಯುದ್ಧದ ನಿಮಿತ್ತ ಗುಲಾಮರಾದವರು ಯಾವಾಗಲೂ ಅತ್ಯಲ್ಪ ಸಂಖ್ಯೆಯಲ್ಲಿದ್ದರು. ಸ್ವಾತಂತ್ರ್ಯ ದಾನದ ಮೂಲಕ ವಿಮೋಚನೆ ಪಡೆಯಲಾಗದ ಹಾಗೂ ವಿಮೋಚನಾಪತ್ರದ ಮೂಲಕ ಸ್ವಾತಂತ್ರ್ಯವನ್ನು ಅಪೇಕ್ಷಿಸದ ಗುಲಾಮರು ಮಾತ್ರ ತಮ್ಮ ಮಾಲಿಕರ ಕೈಕೆಳಗೆ

ಡಿಯುತ್ತಿದ್ದರು. ಆದರೆ ಐರೋಪ್ಯ ಜಾಗೀರುದಾರಿಯಲ್ಲಿದ್ದ ಜೀತಪದ್ಧತಿಯ ತಾತ್ಪರ್ಯವು ಂದೂ ಹಾಗಿರಲಿಲ್ಲ. ಜಮೀನಿನೊಂದಿಗೆ ರೈತ ಕಾರ್ಮಿಕರ ಸಂಪೂರ್ಣ ವಿಧೇಯತೆಯೂ ದರ ಉದ್ದೇಶವಾಗಿತ್ತು. ಅವರು ಮಾಲಿಕನ ಗುಲಾಮರಾಗಿರಲಿಲ್ಲ. ಬದಲಾಗಿ ಮಣ್ಣಿನ ಲಾಮರಾಗಿದ್ದರು. ಆತನಿಗೆ ಅದನ್ನು ತೊರೆಯುವ ಅಥವಾ ತನ್ನ ಕೊರಳ ಮೇಲೆ ೀಳುವ ಕರ್ತವ್ಯಗಳ ಭಾರದಿಂದ ಮುಕ್ತನಾಗುವ ಯಾವ ಸ್ವಾತಂತ್ರ್ಯವೂ ಇರಲಿಲ್ಲ.

ಇಂತಹ ಗುಲಾಮಗಿರಿ ಅಥವಾ ಸ್ಥಿರ ಜೀತಪದ್ಧತಿ ಇಸ್ಲಾಮಿನಲ್ಲಿ ಎಂದೂ ರಲಿಲ್ಲ. ಮಾನವನ ಎಲ್ಲ ವಿಧದ ಗುಲಾಮತನ ಮತ್ತು ಕಡ್ಡಾಯ ಕರ್ತವ್ಯಗಳು ೃಷ್ಟಿಕರ್ತನಾದ ಅಲ್ಲಾಹನಿಗೆ ಮಾತ್ರ ಮೀಸಲಾಗಿರಬೇಕೆಂಬ ಇಸ್ಲಾಮಿನ ಮೂಲಭೂತ ದ್ಧಾಂತವೇ ಅದಕ್ಕೆ ಕಾರಣವಾಗಿದೆ. ಆದ್ದರಿಂದ ದೇವದಾಸರಿಗೆ ವಿಧೇಯವಾಗಿರುವು ೆಂಬುದು ಅದರ ಮೂಲಭೂತ ಸಿದ್ಧಾಂತಗಳಲ್ಲಿ ಸೇರಿದ್ದಲ್ಲ. ಇಸ್ಲಾಮಿನ ನಿಯಂತ್ರಣಕ್ಕೆ ಧೀನವಲ್ಲದ ಕೆಲವು ಬಾಹ್ಯ ಪರಿಸ್ಥಿತಿಯಿಂದಾಗಿ ಅದರಲ್ಲಿ ಗುಲಾಮ ಸಂಪ್ರದಾಯ ುದ್ಭವಿಸಿದೆ. ಆದರೆ ಒಂದು ವೇಳೆ ಅದು ಉಳಿದುಕೊಂಡಿದ್ದರೂ ಅದು ಕೇವಲ ಾತ್ಕಾಲಿಕ ಪದ್ಧತಿಯಾಗಿದೆ. ಅದನ್ನು ತೊಲಗಿಸುವುದಕ್ಕಾಗಿ ಇಸ್ಲಾಮ್ ಶತಪ್ರಯತ್ನ ಡೆಸುತ್ತಲೂ ಇರುವುದು. ಅದರಿಂದ ವಿಮೋಚಿತರಾಗಲಿಕ್ಕಾಗಿ ಗುಲಾಮರನ್ನೇ ್ರೋತ್ಸಾಹಿಸುತ್ತಲಿರುವುದು. ಆ ನಿಟ್ಟಿನಲ್ಲಿ ಗುಲಾಮರಿಗೆ ಬೇಕಾದ ಸೌಲಭ್ಯ ಮತ್ತು ಂರಕ್ಷಣೆಯನ್ನೂ ಇಸ್ಲಾಮೀ ರಾಷ್ಟ್ರವು ಮಾಡಿಕೊಡುವುದು.

ಹಾಗೆಯೇ ಆರ್ಥಿಕ ವಿಷಯದಲ್ಲಿಯೂ, ಒಬ್ಬ ಮನುಷ್ಯನು ಮತ್ತೊಬ್ಬನಿಗೆ ೋರುವ ವಿಧೇಯತೆಯ ಆಧಾರದಲ್ಲಿ ಇಸ್ಲಾಮಿನ ಆರ್ಥಿಕ ಸೌಧವು ನಿರ್ಮಾಣವಾಗಿಲ್ಲ. ಾವು ಬೆಟ್ಟು ಮಾಡಿರುವ ಗುಲಾಮ ಸಂಪ್ರದಾಯವು ಇದಕ್ಕೆ ಅಪವಾದವಾಗಿದೆ. ಆ ಾಲದ ಆರ್ಥಿಕ ಸಂವಿಧಾನದಲ್ಲಿ ಬೇರೆ ಉತ್ತಮ ಮಾರ್ಗವಿಲ್ಲದಿದ್ದುದರಿಂದ ಇಸ್ಲಾಮ್ ಆ ಪದ್ಧತಿಗೆ ಒಪ್ಪಿಗೆ ನೀಡಿತು. ಅದಕ್ಕೆ ಗುಲಾಮರು ಆಂತರಿಕವಾಗಿಯೂ ಮಾನಸಿಕವಾಗಿಯೂ ವಿಮೋಚಿತರಾಗಿ ಸ್ವಂತ ಜವಾಬ್ದಾರಿಕೆಗಳನ್ನು ವಹಿಸಿಕೊಳ್ಳಲು ಶಕ್ತರಾಗುವ ತನಕವೆಂಬ ಮಿತಿಯನ್ನೂ ಇರಿಸಿತು. ಅವರು ಅದಕ್ಕೆ ಸಿದ್ಧರಾಗುವ ಹಂತದಲ್ಲಿ ಇಸ್ಲಾಮ್ ಅವರಿಗೆ ಸ್ವಾತಂತ್ರ್ಯ ನೀಡುವುದು. ಇಸ್ಲಾಮ್ ಅದರ ಆರ್ಥಿಕ ಸೌಧವನ್ನು ಉದ್ಯೋಗ-ಸ್ವಾತಂತ್ರ್ಯದ ಬುನಾದಿಯಲ್ಲಿ ಕಟ್ಟಿ ಬೆಳೆಸುತ್ತದೆ. ಅರ್ಥಾತ್ ಸಂಪೂರ್ಣ ಸಹಕಾರ ಮತ್ತು ಪರಸ್ಪರ ಸೇವೆಯ ಬುನಾದಿಯಲ್ಲಿ ಯೋಗ್ಯ ಸ್ವೋದ್ಯೋಗವನ್ನು ದೊರಕಿಸಿಕೊಳ್ಳಲಾಗದ ಮತ್ತು ದುಡಿಯುವ ಶಕ್ತಿಯಿಲ್ಲದವರಿಗೆ ನೆರವು ನೀಡಲು ರಾಷ್ಟ್ರವು ಸದಾ ಸಿದ್ಧವಿರುವುದು. ರಾಷ್ಟ್ರದ ಸಂರಕ್ಷಣಾ ಪದ್ಧತಿಯು ಎಲ್ಲರಿಗೂ ಅನ್ವಯವಾಗುವುದರಿಂದ ಯಾವನೇ ವ್ಯಕ್ತಿಯು ತನ್ನ ದೇಹವನ್ನು ಭೂಮಾಲಿಕನಿಗೆ ಒತ್ತೆಯಿಡುವ ಪ್ರಮೇಯವೇ ಬರುವುದಿಲ್ಲ. ಹಾಗಿಲ್ಲದೆಯೇ ಆತನು ಸ್ವಾತಂತ್ರ್ಯ, ಗೌರವ, ಮೂಲ ಜೀವನಾವಶ್ಯಕತೆಗಳನ್ನು ಸಂಪಾದಿಸಬಹುದು.

ಹೀಗೆ, ಇಸ್ಲಾಮ್ ಜಾಗೀರುದಾರೀ ಪದ್ಧತಿಯನ್ನು ನೈತಿಕವಾಗಿಯೂ ಆರ್ಥಿಕವಾಗಿಯೂ ನಿಷಿದ್ಧಗೊಳಿಸಿತು. ಮಾನವನು ಮಣ್ಣಿನ ಗುಲಾಮಗಿರಿಯನ್ನು ತಲಪುವುದಕ್ಕಿಂತ ಮುಂಚಿ ವಾಗಿ ಅದನ್ನು ಗುರುತಿಸಿ, ಅದರಿಂದ ಆತನನ್ನು ಶಾಶ್ವತವಾಗಿ ವಿಮೋಚನೆಗೊಳಿಸಿತು

ಹಾಗೆಯೇ ಜಾಗೀರುದಾರೀ ಪದ್ಧತಿಯಲ್ಲಿ ರೈತನಿಗೆ ಭೂಮಾಲಿಕನೊಂದಿಗಿರು ಕರ್ತವ್ಯಗಳೂ ಇಸ್ಲಾಮಿಗೆ ಅಪರಿಚಿತವಾಗಿವೆ. ಇಸ್ಲಾಮ್ ನೈಜ ಇಸ್ಲಾಮಾಗಿದ್ದ ಕಾಲಗಳಲ್ಲಿ ರೈತರಿಗೆ ಭೂಮಾಲಿಕರೊಡನೆ ಯಾವ ವಿಧದ ವಿಧೇಯತ್ವವೂ ಇರಲಿಲ್ಲ. ಇಸ್ಲಾಮ ಅಂತಹ ಗುಲಾಮ ಕರ್ತವ್ಯಗಳನ್ನು ಕೊನೆಗೊಳಿಸಿ ಉಭಯತ್ರರಲ್ಲಿ ಸ್ವತಂತ್ರ ಸಂಬಂಧವನು ಸ್ಥಾಪಿಸಿತು.

ರೈತ ಮತ್ತು ಭೂಮಾಲಿಕರ ಪರಸ್ಪರ ವ್ಯವಹಾರಗಳಲ್ಲಿ ಇಸ್ಲಾಮ್ 2 ವಿಧಾನಗಳನು ಅಂಗೀಕರಿಸಿದೆ. ಗೇಣಿ ಮತ್ತು ಪಾಲು ಬೇಸಾಯ. ಪ್ರಥಮ ಕ್ರಮದಂತೆ, ರೈತನ ಭೂಮಾಲಿಕನಿಂದ ಉತ್ಪಾದನೆಯ ನಿಷ್ಪತ್ತಿಯಲ್ಲಿ ಗೇಣಿ ನಿಶ್ಚಯಿಸಿ ಜಮೀನನ್ನು ವಹಿ ಕೊಳ್ಳುತ್ತಾನೆ. ಅದರಲ್ಲಿ ಆತನು ತನ್ನಿಚ್ಛೆಯಂತೆ ಬೇಸಾಯ, ಕೆಲಸ ಮತ್ತು ಬೇ ಮಾಡಬಹುದು. ಎರಡನೇಯ ಕ್ರಮದಂತೆ ಅನುಭೋಗದಲ್ಲಿ ಜಮೀನ್ದಾರನಿಗೆ ಪಾಲಿರುತ್ತದೆ ಆದ್ದರಿಂದ ಎಲ್ಲಾ ಖರ್ಚುಗಳನ್ನೂ ಜಮೀನ್ದಾರನೇ ವಹಿಸಿಕೊಳ್ಳಬೇಕು. ರೈತನ ದುಡಿಮೆಯನ್ನೂ, ಭೂಮಾಲಿಕನು ಭಂಡವಾಳವನ್ನೂ ಹೂಡುವರು! ವರ್ಷಾಂತ್ಯದಲ್ಲಿ ಬೆಳೆಯನ್ನು ಈರ್ವರೂ ಪಾಲುಮಾಡಿಕೊಳ್ಳುವರು.

ಈ ಎರಡು ವಿಧಾನಗಳಲ್ಲಿಯೂ ರೈತನು ಜಮೀನ್ದಾರನ ಜೀತದಾಳು ಅಥವ ಗುಲಾಮನಾಗಿರುವ ಪ್ರಮೇಯವಿರುವುದಿಲ್ಲ. ಕಡ್ಡಾಯ ಸೇವೆಯೂ ಇಲ್ಲ. ಪುಕ್ಕಟ ಸೇವೆಯೂ ಇಲ್ಲ. ಅವುಗಳಲ್ಲಿ ಸ್ವಾತಂತ್ರ್ಯ, ಹಕ್ಕು ಮತ್ತು ಕರ್ತವ್ಯಗಳಲ್ಲಿ ಸಮಾನತೆಯಿರುವ ಎರಡು ಕಕ್ಷಿಗಳ ಪರಸ್ಪರ ವ್ಯವಹಾರ ಮಾತ್ರವಿರುವುದು. ಒಂದನೇಯದಾಗಿ ಜಮೀನ ಯಾವುದೆಂದು ನಿರ್ಣಯಿಸುವ ಹಾಗೂ ಧನಿಯೊಂದಿಗಿನ ವ್ಯವಹಾರದಲ್ಲಿ ರೈತನ ಸ್ವತಂತ್ರನಾಗಿರುತ್ತಾನೆ. ಎರಡನೇಯದಾಗಿ, ಗೇಣಿಯ ದರದ ಬಗ್ಗೆ ಚೌಕಾಸಿ ಮಾಡಲೂ ಆತನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಪ್ರಸ್ತುತ ವ್ಯವಹಾರದಲ್ಲಿ ತನಗೆ ಲಾಭವಿಲ್ಲವೆಂದು ಮನಗಂಡರೆ ಆತನಿಗೆ ಅದನ್ನು ತೊರೆಯುವ ಅಧಿಕಾರವೂ ಇರುವುದು. ಜಮೀನ್ದಾರನ ಅದಕ್ಕಾಗಿ ರೈತನಿಂದ ಏನೂ ಕೇಳುವಂತಿಲ್ಲ. ಪಾಲು ಬೇಸಾಯದಲ್ಲಿಯೂ ಸಮಾನ ಹಕ್ಕುಗಳಿವೆ. ಲಾಭನಷ್ಟಗಳಲ್ಲಿ ಅವರು ಸಮಾನ ಪಾಲುದಾರರಾಗಿರುತ್ತಾರೆ.

ಹಾಗೆಯೇ ಜಾಗೀರುದಾರೀ ಪದ್ಧತಿಯಲ್ಲಿರುವ ರಿವಾಜಿಗೆ ವಿರುದ್ಧವಾಗಿ ಹಬ್ಬ ಹರಿದಿನಗಳಂದು ಬಡ ರೈತನಿಗೆ ಜಮೀನ್ದಾರನೇ ಉಡುಗೊರೆ-ಕಾಣಿಕೆಗಳನ್ನು ನೀಡಬೇಕು ಮುಖ್ಯವಾಗಿ ರಮಝಾನ್ ತಿಂಗಳಲ್ಲಿ. ರಮಝಾನ್ ಮುಸ್ಲಿಮರ ಅತಿ ವಿಶಿಷ್ಟ ತಿಂಗಳಾಗಿದೆ. ಅದರಲ್ಲಿ ಬಂಧುಮಿತ್ರಾದಿಗಳ ಭೇಟಿಯು ಧಾರಾಳವಾಗಿ ನಡೆಯುವುದು

ಮು ಸತ್ಕಾರಕೂಟಗಳನ್ನು ಏರ್ಪಡಿಸಿ ನಿರ್ಗತಿಕರಿಗೆ ಭೋಜನ ನೀಡುವ ಸಂದರ್ಭವಾಗಿದೆ. ಮು ಸ್ವಾಭಾವಿಕ ಹಾಗೂ ಮಾನವ ಬುದ್ಧಿಗೆ ಸರಿಹೊಂದುವಂಥದ್ದಾಗಿದೆ. ಶ್ರೀಮಂತನೇ ಣ ವ್ಯಯಿಸಬೇಕು. ಆತನೇ ದಾನ-ಧರ್ಮಗಳನ್ನು ನೀಡಬೇಕು. ಐರೋಪ್ಯ ಾನವೀಯತೆಯು ಭಾವಿಸಿರುವಂತೆ, ಬಡವನು ಶ್ರೀಮಂತನಿಗೆ ನೀಡುವುದಲ್ಲ.

ಈ ಪ್ರಕಾರ, ಜೀತ ಸ್ವರೂಪದ ಯಾವೊಂದು ದಾಸ್ಯತನವೂ ಇಸ್ಲಾಮಿನಲ್ಲಿರಲಿಲ್ಲ. ದಲಾಗಿ ಮಾನವನ ಗೌರವವನ್ನು ಕಾಪಾಡುವ ಸಂಪೂರ್ಣ ಸಮಾನತೆ ಮತ್ತು ಪರಸ್ಪರ ರವದ ಬುನಾದಿಯಲ್ಲಿ ಕಟ್ಟಿ ಬೆಳೆಸಿದ ಸ್ವತಂತ್ರ ಸಂಬಂಧಗಳಷ್ಟೇ ಅಸ್ತಿತ್ವದಲ್ಲಿದ್ದುವು.

ನ್ಯಾಯಬಾಹಿರ ಕಡ್ಡಾಯ ಸೇವೆ ಮತ್ತು ಹೇಯ ಗುಲಾಮತನಕ್ಕೆ ಪ್ರತಿಯಾಗಿ ರೋಪ್ಯ ದೊರೆಗಳು ಅವರಿಗೆ ಒದಗಿಸುತ್ತಿದ್ದ 'ಸಂರಕ್ಷಣೆ'ಯನ್ನು ಇಸ್ಲಾಮೀ ಪದ್ಧತಿಯ ೀಮಂತರು ಪ್ರತಿಫಲಾಪೇಕ್ಷೆಯಿಲ್ಲದೆಯೇ ಸ್ವಯಂ ಪ್ರೇರಣೆಯಿಂದ ಪೂರೈಸುತ್ತಿದ್ದರು. ನಕ್ಕೆ ಪ್ರತಿಯಾಗಿ ಅವರು ದೇವಸಂಪ್ರೀತಿ ಮತ್ತು ತಮ್ಮ ಆರಾಧನೆಗಳ ಪರಿಪೂರ್ಣತೆ ನ್ನು ಮಾತ್ರ ಆಶಿಸಿದ್ದರು. ಇದರಿಂದ ಆದರ್ಶಬದ್ಧ ಪದ್ಧತಿ ಮತ್ತು ಆದರ್ಶಹೀನ ದ್ಧತಿಗಳ ಪರಸ್ಪರ ಭೀಕರ ಅಂತರವನ್ನು ತಿಳಿಯಬಹುದು. ಮೊದಲನೇಯದರಲ್ಲಿ, ಮಾಜ ಸೇವೆಯು ಮಾನವನು ದೇವಸಂಪ್ರೀತಿಗಾಗಿ ಮಾಡುವ ಆರಾಧನೆಯಾಗಿದೆ. ಡನೇಯದರಲ್ಲಿ, ಕಡಿಮೆ ಭಂಡವಾಳ ಹೂಡಿ ಹೆಚ್ಚು ಲಾಭ ಕಬಳಿಸುವ ವ್ಯಾಪಾರೀ ನೋಭಾವದ ವ್ಯವಹಾರವಾಗಿದೆ. ಅದರಲ್ಲಿ ಅಂತಿಮವಾಗಿ ಸತ್ಯವು ಜಯಿಸುವುದಿಲ್ಲ. ಲವಂತನೇ ಜಯಿಸುತ್ತಾನೆ.

ಜಾಗೀರುದಾರೀ ಪದ್ಧತಿಯ ಮೂರನೇ ವೈಶಿಷ್ಟ್ಯವನ್ನು ನೋಡೋಣ. ಇದರಲ್ಲಿ ತನಿಗೆ ನೀಡುವ ಜಮೀನಿನ ಪ್ರಮಾಣವನ್ನು ಭೂಮಾಲಿಕನೇ ನಿರ್ಣಯಿಸುತ್ತಾನೆ. ಗೆಯೇ ರೈತನು ಮಾಡಬೇಕಾದ 'ಕಡ್ಡಾಯ ಸೇವೆ'ಯನ್ನೂ ಆತನೇ ನಿಶ್ಚಯಿಸುತ್ತಾನೆ. ು ಅಲ್ಲಿ ರೂಢಿಯಲ್ಲಿದ್ದ ಮಾಲಿಕ-ಗುಲಾಮ ಸಂಬಂಧಕ್ಕೆ ಸರಿಹೊಂದುವ ಪ್ರದಾಯವಾಗಿದ್ದಿತು.

ಆದರೆ ಸಂಪೂರ್ಣ ಭಿನ್ನ ಬುನಾದಿಯಲ್ಲಿ ಸ್ಥಾಪಿಸಲ್ಪಟ್ಟಿರುವ ಇಸ್ಲಾಮೀ ಪದ್ಧತಿಯಲ್ಲಿ ತಹ ಸಂಪ್ರದಾಯ ಒಮ್ಮೆಯೂ ಇರಲಿಲ್ಲ. ಅಲ್ಲಿ ಮಾಲಿಕನಿಗೆ ಹಿರಿತನವಾಗಲೀ ತನಿಗೆ ದಾಸ್ಯವಾಗಲೀ ಇರಲಿಲ್ಲ. ಗೇಣಿ ಭೂಮಿಯ ಗಾತ್ರವನ್ನು ರೈತನೇ ತನ್ನ ಆರ್ಥಿಕ ಲಕ್ಕನುಸಾರವಾಗಿ ಸ್ವಯಂ ನಿರ್ಧರಿಸುತ್ತಾನೆ. ಇಲ್ಲಿ ಸೇವೆಯು ಉಭಯ ಕಕ್ಷಿಗಳಿಗೂ ರೆಯುತ್ತದೆ. ಜಮೀನ್ದಾರನಿಗೆ ಕೇವಲ ಗೇಣಿಯ ಹಕ್ಕಿರುವುದು. ಪಾಲು ಬೇಸಾಯದಲ್ಲಿ, ತನ ದೈಹಿಕ ಬಲ ಮತ್ತು ಆತನ ಆಶ್ರಯದಲ್ಲಿರುವ ದುಡಿಯುವ ಕೈಗಳಿಗನುಸಾರವಾಗಿ ಮೀನಿನ ಗಾತ್ರವನ್ನು ನಿಗದಿಪಡಿಸಲಾಗುವುದು. ಉಭಯತ್ರರಿಗೂ ಸಮಾನ ಹಕ್ಕಿರುವ ಮೀನಿನಲ್ಲಿ ಬೆಳೆ ಬರುವ ತನಕ ದುಡಿಯುವುದಷ್ಟೇ ರೈತನು ಸಲ್ಲಿಸಬೇಕಾದ ಸೇವೆ.

ಧನಿಯ ಉಳಿದ ಜಮೀನಿನಲ್ಲಿ ರೈತನು ದುಡಿಯಬೇಕಾಗಿಲ್ಲ. ಅದರಲ್ಲಿ ಸೇವೆ ಸಲ್ಲಿಸುವು ಆತನ ಕರ್ತವ್ಯವಾಗಿರಲಿಲ್ಲ.

ಆದರೆ ಜಾಗೀರುದಾರೀ ಪದ್ಧತಿ ಮತ್ತು ಇಸ್ಲಾಮೀ ಪದ್ಧತಿಯಲ್ಲಿರುವ ಪ್ರಾಮುಖ ವ್ಯತ್ಯಾಸವು, ಆಡಳಿತ ಮತ್ತು ನೀತಿನ್ಯಾಯ ಪಾಲನೆಯಲ್ಲಿದೆ. ಜಾಗೀರುದಾರೀ ಸಮಾಜದ ಧನಿಯೇ ಆಡಳಿತ ಮತ್ತು ನೀತಿನ್ಯಾಯ ನಡೆಸುತ್ತಿದ್ದನು. ಅರ್ಥಾತ್ ಆ ಊರಿನವ ರಾಜಕೀಯ-ಸಾಮಾಜಿಕ ಜೀವನದ ಕಡಿವಾಣವು ಆತನ ಕೈಯಲ್ಲಿತ್ತು. ಇದ ಮೂಲಭೂತವಾಗಿ ಇಸ್ಲಾಮಿಗೆ ವಿರುದ್ಧವಾಗಿದೆ.

ಯೂರೋಪಿನ ಚಿಕ್ಕ ಪುಟ್ಟ ರಾಷ್ಟ್ರಗಳಿಗೆ ಯಾವ ಘೋಷಿತ ಕಾನೂನು ಪದ್ಧತಿಯ ಇರಲಿಲ್ಲ. ಅನಂತರ ಕಾಲಗಳಲ್ಲಿ ಐರೋಪ್ಯ ರಾಷ್ಟ್ರ ಗಳ ಕಾನೂನು ಸಂಹಿತೆ ಆಧಾರವಾದ ರೋಮನ್ ಕಾನೂನುಗಳೂ ಅಂದು ಇರಲಿಲ್ಲ. ಜಾಗೀರುದಾರಿ ಪದ್ದತಿಯ ಧನಿಗಳೇ ಸರ್ವಾಧಿಕಾರೀ ಆಡಳಿತಗಾರರಾಗಿದ್ದರು. ಕಾನೂನುನಿರ್ಮಾಣ, ತೀರ್ಪು ಜ್ಯಾ ಇತ್ಯಾದಿಗಳೆಲ್ಲವನ್ನೂ ಅವರೇ ನಿರ್ವಹಿಸುತ್ತಿದ್ದರು. ಪ್ರತಿಯೊಬ್ಬರೂ ರಾಷ್ಟ್ರದೊಳಗೊಂ ರಾಷ್ಟ್ರವನ್ನು ನಿರ್ಮಿಸುತ್ತಿದ್ದರು. ಜಮೀನ್ದಾರರು ಅವಶ್ಯಕ ಸೈನಿಕ ಮತ್ತು ಆರ್ಥಿ 'ಕರ್ತವ್ಯ'ಗಳನ್ನು ಪೂರೈಸುತ್ತಿರುವ ತನಕ ರಾಜ ಅಥವಾ ಸರಕಾರಗಳು ಅವರ ವ್ಯವಹಾರದ ಹಸ್ತಕ್ಷೇಪ ನಡೆಸುತ್ತಿರಲಿಲ್ಲ.

ಆದರೆ ಇಸ್ಲಾಮಿನ ಸ್ಥಿತಿ ಹಾಗಿರಲಿಲ್ಲ. ಅದರಲ್ಲಿ ಸಾರ್ವಜನಿಕ ಕಾನೂ ಪದ್ಧತಿಯ ಬುನಾದಿಯಲ್ಲಿರುವ ಕೇಂದ್ರಾಡಳಿತವಿದೆ. ಎಲ್ಲ ಸಂಸ್ಥಾನಗಳಲ್ಲಿ ಆ ಕಾನೂ ಪದ್ಧತಿಯನ್ನು ಜ್ಯಾರಿಗೊಳಿಸುವುದು ಅದರ ಕರ್ತವ್ಯವಾಗಿದೆ. ಪ್ರತಿಯೊಂದು ಪ್ರದೇ ಗಳಲ್ಲಿಯೂ ಆಡಳಿತಾಂಗ (Executive)ದಿಂದಭಿನ್ನಮತ್ತು ಸ್ವತಂತ್ರವಾದ ನ್ಯಾಯಪೀ ಗಳಿದ್ದುವು. ಆಯಾ ಪ್ರದೇಶಗಳಲ್ಲಿ ಕಾನೂನು ಜ್ಯಾರಿಗೊಳಿಸುವ ಅಧಿಕಾರವು ಅವ ಮೇಲಿತ್ತು. ಆಡಳಿತಗಾರನು ಅಕ್ರಮ ಅಥವಾ ಅನ್ಯಾಯವೆಸಗದಿರುವ ತನಕ ಜನರಿ ಆತನನ್ನು ಧಿಕ್ಕರಿಸುವ ಅಧಿಕಾರವಿಲ್ಲ. ಆಡಳಿತ ರೂಪವು ಬದಲಾಗಿ, ಇಸ್ಲಾಮೀ ನೀತಿ ವ್ಯತಿರಿಕ್ತವಾದ ರಾಜ ವಂಶಾಧಿಪತ್ಯಕ್ಕೆ ತಿರುಗಿದಾಗಲೂ ಇಸ್ಲಾಮೀ ಆಡಳಿತ ಪದ್ಧತಿ ಇತರೆಲ್ಲಾ ವೈಶಿಷ್ಟ್ಯಗಳು ಯಥಾವತ್ತಾಗಿ ಉಳಿದುಕೊಂಡಿದ್ದುವು.

ರಾಷ್ಟ್ರದ ಎಲ್ಲ ವಿಭಾಗಗಳಲ್ಲಿಯೂ ಸರಕಾರದ ಗಮನ ಮತ್ತು ಮೇಲ್ನೋಟವಿತ್ತು ರಾಷ್ಟ್ರದಾದ್ಯಂತ ಒಂದೇ ಕಾನೂನು ಪದ್ಧತಿ ಜ್ಯಾರಿಯಲ್ಲಿತ್ತು. ರಾಷ್ಟ್ರದ ನಾ ಭಾಗಗಳಲ್ಲಿರುವ ಪ್ರಜೆಗಳೆಲ್ಲರೂ ಅದೇ ಕಾನೂನನ್ನು ಅಂಗೀಕರಿಸಿ ಪಾಲಿಸುತ್ತಿದ್ದರ ಕಾನೂನಿನ ವಿವರಣೆಗಳಲ್ಲಿ ಕಾನೂನು ತಜ್ಞರಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿದ್ದಿತ ಜಗತ್ತಿನ ಎಲ್ಲ ಕಾನೂನುಗಳಲ್ಲಿ ಅದು ಸರ್ವಸಾಮಾನ್ಯವಾಗಿದೆ. ಆದ್ದರಿಂದ ರೈತನ ಮೇ ಧನಿಗಳ ಅನಿಸಿಕೆ ಅಥವಾ ಇಚ್ಛೆಗಳು ಕಾನೂನು ಜ್ಯಾರಿಗೊಳಿಸುತ್ತಿರಲಿಲ್ಲ. ಬದಲಾ ಅಲ್ಲಾಹನ ಅಭೀಷ್ಟವಾಗಿತ್ತು. ಸಕಲ ಮಾನವರಿಗಾಗಿ ಆತನು ಆ ಕಾನೂನನ್ನು ನಿರ್ಧರಿಸಿದ್ದಾ

ನ್ನು ಎಲ್ಲ ಪ್ರಜೆಗಳ ಮೇಲೆ ನಿಷ್ಪಕ್ಷ ಮತ್ತು ಸಮಾನವಾಗಿ ಜ್ಯಾರಿಗೊಳಿಸಬೇಕು. ನೂನಿನ ದೃಷ್ಟಿಯಲ್ಲಿ ಸ್ವತಂತ್ರನಾದ ಭೂಮಾಲಿಕ ಮತ್ತು ರೈತ ಮಾತ್ರವಲ್ಲ, ಮಾಲಿಕ ತ್ತು ಗುಲಾಮರೂ ಸಮಾನರು. ಒಬ್ಬರಿನ್ನೊಬ್ಬರ ಸ್ವಾಮ್ಯಕ್ಕೆ ಅಧೀನವಾಗುವ ರ್ವ ಸಂದರ್ಭಗಳಲ್ಲಿಯೂ ಕಾನೂನಿನ ದೃಷ್ಟಿಯಲ್ಲಿ ಅವರೀರ್ವರೂ ಸಮಾನರು.

ಧನಿ ಮತ್ತು ರಾಜನ ಸಂಪ್ರೀತಿಗಾಗಿ ನ್ಯಾಯಾಧೀಶರು ತಮ್ಮ ಆತ್ಮ ಸಾಕ್ಷಿ ಮತ್ತು ನೂನಿಗೆ ವಿರುದ್ಧವಾಗಿ ತೀರ್ಪು ನೀಡಿದ ವಿರಳ ಘಟನೆಗಳು ನಡೆದಿವೆಯೆಂಬುದು ನಿಜ. ರೆ ಆ ಘಟನೆಗಳನ್ನು ಒಂದು ಸಾರ್ವತ್ರಿಕ ಸಂಪ್ರದಾಯವೆಂದು ಪರಿಗಣಿಸಬಾರದು. ಕೆಂದರೆ ಅದು ಐರೋಪ್ಯರೂ ಒಪ್ಪಿಕೊಂಡಿರುವ ಐತಿಹಾಸಿಕ ಸತ್ಯಗಳಿಗೆ ವಿರುದ್ಧವಾಗಿದೆ. ಅಸಾಮಾನ್ಯ ಘಟನೆಗಳನ್ನು ಎತ್ತಿ ತೋರಿಸಿ, ಮಾನವೇತಿಹಾಸದಲ್ಲಿ ಅದ್ವಿತೀಯ ತ್ತು ಅಪೂರ್ವವಾದ ಉಜ್ವಲ ಮಾದರಿಗಳನ್ನು ಕಡೆಗಣಿಸುವುದೂ ಸರಿಯಲ್ಲ. ಹೌದು, ಯಾವುದಕ್ಕೂ ಗತಿಯಿಲ್ಲದ ಓರ್ವ ಕಡುಬಡವನ ಪರವಾಗಿ ನ್ಯಾಯಾಧೀಶನು ರ್ಪು ನೀಡುತ್ತಾನೆ.-ಭೂಮಾಲಿಕ, ಸ್ಥಾನೀಯ ರಾಜ್ಯಪಾಲ ಅಥವಾ ಮಂತ್ರಿಗಳ ದ್ಧವಲ್ಲ. ಆಡಳಿತ ಸೂತ್ರಧಾರಿಯಾದ ಖಲೀಫನ ವಿರುದ್ಧ............ ಆದರೂ ವುದೇ ಗೊಣಗಾಟ ಅಥವಾ ವಿರೋಧವಿಲ್ಲದೇ ಅವರು ಆ ತೀರ್ಪನ್ನು ಸಂತೋಷದಿಂದ ಗತಿಸುತ್ತಾರೆ. ಆಡಳಿತಗಾರನು ಆ ದಿಟ್ಟ ನ್ಯಾಯಾಧೀಶನನ್ನು ಸ್ಥಾನಭ್ರಷ್ಟಗೊಳಿಸಿ ಸೇಡು ಸುವ ಬದಲಾಗಿ ಆತನನ್ನು ಮುಕ್ತಕಂಠದಿಂದ ಶ್ಲಾಘಿಸುತ್ತಾರೆ.

ಹಾಗೆಯೇ, ಅಲ್ಲಿ ಯೂರೋಪಿನಲ್ಲಿ ಭುಗಿಲೆದ್ದ ರೈತ ಪಲಾಯನ ಆಂದೋಲನವೂ ಯಲಿಲ್ಲ. ಯಾಕೆಂದರೆ, ರೈತನಿಗೆ ಒಂದು ಜಮೀನನ್ನು ತೊರೆದು ಬೇರೊಂದು ನೂನನ್ನು ಸ್ವೀಕರಿಸುವ ಸ್ವಾತಂತ್ರ್ಯವಿತ್ತು. ಮಾತ್ರವಲ್ಲ ದಿಗಂತವೇ ಮೇರೆಯಾಗಿರುವ ಲ ಇಸ್ಲಾಮಿ ಸಾಮ್ರಾಜ್ಯದಲ್ಲಿ ಆತನು ಎಲ್ಲಿಬೇಕಿದ್ದರೂ ಸಂಚರಿಸಬಹುದಾಗಿತ್ತು. ವ ಉದ್ಯೋಗವನ್ನು ಬೇಕಿದ್ದರೂ ನಿರ್ವಹಿಸಬಹುದಿತ್ತು. ಒಂದೆಡೆಯಲ್ಲಿಯೇ ಗಿರುವುದಕ್ಕೆ ಕೇವಲ ಅವರ ವೈಯಕ್ತಿಕ ಸೌಲಭ್ಯಗಳಷ್ಟೇ ಪ್ರೇರಕವಾಗಿತ್ತು. ಈಜಿಪ್ಟ್ ಂತಾದೆಡೆಗಳ ರೈತರ ಸ್ಥಿತಿ ಹಾಗಿತ್ತು. ಆದರೆ ಇಸ್ಲಾಮಿ ಲೋಕದ ಇತರೆಡೆಗಳ ರೈತರು ಷ್ಟ ಜಮೀನಿಗೆ ಅಂಟಿಕೊಂಡಿರದೆ ಸಂಚಾರಿಗಳಾಗಿದ್ದರು. ಅವರಿಗೆ ಐರೋಪ್ಯ ರೈತರ ಲಿದ್ದಂತಹ ಕರ್ತವ್ಯಗಳಾಗಲೀ ಜೀತವಾಗಲೀ ಇರಲಿಲ್ಲ.

ರೈತರು ಸ್ವಾತಂತ್ರ್ಯವನ್ನು ಖರೀದಿಸುವ ವ್ಯವಹಾರವೂ ಇಸ್ಲಾಮಿನಲ್ಲಿ ಇರಲಿಲ್ಲ. ರು ಯಥಾರ್ಥದಲ್ಲಿ ಸ್ವತಂತ್ರರಾಗಿದ್ದುದೇ ಅದಕ್ಕೆ ಕಾರಣವಾಗಿದೆ. ಹೀಗಿರುತ್ತಾ ತಂತ್ರ್ಯವನ್ನು ಖರೀದಿಸುವ ಪ್ರಶ್ನೆಯೇ ಇರಲಿಲ್ಲ.

ಅಲ್ಲದೇ ಇಸ್ಲಾಮಿ ರಾಷ್ಟ್ರದಲ್ಲಿ ಹಲವಾರು ಸಣ್ಣ ಜಮೀನುಗಳು ಮತ್ತು ಮಾಲಿಕರಿದ್ದರು. ಪ್ರತಿ ಯೊಬ್ಬ ರೈತನಿಗೂ ತನ್ನ ಅಗತ್ಯಕ್ಕೆ ತಕ್ಕಷ್ಟು ಜಮೀನು

ಮಾತ್ರವಿತ್ತು. ಅದರೊಂದಿಗೆ ಅವರು ಉಪವೃತ್ತಿಯಾಗಿ ನೆಲ-ಜಲಗಳ ಮೂಲಕ ವ್ಯಾಪಾ ವಹಿವಾಟುಗಳನ್ನೂ ನಡೆಸುತ್ತಿದ್ದರು.

ಮಧ್ಯಯುಗದ ಯೂರೋಪಿನ ಮೇಲೆ ದಟ್ಟವಾಗಿ ವ್ಯಾಪಿಸಿದ್ದ ಜಾಗೀರುದಾರಿ ಪದ್ಧತಿಯ ಕರಿಮೋಡದ ಗಾಢಾಂಧಕಾರದಲ್ಲಿ ಇಂತಹ ಯಾವ ಸೌಲಭ್ಯವೂ ಇರಲಿಲ್ಲ ಅದಲ್ಲದೇ ನೈತಿಕ ಅರಾಜಕತೆ ಮತ್ತು ವೈಚಾರಿಕ ದಿವಾಳಿತನವು ಸಾರ್ವತ್ರಿಕವಾಗಿತ್ತು ಒಮ್ಮೆ ಶಿಲುಬೆ ಯುದ್ಧದಲ್ಲಿಯೂ ಮತ್ತೊಮ್ಮೆ ಸ್ಪೈನ್‌ನಲ್ಲಿಯೂ ಇಸ್ಲಾಮನ ಸಂಪರ್ಕಿಸುವಂತಾದ ಬಳಿಕವಷ್ಟೆ ಯೂರೋಪಿನ ವಾತಾವರಣದಲ್ಲಿ ಬದಲಾವ ಆರಂಭಗೊಂಡಿತು. ಹೀಗೆ ನವೋದಯ ಹಂತದಲ್ಲಿ ಯೂರೋಪು ಅದರ ಪ್ರಜ್ಞ ಹೀನತೆಯಿಂದ ಸ್ವಲ್ಪ ಎಚ್ಚೆತ್ತು ಗಾಢಾಂಧಕಾರದಿಂದ ಬೆಳಕಿನೆಡೆಗೆ ನಿಧಾನವಾಗಿ ಚಲಿಸಿತು

*****

ಮುಸ್ಲಿಮ್ ಸಮುದಾಯದಲ್ಲಿ ಇಸ್ಲಾಮೀ ಆಡಳಿತವು, ಜ್ಯಾರಿಯಲ್ಲಿದ್ದಾ ಜಾಗೀರುದಾರೀ ಪದ್ಧತಿಯಿರಲಿಲ್ಲ. ಯಾಕೆಂದರೆ ಇಸ್ಲಾಮಿನ ಆರ್ಥಿಕ, ನೈತಿಕ, ಸೈದ್ಧಾಂತಿ ಮತ್ತು ಕಾನೂನು ನೀತಿಗಳೆಲ್ಲವೂ ಜಾಗೀರುದಾರೀ ಪದ್ಧತಿಗೆ ವಿರುದ್ಧವಾಗಿತ್ತು ಜಾಗೀರುದಾರೀ ಪದ್ಧತಿಗೆ ತಲಪುವ ಎಲ್ಲ ನೀತಿಗಳನ್ನೂ ಅದು ಪ್ರತಿಭಟಿಸಿತು. ಅಮ ಮತ್ತು ಅಬ್ಬಾಸಿಯಾ ಮನೆತನಗಳಲ್ಲಿ ರೂಢಿಯಲ್ಲಿದ್ದ ಹಾಗೂ ಸಂಪೂರ್ಣ ಸಮಾಜ ಅನ್ವಯವಾಗದೆ ಸೀಮಿತ ವಲಯದಲ್ಲಿದ್ದ ಜಾಗೀರುದಾರೀ ಪದ್ಧತಿಯ ಬಾಹ್ಯ ರೂಪಗಳ ತೀವ್ರ ವಿರೋಧವನ್ನು ಎದುರಿಸಬೇಕಾಯಿತು.

ವಾಸ್ತವದಲ್ಲಿ ಮುಸ್ಲಿಮ್ ಲೋಕದಲ್ಲಿ ಜಾಗೀರುದಾರೀ ಕ್ರಮವು ಅಧುನಿ ಇತಿಹಾಸದಲ್ಲಿ ಉಸ್ಮಾನಿಯಾ ಖಿಲಾಫತ್ತಿನ ಅಂತಿಮ ಹಂತದಲ್ಲಿ ಕಂಡುಬರುತ್ತದೆ. ಅ ಜನಸಮಾನ್ಯರಲ್ಲಿ ಆದರ್ಶದ ಒರತೆಯು ಬತ್ತಿದ ಕಾಲ, ಕೇವಲ ನಾಮಧಾರೀ ಮುಸ್ಲಿಮ ಆಡಳಿತಗಾರರ ಕಾಲ, ಉಸ್ಮಾನಿಯಾರ ಆಡಳಿತ ಮತ್ತು 'ಮಹಾತ್ಮರಾದ' ಮುಹಮ ದಾಲಿಯವರ ಸಂತಾನಗಳ ಕಾಲದಲ್ಲಿ ಮಾತ್ರವಿದ್ದಿತು. ಗಾಯದ ಮೇಲೆ ಬರೆ ಎಂಬಂ ಮುಸ್ಲಿಮ್ ಲೋಕದಲ್ಲಿ ಪಾಶ್ಚಾತ್ಯ ಲೌಕಿಕತೆಯ ನುಸುಳುವಿಕೆಯಿಂದ ಈ ಪರಿಸ್ಥಿ ಇನ್ನಷ್ಟು ಕೆಟ್ಟಿತು. ವಿದೇಶಿಯರ ಆಕ್ರಮಣಗಳಿಂದಾಗಿ ಸಮಾಜದ, ಪ್ರೀತಿ-ಸಹಕಾ ಮತ್ತು ಪರೋಪಕಾರ ಪ್ರಜ್ಞೆ ಅಳಿದು ಹೋಯಿತು. ಇದರಿಂದ ಶ್ರೀಮಂತನ ದು ಶೋಷಣಾ ಮನೋವೃತ್ತಿಯೂ, ಬಡವನನ್ನು ತುಳಿದು ದಮನಿಸುವ ಮನೋವೃತ್ತಿಯ ಹೆಚ್ಚಿತು. ಸುಧಾರಣಾ ಚಟುವಟಿಕೆಗಳು ನಡೆಯದೆಡೆಗಳಲ್ಲಿ ರಾಜರು ಮತ್ತು ಆಡಳಿತಗಾ ಆಶ್ರಯದಲ್ಲಿ ಐರೋಪ್ಯ ಜಾಗೀರುದಾರೀ ಪದ್ಧತಿಯ ಸರ್ವ ವೈಶಿಷ್ಟ್ಯ ಗಳನ್ನೊಳಗೊಂ ದುಷ್ಟ ಜಾಗೀರುದಾರೀ ಪದ್ಧತಿಯು ಮುಂದುವರಿಯಿತು. ಅದೆಂದೂ ಇಸ್ಲಾಮಿನ ಇದ್ದುದಲ್ಲ ಅಥವಾ ಅದು ಇಸ್ಲಾಮಿಯವಾಗಿರಲಿಲ್ಲ. ಇಸ್ಲಾಮ್ ಅದಕ್ಕೆ ಜವಾಬ್ದಾರಿಯ

ಸ್ಲಾಮಿ ಆಡಳಿತವು ಜ್ಯಾರಿಯಲ್ಲಿದ್ದರಷ್ಟೇ ಅದಕ್ಕೆ ಜವಾಬ್ದಾರಿಯಾಗಿರಬೇಕಾದುದು. ಂದಿಗೂ ಅಲ್ಲಿ ಸಾಮ್ರಾಜ್ಯತ್ವದ ಪಟ್ಟ ಶಿಷ್ಯರು ರಪ್ತು ಮಾಡಿದ ಐರೋಪ್ಯ ಆಡಳಿತ ಂಪ್ರದಾಯಗಳಂತೆಯೇ ರಾಜ್ಯಭಾರ ನಡೆಯುತ್ತಿದೆ. ಪಾಶ್ಚಾತ್ಯ ಗುರುಗಳ ಆ ನಿಷ್ಠಾವಂತ ಷ್ಯರು ಇಂದಿಗೂ ದಾರಿಗಾಣದೆ ತೊಳಲಾಡುತ್ತಿದ್ದಾರೆ.

ಪ್ರಸ್ತುತ ಚರ್ಚೆಗಳಿಂದ ನಾವು ಕೆಲವು ವಾಸ್ತವಿಕಾಂಶಗಳನ್ನು ಸಂಕ್ಷೇಪಿಸೋಣ. ಧುನಿಕ ಯುಗದಲ್ಲಿ ತೀವ್ರವಾಗುತ್ತಿರುವ ವೈಚಾರಿಕ-ಸೈದ್ಧಾಂತಿಕ ಸಂಘರ್ಷಗಳಿಗೆ ಂಬಂಧಿಸಿದ ಚರ್ಚೆಗಳಲ್ಲಿ ಅವು ನಮಗೆ ಉಪಯುಕ್ತವಾಗಬಹುದು:

1. ಖಾಸಗೀ ಒಡೆತನದ ಅನಿವಾರ್ಯ ಪರಿಣಾಮವೆಂಬ ನೆಲೆಯಲ್ಲಿ ಮಾನವನ ಯಂತ್ರಣಾತೀತವಾಗಿ ಜಾಗೀರುದಾರೀ ಪದ್ಧತಿಯು ರೂಪುಗೊಳ್ಳುವುದಿಲ್ಲ. ಖಾಸಗೀ ಡೆತನ ಸಂಪ್ರದಾಯದ ರೀತಿ ಹಾಗೂ ಜಮೀನ್ದಾರ ಮತ್ತು ರೈತನ ಪರಸ್ಪರ ಸಂಬಂಧದ ್ವರೂಪವು ಜಾಗೀರುದಾರೀ ಪದ್ಧತಿಗೆ ಪ್ರೇರಕವಾಗಿದೆ. ಆದ್ದರಿಂದಲೇ ಮುಸ್ಲಿಮ್ ಲೋಕದಲ್ಲಿ ಖಾಸಗೀ ಒಡೆತನದ ಸಂಪ್ರದಾಯವು ರೂಢಿಯಲ್ಲಿದ್ದರೂ ಜಾಗೀರುದಾರೀ ಪದ್ಧತಿ ಹುಟ್ಟಿಕೊಳ್ಳಲಿಲ್ಲ. ಯಾಕೆಂದರೆ, ಇಸ್ಲಾಮಿ ಪದ್ಧತಿಯು, ಅದರ ಆದರ್ಶ ಸಿದ್ಧಾಂತ ಮತ್ತು ಕ್ರಮದ ಮೂಲಕ ಜನರಲ್ಲಿ ಬೆಸೆಯುವ ಪರಸ್ಪರ ಸಂಬಂಧವು ಜಾಗೀರುದಾರೀ ಪದ್ಧತಿಯ ಬೆಳವಣಿಗೆಗೆ ಅವಕಾಶ ನೀಡುವುದಿಲ್ಲ.

2. ಮಾನವಕುಲವು ಬಯಸಿದರೂ ಬಯಸದಿದ್ದರೂ ಅನಿವಾರ್ಯವಾಗಿ ಎದುರಿಸಲೇಬೇಕಾದ ಯಾವುದೇ ಅರ್ಥಿಕ ಪರಿಸ್ಥಿತಿಯ ನಿಮಿತ್ತ ಐರೋಪ್ಯ ಜಾಗೀರುದಾರೀ ಪದ್ಧತಿಯು ಹುಟ್ಟಿಕೊಂಡದ್ದಲ್ಲ. ಬದಲಾಗಿ, ಜನರ ಭಾವನೆ ಮತ್ತು ಮಾನವೀಯ ಸಂಬಂಧವನ್ನು ನಿಗದಿಪಡಿಸುವ ತತ್ವಸಿದ್ಧಾಂತ ಮತ್ತು ಪದ್ಧತಿಯ ಕೊರತೆಯೇ ಅದಕ್ಕೆ ಕಾರಣವಾಗಿದೆ. ಅವರ ಸಾಮಾಜಿಕ-ಆರ್ಥಿಕ ಸಂಬಂಧಗಳನ್ನು ಸುವ್ಯವಸ್ಥಿತಗೊಳಿಸಲು ಇಸ್ಲಾಮಿನಲ್ಲಿದ್ದಂತಹ ತತ್ವಸಿದ್ಧಾಂತ ಮತ್ತು ಪದ್ಧತಿಯಿರುತ್ತಿದ್ದರೆ ಯೂರೋಪಿನಲ್ಲಿ ಜಾಗೀರುದಾರೀ ಪದ್ಧತಿಯು ಹುಟ್ಟಿ ಬೆಳೆಯುತ್ತಿರಲಿಲ್ಲ.

3. ಮಾನವೇತಿಹಾಸದ ಸಾಮಾನ್ಯ ಪ್ರಕ್ರಿಯೆಯೆಂದು, ವಿರೋಧಾಶ್ರಿತ ಭೌತಿಕ ವಾದವು ವರ್ಣಿಸುತ್ತಿರುವ, ಆರ್ಥಿಕ ವಿಕಾಸದ ವಿವಿಧ ಹಂತಗಳಾಗಿರುವ ಆದಿ ಕಮ್ಯೂನಿಝಮ್, ಗುಲಾಮಗಿರಿ, ಫ್ಯೂಡೆಲಿಝಮ್, ಭಂಡವಾಳಶಾಹಿತ್ವ, ಅಂತಿಮ ಕಮ್ಯೂನಿಝಮ್ ಮುಂತಾದುವುಗಳಿಗೆ ವಾಸ್ತವದಲ್ಲಿ ಐರೋಪ್ಯ ಇತಿಹಾಸದಿಂದ ಹೊರಗೆಲ್ಲಿಯೂ ಸ್ಥಾನವಿರಲಿಲ್ಲ. ಯೂರೋಪಿನ ಹೊರಗೆಲ್ಲಿಯೂ ಇಂತಹ ಹಂತಗಳು ಬಂದಿರಲಿಲ್ಲ. ಬರುವುದು ಅನಿವಾರ್ಯವೂ ಆಗಿರಲಿಲ್ಲ. ಇಸ್ಲಾಮಿ ಲೋಕವು ಅದರ ಇತಿಹಾಸದಲ್ಲಿ ಒಮ್ಮೆಯೂ ಜಾಗೀರುದಾರೀ ಪದ್ಧತಿಯ ಮೂಲಕ ಹಾದು ಹೋಗಿಲ್ಲವೆಂಬ ಸತ್ಯವನ್ನು ನಾವು ಮನಗಂಡೆವು. ಹಾಗೆಯೇ ಅದು ಕೊನೆಗೆ ಕಮ್ಯೂನಿಝಮ್‌ಗೆ ತಲಪುವುದೆಂಬುದೂ ಸಂಭಾವ್ಯವಲ್ಲ. ಅದು ಈ ತನಕ ಕಮ್ಯೂನಿಝಮ್‌ಗೆ ತಲಪಿಲ್ಲ; ಇನ್ನು ಮುಂದೆಯೂ ತಲಪಲಾರದು.

# ಇಸ್ಲಾಮ್ ಮತ್ತು ಭಂಡವಾಳಶಾಹಿತ್ವ

ಭಂಡವಾಳಶಾಹಿತ್ವವು ಇಸ್ಲಾಮಿ ಲೋಕದಲ್ಲಿ ಹುಟ್ಟಿದ್ದಲ್ಲ. ಅದು ಕೈಗಾರಿ
ಕ್ರಾಂತಿಯ ಬಳಿಕ ರೂಪುಗೊಂಡ ಪದ್ಧತಿಯಾಗಿದೆ. ಕೈಗಾರಿಕಾ ಕ್ರಾಂತಿಯು ಪಾಶ್ಚಾ
ಜಗತ್ತಿನಲ್ಲಿ ಆಕಸ್ಮಿಕವಾಗಿ ಸಂಭವಿಸಿದೆ. ನಾವು ಆಕಸ್ಮಿಕವೆಂದೇ ಹೇಳುತ್ತೇವೆ. ಯಾಕೆಂ
ಅದು ಮುಸ್ಲಿಮರ ಮೂಲಕ ಸ್ಪೈನ್‌ನಲ್ಲಿ ಸಂಭವಿಸಬೇಕಾಗಿತ್ತು. ಸ್ಪೈನ್‌ನಲ್ಲಿ ಇಸ್ಲಾಮಿ
ರಾಷ್ಟ್ರವು ಮುಂದೆಯೂ ಅಸ್ತಿತ್ವದಲ್ಲಿರುತ್ತಿದ್ದರೆ, ಧಾರ್ಮಿಕ ಪಕ್ಷಪಾತವು ಅದರ ಕ
ಮುಗಿಸದಿರುತ್ತಿದ್ದರೆ, ವಿಶ್ವಾಸದ ಹೆಸರಿನಲ್ಲಿ ವಿಚಾರಣಾ ನ್ಯಾಯಾಲಯಗಳು ಮುಸ್ಲಿಮರ
ಕ್ರೂರವಾಗಿ ಮರ್ದಿಸದಿರುತ್ತಿದ್ದರೆ, ಖಂಡಿತವಾಗಿಯೂ ಹಾಗೆಯೇ ಸಂಭವಿಸುತ್ತಿತ್ತು

ಹೌದು, ಸ್ಪೈನಿನ ವೈಜ್ಞಾನಿಕ ನವೋದಯವು ಅದರ ಸ್ವಾಭಾವಿಕ ಹಾದಿಯ
ಸಾಗುತ್ತಿದ್ದರೆ, ಅದು ಯಂತ್ರಗಳ ಸಂಶೋಧನೆಗೆ ತಲಪುತ್ತಿತ್ತು. ಆದರೆ ಮುಸ್ಲಿಮರ
ಅಲ್ಲಿಂದ ಹೊಡೆದಟ್ಟಿದ ರಾಜಕೀಯ ಘಟನಾವಳಿಗಳಿಂದಾಗಿ ಲೋಕದ ವೈಜ್ಞಾ
ಮುನ್ನಡೆಯು ಶತಮಾನಗಳ ತನಕ ಹಿಂದುಳಿಯಿತು. ತರುವಾಯ ಯೂರೋಪು ತ
ನಿದ್ರೆಯಿಂದ ಎಚ್ಚರ ಗೊಳ್ಳುವ ತನಕ ಕಾಯಬೇಕಾಯಿತು. ಅದರೊಂದಿಗೆ ಮುಸ್ಲಿಮ
ಪಾಂಡಿತ್ಯ ಮತ್ತು ಮುಸ್ಲಿಮ್ ಶಿಕ್ಷಣಾಲಯಗಳಲ್ಲಿ ಸಮೃದ್ಧವಾಗಿ ಬೆಳೆದಿದ್ದ ಗ್ರೀ
ಪಾಂಡಿತ್ಯಗಳನ್ನೂ ಕೈಯಲ್ಲೆತ್ತಿ ಯೂರೋಪು ಮುಂದೆ ಸಾಗಿತು. ತರುವಾಯ ಸಂಶೋಧ
ರಂಗಗಳಲ್ಲಿ ಹೊಸ ಹೊಸ ಹಾದಿಗಳನ್ನು ತೆರೆಯಿತು.

ಮುಸ್ಲಿಮ್ ಲೋಕವು ಯೂರೋಪಿನ ಆಜ್ಞಾಧೀನವಾಗಿದ್ದ ಕಾಲದ
ಭಂಡವಾಳಶಾಹಿತ್ವವು ಅಲ್ಲಿ ಪ್ರವೇಶಿಸಿತು. ಬಡತನ, ಅಜ್ಞಾನ ಮತ್ತು ರೋಗರುಜಿನಗಳ
ತೊಳಲಾಡುತ್ತಿದ್ದ ಆ ಜನತೆಯ ಮೇಲೆ ಐರೋಪ್ಯರ ಹಿಡಿತವು ಬಿಗಿಗೊಂಡ ಹಂತದ
ಭಂಡವಾಳಶಾಹಿತ್ವವು ಅವರಲ್ಲಿ ಪ್ರಚಾರಗೊಂಡಿತು. ಆದ್ದರಿಂದಲೇ, ಕೆಲವರು ಇಸ್ಲಾಮ
ಭಂಡವಾಳಶಾಹಿತ್ವದ ಗುಣ-ದೋಷಗಳನ್ನು ವಿವೇಚಿಸದೆ ಅದನ್ನು ಯಥಾವತ್ತಾ
ಅಂಗೀಕರಿಸಿದೆಯೆಂದು ಭಾವಿಸಿದರು. ಭಂಡವಾಳಶಾಹಿತ್ವಕ್ಕೆ ನಿಲುಕದ ಅಥವಾ ಅದ
ವಿರುದ್ಧವಾದ ಯಾವೊಂದು ವಿಷಯವೂ 'ಇಸ್ಲಾಮಿ ಪದ್ಧತಿ' ಅಥವಾ ಅದ
ನೀತಿಸಂಹಿತೆಯಲ್ಲಿಲ್ಲವೆಂದು ಅವರು ಭಾವಿಸಿದರು. ಯಾಕೆಂದರೆ ಅದು ಖಾಸಗಿ
ಒಡೆತನಕ್ಕೆ ಅನುಮತಿ ನೀಡುತ್ತದೆ. ಲೋಕದ ಆರ್ಥಿಕ ವಿಕಾಸ ಪ್ರಕ್ರಿಯೆಯಲ್ಲಿ ಅ
ಭಂಡವಾಳಶಾಹೀ ಖಾಸಗಿ ಒಡೆತನವಾಗುವುದಷ್ಟೇ ವ್ಯತ್ಯಾಸ. ಮೂಲ ತತ್ವದ
ಹೊಂದಾಣಿಕೆಯಿರುವುದರಿಂದ ಸ್ವಾಭಾವಿಕವಾಗಿ ಅದರ ಅಂತಿಮ ಪರಿಣಾಮವನ
ಇಸ್ಲಾಮ್ ಅಂಗೀಕರಿಸಬಹುದು!

ಅರ್ಥಶಾಸ್ತ್ರವನ್ನು ಕಲಿತ ಎಲ್ಲರಿಗೂ ತಿಳಿದಿರುವ ಒಂದು ಸಾಮಾನ್ಯ ತತ್ವವೇ ವರಿಗೆ ಉತ್ತರಿಸಲು ಧಾರಾಳ ಸಾಕು. ಅದೇನೆಂದರೆ ಬಡ್ಡಿ ಮತ್ತು ಕಾಳಸಂತೆಯಿಲ್ಲದೇ ಂಡವಾಳಶಾಹಿತ್ವವು ಉದ್ಭವವಾಗದು ಅಥವಾ ಅದರ ವಿರಾಟ್ ಸ್ವರೂಪವನ್ನು ಲಪ್ಪುತ್ತಿರಲಿಲ್ಲ. ಆದರೆ ಇಸ್ಲಾಮಾದರೋ, ಅವೆರಡನ್ನೂ ಭಂಡವಾಳಶಾಹೀ ಪದ್ಧತಿಯ ವಿರ್ಭಾವಕ್ಕಿಂತ ಸಾವಿರ ವರ್ಷಗಳಿಗಿಂತ ಹಿಂದೆಯೇ ನಿಷೇಧಿಸಿದೆ!

ಆದರೆ ಈ ಆರೋಪಕರಿಗೆ ಅವಸರದಿಂದ ಉತ್ತರ ನೀಡಬಯಸುವುದಿಲ್ಲ. ಪ್ರಸ್ತುತ ಮಸ್ಯೆಯ ಕುರಿತು ಸಾವಧಾನವಾಗಿ ಚರ್ಚಿಸೋಣ.

ಕೈಗಾರಿಕಾ ಕ್ರಾಂತಿಯು ಸ್ವಾಭಾವಿಕವಾಗಿ ಮುಸ್ಲಿಮ್ ಜಗತ್ತಿನಲ್ಲಿಯೇ ಂಭವಿಸಿದೆಯೆಂದು ಭಾವಿಸೋಣ. ಹಾಗಿದ್ದರೆ ಅದರ ಅನಿವಾರ್ಯ ಫಲವಾಗಿರುವ ರ್ಥಿಕ ಪರಿಸ್ಥಿತಿಯನ್ನು ಇಸ್ಲಾಮ್ ಹೇಗೆ ಎದುರಿಸುತ್ತಿತ್ತು? ತನ್ನದೇ ವ್ಯವಸ್ಥೆ ಮತ್ತು ೀತಿಸಂಹಿತೆಯ ಆಧಾರದಲ್ಲಿ ಉದ್ಯೋಗ ಮತ್ತು ಉತ್ಪಾದನಾ ಸಂಬಂಧಗಳನ್ನು ಯಾವ ೀತಿಯಲ್ಲಿ ವ್ಯವಸ್ಥೆಗೊಳಿಸುತ್ತಿತ್ತು? ಭಂಡವಾಳಶಾಹಿತ್ವವು ಆರಂಭ ಹಂತದಲ್ಲಿ ಪ್ರಗತಿಪರ ಹೆಜ್ಜೆಯಾಗಿತ್ತೆಂದು, ಅದರ ಪ್ರಬಲ ವಿರೋಧಿಯಾಗಿದ್ದ ಕಾರ್ಲ್‌ಮಾರ್ಕ್ಸ್ ಸೇರಿದಂತೆ ಎಲ್ಲ ಆರ್ಥಿಕ ತಜ್ಞರೂ ಒಪ್ಪಿಕೊಂಡಿದ್ದಾರೆ. ಹಾಗೆಯೇ ಜೀವನದ ವಿಭಿನ್ನ ರಂಗಗಳಲ್ಲಿ ಅದು ಮಾನವಕುಲಕ್ಕೆ ಭವ್ಯ ಕೊಡುಗೆ ನೀಡಿದೆಯೆಂದೂ ಒಪ್ಪುತ್ತಾರೆ. ಉತ್ಪಾದನೆ ಹೆಚ್ಚಿತು. ಸಾರಿಗೆ ಸಂಪರ್ಕ ಸುಧಾರಣೆಗೊಂಡಿತು. ನೈಸರ್ಗಿಕ ಸಂಪನ್ಮೂಲಗಳನ್ನು ಅಭೂತಪೂರ್ವವಾಗಿ ಬಳಸಲಾಯಿತು. ಕಾರ್ಮಿಕರ ಜೀವನಮಟ್ಟವು ಕೃಷಿಯನ್ನು ಅವಲಂಬಿಸಿದ್ದ ಕಾಲಕ್ಕಿಂತ ಎಷ್ಟೋ ಪಟ್ಟು ಉತ್ತಮವಾಯಿತು.

ಆದರೆ ಈ ಸುವರ್ಣ ದೆಸೆಯು ಹೆಚ್ಚುಕಾಲ ಉಳಿಯಲಿಲ್ಲ. ಯಾಕೆಂದರೆ ಭಂಡವಾಳಶಾಹಿತ್ವವು, ಅವರೇ ಹೇಳುವಂತೆ - ಸ್ವಾಭಾವಿಕವಾಗಿ ಭಂಡವಾಳಿಗರ ಬಳಿ ಅಪಾರ ಹಣ ಶೇಖರವಾಗುವ ದುರವಸ್ಥೆಗೆ ತಲಪಿತು. ಆ ಹೆಚ್ಚಳಕ್ಕನುಗುಣವಾಗಿ ಕಾರ್ಮಿಕರ ಕೈಯಲ್ಲಿ ಅದು ಕಡಿಮೆಯಾಯಿತು. ದಾಖಲೆ ಉತ್ಪಾದನೆಗಾಗಿ ಮಾಲಿಕನು ಕಾರ್ಮಿಕನನ್ನು ಬಳಸಿಕೊಂಡನು. ಕಮ್ಯೂನಿಝಮ್‌ನ ದೃಷ್ಟಿಯಲ್ಲಿ ಕೇವಲ ಕಾರ್ಮಿಕನೇ ನೈಜ ಉತ್ಪಾದಕ. ಆದರೂ ಮಾಲಿಕರು ದುಡಿಯುವ ಬಹುಸಂಖ್ಯಾತ ಕಾರ್ಮಿಕ ವರ್ಗಕ್ಕೆ ಮರ್ಯಾದೆಯ ಬದುಕಿಗೆ ಏನೇನೂ ಸಾಲದ ತುಚ್ಛ ಸಂಬಳ ನೀಡುತ್ತಿದ್ದರು. ಉಳಿದ ಸಂಪತ್ತನ್ನು ಮಾಲಿಕರು 'ಸುಲಿಗೆ ಲಾಭ'ವಾಗಿ ವಶಪಡಿಸಿ ಸುಖಾಡಂಬರಗಳಿಂದ ಬಾಳಿದರು.

ಇಲ್ಲಿ ಇನ್ನೊಂದು ವಾಸ್ತವಿಕಾಂಶವಿದೆ. ಕಾರ್ಮಿಕರ ತುಚ್ಛ ವೇತನದಿಂದಾಗಿ ಅವರಿಗೆ ಭಂಡವಾಳಶಾಹೀ ರಾಷ್ಟ್ರದ ಕೈಗಾರಿಕೋತ್ಪನ್ನಗಳನ್ನು ಖರೀದಿಸಿ ಬಳಸಲಾಗುವುದಿಲ್ಲ. ಕೈಗಾರಿಕೋತ್ಪನ್ನಗಳನ್ನು ಖರೀದಿಸಿ ಬಳಸಿಕೊಳ್ಳುವಷ್ಟು ವೇತನವು ಕಾರ್ಮಿಕರಿಗೆ ದೊರೆಯುತ್ತಿದ್ದರೆ ಮಾಲಿಕನ ಬಳಿ ಅಷ್ಟೊಂದು ಲಾಭ ಶೇಖರವಾಗುತ್ತಿರಲಿಲ್ಲ. ಕನಿಷ್ಟ

ಪಕ್ಷ ಅದು ಗಣ್ಯವಾಗಿ ಕಡಿಮೆಯಾಗುತ್ತಿತ್ತು. ಆದರೆ ಇದು ಭಂಡವಾಳಿಗರು ಎಂದೆಂದ
ಒಪ್ಪದಂತಹ ವಿಷಯ. ಅವರು ಉತ್ಪಾದಿಸುವುದು ಲಾಭ ಗಳಿಸಲಿಕ್ಕಾಗಿಯೇ ವಿ
ಉಪಯೋಗಿಸಲಿಕ್ಕಲ್ಲ. ಇದರಿಂದಾಗಿ ಉತ್ಪನ್ನಗಳು ವರ್ಷಂಪ್ರತಿ ರಾಶಿ ಬೀಳುತ್ತ
ಅವುಗಳ ವಿಲೇವಾರಿಗಾಗಿ ಸೂಕ್ತ ಮಾರುಕಟ್ಟೆಗಳನ್ನು ಹುಡುಕಲಾರಂಭಿಸುತ್ತಾರೆ. ಇದರಿಂ
ಸಾಮ್ರಾಜ್ಯತ್ವವು ಹುಟ್ಟಿಕೊಳ್ಳುತ್ತದೆ. ತರುವಾಯ ಮಾರುಕಟ್ಟೆ ಮತ್ತು ಕಚ್ಚಾ ವಸ್ತು
ಮೇಲೆ ನಿಯಂತ್ರಣ ಸಾಧಿಸುವ ಪೈಪೋಟಿ ಆರಂಭವಾಗುತ್ತದೆ. ಕೊನೆಗೆ ಅದು ಭೀ
ಯುದ್ಧಗಳಿಗೆ ಕಾರಣವಾಗುತ್ತದೆ...

ಅದಲ್ಲದೇ, ಕಡಿಮೆ ವೇತನ ಮತ್ತು ಮಿಗತೆ ಉತ್ಪಾದನೆಯೊಂದಿಗೆ ಜಾಗ
ಮಟ್ಟದಲ್ಲಿ ಸಂಭವಿಸಿದ ವ್ಯಾಪಾರ ಕುಸಿತ ಮತ್ತು ಕೊರತೆಯಿಂದಾಗಿ ಭಂಡವಾಳಶಾಹಿತ್ವ
ಅನೇಕ ಬಾರಿ ಭೀಕರ ದುರಂತಕ್ಕೆ ಸಿಲುಕಿದೆ.

ಲೌಕಿಕವಾದಿಗಳು ಮತ್ತು ಕೈಗಾರಿಕಾ ಆರ್ಥಿಕ ನೀತಿಯನ್ನು ನಂಬುವವ
ವಿಚಾರಧಾರೆಯು ಅಚ್ಚರಿದಾಯಕವಾಗಿದೆ. ಮೇಲೆ ಹೇಳಿದ ದುಷ್ಪರಿಣಾಮಗಳಿ
ಭಂಡವಾಳಿಗರ ದುರಾಸೆ ಅಥವಾ ಶೋಷಕ ಮನೋಭಾವವು ಕಾರಣವಲ್ಲ, ಬದಲಾ
ಅದು ಭಂಡವಾಳದಿಂದ ಸಹಜವಾಗಿ ಉದ್ಭವಿಸುವುದೆಂದು ಅವರು ಹೇಳುತ್ತಾರೆ. ಭಾ
ವಿಚಾರಗಳಿರುವ ಮಾನವನನ್ನು ಆರ್ಥಿಕ ಶಕ್ತಿಯ ಮುಂದೆ ಅಶಕ್ತ, ಅಸಹಾಯಕ ಮತ
ನಿಷ್ಕ್ರಿಯನನ್ನಾಗಿ ಚಿತ್ರೀಕರಿಸುವ ಈ ಪ್ರಾಕೃತ ಹಾಗೂ ವಿಸ್ಮಯಕಾರೀ ವಿಚಾರಧಾರೆಯಿಂ
ವಿಮುಖರಾಗೋಣ. ಈ ಹಿಂದೆ ಪ್ರಸ್ತಾಪಿಸಿರುವಂತೆ ಭಂಡವಾಳಶಾಹಿತ್ವವು ಮುಸ್ಲಿಮ
ಲೋಕದಲ್ಲಿ ಹುಟ್ಟಿಕೊಳ್ಳುತ್ತಿದ್ದರೆ ಏನಾಗುತ್ತಿತ್ತು ಎಂಬುದನ್ನು ನೋಡೋಣ.

ಕಾರ್ಲ್ ಮಾರ್ಕ್ಸ್ ಹಾಗೂ ಇತರ ಆರ್ಥಿಕ ತಜ್ಞರು ಒಕ್ಕೊರಳಿನಿಂದ ಹೇಳಿರುವಂ
ಆರಂಭ ಹಂತದಲ್ಲಿ ಭಂಡವಾಳಶಾಹಿತ್ವವು ಮಾನವಕುಲದ ಕ್ಷೇಮಾಭಿವೃದ್ಧಿಗಳಿ
ಪೂರಕವಾಗಿರುತ್ತಿದ್ದರೆ, ಇಸ್ಲಾಮ್ ಅದರ ಹಾದಿಯಲ್ಲಿ ವಿಘ್ನವೊಡ್ಡುತ್ತಿರಲಿಲ್ಲ. ಯಾಕೆಂದ
ಮಾನವಕುಲದ ಶ್ರೇಯೋಭಿವೃದ್ಧಿಗಳನ್ನು ಅದು ದ್ವೇಷಿಸುವುದಿಲ್ಲ, ಬದಲಾಗಿ ಭೂಮಿಯ
ಒಳಿತನ್ನು ಪಸರಿಸುವುದೇ ಅದರ ಮುಖ್ಯ ಧ್ಯೇಯವಾಗಿದೆ.

ಈ ಬಗ್ಗೆ ಇಸ್ಲಾಮ್, ಆದಾಯದಲ್ಲಿ ಭಂಡವಾಳಿಗನೊಂದಿಗೆ ಕಾರ್ಮಿಕನಿಗ
ಪಾಲಿದೆಯೆಂಬ ಮೂಲಭೂತ ನಿಯಮವನ್ನು ಎಲ್ಲ ಭಂಡವಾಳಶಾಹೀ ರಾಷ್ಟ್ರಗಳಿಗಿಂ
ಮುಂಚೆ ಅಂಗೀಕರಿಸಿದೆ. 'ಮಾಲಿಕೀ ಮದ್ಹಬ್'ನ ಕೆಲವು ವಿದ್ವಾಂಸರು ಸಮಾನ ಪಾ
ನೀಡಬೇಕೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಆರ್ಥಿಕಹೊಣೆಗಾರಿಕೆ ಸಂಪೂರ್ಣವಾ
ಭಂಡವಾಳಗಾರನಿಗಿರುವುದು. ದುಡಿಮೆಯ ಹೊರೆಯೆಲ್ಲವೂ ಕಾರ್ಮಿಕನ ಮೇಲಿರುವುದ
ಇಲ್ಲಿ ಮೂಲ ಭಂಡವಾಳ ಸಂಗ್ರಹಕ್ಕಾಗಿ ಮಾಲಿಕನೂ, ಉತ್ಪಾದನೆಗಾಗಿ ಕಾರ್ಮಿಕನ

ಸಲ್ಲಿಸುವ ಸೇವೆಯು ಸಮಾನವಾಗಿದೆ. ಈ ತತ್ವದಂತೆ ಲಾಭದಲ್ಲಿಯೂ ಅವರು ಸಮಾನ ಪಾಲುದಾರರಾಗಿರುತ್ತಾರೆ.

ಇದರಲ್ಲಿ ಇಸ್ಲಾಮಿನ ನ್ಯಾಯಪಾಲನೆಯ ಅದಮ್ಯ ಆಕಾಂಕ್ಷೆಯು ವ್ಯಕ್ತವಾಗುತ್ತದೆ. ಆ ಬಗ್ಗೆ ಇಸ್ಲಾಮ್ ಮೊತ್ತಮೊದಲಾಗಿ ಆಲೋಚಿಸಿ, ಅದನ್ನು ಸ್ವಯಮೇವ ಜ್ಯಾರಿಗೊಳಿಸಿತು. ಅದಕ್ಕೆ ಆರ್ಥಿಕ ಒತ್ತಡವಾಗಲೀ ವರ್ಗ ಸಂಘರ್ಷವಾಗಲೀ ಪ್ರೇರಕವಾಗಿರಲಿಲ್ಲ.

ಆರಂಭ ಹಂತದಲ್ಲಿ ಕೈಗಾರಿಕೆಯು ಸರಳ ಕೈಕಸುಬುಗಳಾಗಿದ್ದುವು. ಚಿಕ್ಕ ಪುಟ್ಟ ಕೈಗಾರಿಕಾ ಕೇಂದ್ರಗಳಲ್ಲಿ ಕೆಲವಾರು ಕಾರ್ಮಿಕರಿರುತ್ತಿದ್ದರು. ನಾವು ಸೂಚಿಸಿದ ಈ ಕಾನೂನು ನಿರ್ಮಾಣವು ಯೂರೋಪಿನ ಇತಿಹಾಸದಾದ್ಯಂತ ಕನಸಿನಲ್ಲಿಯೂ ನೆನಸದಂತಹ ನ್ಯಾಯನಿಷ್ಠ ಕಾರ್ಮಿಕ ಸಂಬಂಧಗಳ ಸ್ಥಾಪನೆಗೆ ಪರ್ಯಾಪ್ತವಿತ್ತು.

ಆದರೆ ಇಸ್ಲಾಮಿ ಕರ್ಮಶಾಸ್ತ್ರವು ಸ್ವಯಂ ಆ ಅತ್ಯುನ್ನತ ಮೇರೆಯಲ್ಲಿಯೇ ನಿಶ್ಚಲವಾಯಿತು. ಯಾಕೆಂದರೆ ನಾಲ್ದೆಸೆಗಳಿಂದಲೂ ಮುಸ್ಲಿಮ್ ಲೋಕದ ಮೇಲೆ ವಿಪತ್ತಿನ ಸರಮಾಲೆಯು ಬಂದೆರಗುತ್ತಿತ್ತು. ಒಮ್ಮೆ ತಾರ್ತಾರಿಗಳಿಂದ, ಇನ್ನೊಮ್ಮೆ ಟರ್ಕಿಯ ಸ್ವೇಚ್ಛಾಧಿಪತಿಗಳಿಂದ, ಮತ್ತೊಮ್ಮೆ ಸ್ಪೈನ್‌ನ ದುರಂತದಿಂದಾಗಿ ನಿರಂತರ ಆಂತರಿಕ ಕಲಹಗಳಿಂದ ಜರ್ಝರಿತವಾಯಿತು. ಅದರಿಂದಾಗಿ ಪ್ರಗತಿಯ ಹಾದಿಯಿಂದ ಅದು ಹಿಂದಕ್ಕೆಸೆಯಲ್ಪಟ್ಟಿತು. ಬೌದ್ಧಿಕ, ಆಧ್ಯಾತ್ಮಿಕ ಮತ್ತು ವೈಚಾರಿಕ ಜಾಡ್ಯ ಮತ್ತು ಅರಾಜಕತೆ ನಖಶಿಖಾಂತ ಬಾಧಿಸಿತು. ಅದರ ದುಷ್ಪರಿಣಾಮಗಳನ್ನು ಅದು ಈ ತನಕ ಅನುಭವಿಸುತ್ತಿದೆ.

ಇಸ್ಲಾಮಿ ಕರ್ಮಶಾಸ್ತ್ರವು ನಿಶ್ಚಲವಾದ ಹಂತದಲ್ಲಿ ಲೋಕವು ಕೈಗಾರಿಕಾ ಕ್ರಾಂತಿಯ ಮೂಲಕ ಶೀಘ್ರವಾಗಿ ಮುನ್ನಡೆಯುತ್ತಿತ್ತು. ದಿನಂಪ್ರತಿ ಹೊಸಹೊಸ ಘಟನೆಗಳು ನಡೆಯುತ್ತಿದ್ದುವು. ಜಾಗತಿಕ ಜನರಲ್ಲಿ ನವನವೀನ ಸಂಬಂಧಗಳು ಬೆಳೆದುಬಂದುವು. ಇಸ್ಲಾಮಿ ಶರೀಅತ್ತಿಗೆ ಅವುಗಳಲ್ಲಿ ಸಹಭಾಗಿಯಾಗಲು ಅಥವಾ ಪ್ರಗತಿಪರ ಲೋಕಕ್ಕೆ ಯೋಗ್ಯವಾದ ಕಾನೂನುಗಳನ್ನು ರೂಪಿಸಲು ಸಾಧ್ಯವಾಗಲಿಲ್ಲ.

ಆದರೆ ಶರೀಅತ್ ಮತ್ತು ಕರ್ಮಶಾಸ್ತ್ರ ಎರಡೂ ಭಿನ್ನವಾಗಿವೆ. ಶರೀಅತ್ ಅಂದರೆ ಸಾಮಾನ್ಯ ತತ್ವಗಳನ್ನೊಳಗೊಂಡಿರುವ ಶಾಶ್ವತ ದಾಖಲೆ. (ಕೆಲವೊಮ್ಮೆ ಅದರಲ್ಲಿ ಸೂಕ್ಷ್ಮ ವಿವರಣೆಗಳೂ ಇರಬಹುದು). ಕರ್ಮ ಶಾಸ್ತ್ರವು, ಶರೀಅತ್ತಿನ ಆಧಾರದಿಂದ ಕಾಲೋಚಿತವಾಗಿ ಕಂಡುಹಿಡಿಯುವ ಹಾಗೂ ಸುಧಾರಣೆಗೆ ಬದ್ಧವಾಗಿರುವ ನೀತಿ ಸಂಹಿತೆಯಾಗಿದೆ. ಅದು ಕಾಲ ಯಾ ಜನಾಂಗಕ್ಕೆ ಸೀಮಿತವಾಗಿರದೆ ಉದಯೋನ್ಮುಖವಾಗಿರುವಂತಹ ಶಾಖೆಯಾಗಿದೆ.

ಭಂಡವಾಳಶಾಹೀ ಪದ್ಧತಿಯ ವಿಕಾಸ ಹಂತದಲ್ಲಿ ಶರೀಅತ್‌ನಿಂದ ವ್ಯಾವಹಾರಿಕ ಕಾನೂನುಗಳನ್ನು ಕಂಡುಹಿಡಿಯಲು ನಾವು ಹೆಚ್ಚೇನೂ ಕಷ್ಟ ಪಡಬೇಕಾಗಿರಲಿಲ್ಲ. ಯಾಕೆಂದರೆ

ಅದು ಅಪಾರ್ಥಕ್ಕೆ ಆಸ್ಪದವಿಲ್ಲದ ಸುಸ್ಪಷ್ಟ ಮತ್ತು ಸುವ್ಯಕ್ತ ಮೂಲಭೂತ ತತ್ವಗಳನು ಒಳಗೊಂಡಿದೆ.

ಅರ್ಥಶಾಸ್ತ್ರಜ್ಞರು ಹೀಗೆನ್ನುತ್ತಾರೆ: ಭಂಡವಾಳಶಾಹೀ ಪದ್ಧತಿಯು ಅದರ ಸರ ಹಾಗೂ ಶುಭ್ರವಾದ ಆರಂಭ ಹಂತದಿಂದ ಇಂದಿನ ಹೀನಾಯ ಹಂತಕ್ಕೆ ವಿಕಾ ಹೊಂದುತ್ತಿರುವಾಗ ಅದು ಕ್ರಮೇಣ ರಾಷ್ಟ್ರೀಯ ಸಾಲವನ್ನು ಅವಲಂಬಿಸಲಾರಂಭಿಸಿತು ಅದರಿಂದ ಆಧುನಿಕ ಭಂಡವಾಳಶಾಹೀ ಪದ್ಧತಿಯ ಜೀವಾಳವಾಗಿರುವ ಬ್ಯಾಂಕಿಂಗ ಪದ್ಧತಿಯು, ಹುಟ್ಟಿಕೊಂಡಿತು. ಬ್ಯಾಂಕುಗಳು ಭಂಡವಾಳಶಾಹೀ ಕೈಗಾರಿಕೆಗಳಿಗೆ 'ಲಾಭ ಮತ್ತು ಬಡ್ಡಿಯ ಆಧಾರದಲ್ಲಿ ಭಾರೀ ಸಾಲ ನೀಡಿದುವು.

ಈ ಕಗ್ಗಂಟಿನ ಆರ್ಥಿಕ ಚರ್ಚೆಗೆ ನಾವು ಇಳಿಯಬೇಕಾಗಿಲ್ಲ. ಇವೆಲ್ಲವು ಸರ್ವಾಂಗೀಕೃ ಸತ್ಯಗಳಾಗಿವೆ. ವಿವರಣೆ ಬಯಸುವವರು ಅರ್ಥಶಾಸ್ತ್ರ ಗ್ರಂಥಗಳನ್ನು ಪರಿಶೀಲಿಸಲಿ. ಈ ರೀತಿಯ ಸಾಲ ಮತ್ತು ಬ್ಯಾಂಕಿಂಗ್ ವ್ಯವಹಾರಗಳು ಬಡ್ಡಿಯಾಧಾರಿತವಾಗಿವೆ ಮತ್ತು ಬಡ್ಡಿಯನ್ನು ಇಸ್ಲಾಮ್ ಸಂಪೂರ್ಣವಾಗಿ ನಿಷೇಧಿಸಿದೆಯೆಂಬುದನ್ನು ಸೂಚಿಸುವುದಷ್ಟೆ ನಮ್ಮ ಉದ್ದೇಶ. ಅರ್ಥ ಶಾಸ್ತ್ರಜ್ಞರು ಭಂಡವಾಳಶಾಹೀ ಸಂಪ್ರದಾಯದ ತೀವ್ರ ಪೈಪೋಟಿಯಿಂದಾಗಿ ಕೊನೆಗೆ ಸಣ್ಣ ಉದ್ದಿಮೆಗಳು ನಾಶವಾಗುತ್ತವೆಂದು ಹೇಳುತ್ತಾರೆ ಅದು ಆಧುನಿಕ ಕಾಲದಲ್ಲಿ ಅನುಭವಕ್ಕೂ ಬಂದಿದೆ. ಅಥವಾ ಸಣ್ಣ ಉದ್ದಿಮೆಗಳ ಬೃಹತ್ ಉದ್ದಿಮೆಗಳೊಡನೆ ವಿಲೀನವಾಗಬೇಕಾಗುವುದು. ಈ ಎರಡು ರೂಪದಲ್ಲಿಯೂ ಏಕಸ್ವಾಮ್ಯ ಮತ್ತು ಅಕ್ರಮ ದಾಸ್ತಾನು ಅನಿವಾರ್ಯವಾಗುತ್ತದೆ. ಅಕ್ರಮ ದಾಸ್ತಾನನು ಪ್ರವಾದಿಯವರ(ಸ) ಕಟ್ಟಾಜ್ಞೆಯ ಮೂಲಕ ಇಸ್ಲಾಮ್ ಕಟುವಾಗಿ ನಿಷೇಧಿಸಿದೆ.[1]

ಈ ಹಿನ್ನೆಲೆಯಲ್ಲಿ ಭಂಡವಾಳಶಾಹಿತ್ವವು ಇಸ್ಲಾಮಿನ ಮಡಿಲಲ್ಲಿ ಹುಟ್ಟಿ ಬೆಳೆಯುತ್ತಿದ್ದರೆ, ಇಂದಿನಂತಹ ದುಷ್ಟ ಶೋಷಣೆ, ಯುದ್ಧಗಳು ಮತ್ತು ಸಾಮ್ರಾಜ ಶಾಹಿತ್ವದ ವಿಕಾಸಕ್ಕೆ ಎಡೆಯಾಗುತ್ತಿರಲಿಲ್ಲ. ಹಾಗಾದರೆ ಅದರ ಸ್ಥಿತಿಯು ಹೇಗಿದ್ದಿ ಬಹುದು? ಅದು ಇಸ್ಲಾಮೀ ಕರ್ಮಶಾಸ್ತ್ರಕ್ಕೆ ನಿಲುಕುವ ಕಿರು ಕೈಗಾರಿಕೆಗಳಿಗೆ ಮಾತ್ರ ಸೀಮಿತವಾಗಿರುತ್ತಿತ್ತೇ? ಅಥವಾ ಇಂದಿನ ಭೀಕರ ವಿಪತ್ತಿಗೆ ಬದಲಾಗಿ, ಕಲ್ಯಾಣ ಹಾದಿ ಯಲ್ಲಿ ಅದು ಸಾಗುತ್ತಿತ್ತೇ? ಕೈಗಾರಿಕೆಯ ಸ್ಥಗಿತವನ್ನು ಇಸ್ಲಾಮ್ ಎಂದಿಗೂ ಮೆಚ್ಚುವುದಿಲ್ಲ ಹೊಸಹೊಸ ವಿಧಾನಗಳಿಂದ ಅದು ಬೆಳೆದು ವಿಕಾಸಹೊಂದಿ ಅಂತಿಮವಾಗಿ ಇಂದಿನ ಅಧಿಕಉತ್ಪಾದನೆ (Mass Production)ಯ ಮಟ್ಟಕ್ಕೆ ಖಂಡಿತವಾಗಿಯೂ ತಲಪುತ್ತದೆ

---

1. ಅಕ್ರಮ ದಾಸ್ತಾನನ್ನು ನಿಷೇಧಿಸುವ ಅನೇಕ ಪ್ರವಾದಿ ವಚನಗಳಿವೆ. ಆ ಪೈಕಿ; ಸಂಕ್ಷಿಪ್ತವಾಗಿದ್ದರು ಸಮಗ್ರವಾದ ಒಂದು ವಚನವನ್ನು ಉಲ್ಲೇಖಿಸುತ್ತೇನೆ: 'ಅಕ್ರಮ ದಾಸ್ತಾನುಗಾರ ಪಾಪಿ'
(ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ)

19 ಮತ್ತು 20ನೇ ಶತಮಾನಗಳಲ್ಲಿ ಯೂರೋಪಿನಲ್ಲಿ ರೂಢಿಯಲ್ಲಿದ್ದುದಕ್ಕಿಂತ ಭಿನ್ನವಾದ ಉತ್ಪಾದನಾ ಸಂಬಂಧಗಳು ಬೆಳೆಯುತ್ತಿದ್ದುವು. ಆರ್ಥಿಕ ನ್ಯಾಯ ನಿರ್ಮಾಣವು ಇಸ್ಲಾಮಿನ ವಿಶಿಷ್ಟ ಸಿದ್ಧಾಂತಕ್ಕನುಗುಣವಾಗಿ ವಿಕಾಸ ಹೊಂದುತ್ತಿದ್ದರೆ ಖಂಡಿತವಾಗಿಯೂ ಹಾಗೆಯೇ ಸಂಭವಿಸುತ್ತಿತ್ತು. ಇದಕ್ಕೆ ಮಾಲಿಕನಿಗೂ ಕಾರ್ಮಿಕನಿಗೂ ಸಮಾನ ಪಾಲೆಂಬ ಇಸ್ಲಾಮಿನ ಸಿದ್ಧಾಂತವು ಉದಾಹರಣೆಯಾಗಿದೆ.

ತನ್ಮೂಲಕ ಇಸ್ಲಾಮ್ ಏಕ ಕಾಲದಲ್ಲಿ ಎರಡು ಕೆಡುಕುಗಳನ್ನು ತಡೆಯುತ್ತದೆ. ಶರೀಅತ್ ನಿಷಿದ್ಧಗೊಳಿಸಿರುವ ಬಡ್ಡಿ ಮತ್ತು ಅಕ್ರಮ ದಾಸ್ತಾನಿನ ಕೆಡುಕುಗಳಿಂದ ಅದು ರಕ್ಷಿಸುತ್ತದೆ. ಕಾರ್ಮಿಕರನ್ನು ಮಾಲಿಕನ ಅಕ್ರಮ ಶೋಷಣೆಗಳಿಗೆ ಬಲಿಯಾಗಲು ಅದು ಬಿಡಲಾರದು. ಅವರ ರಕ್ತಹೀರಿ ಬಡತನ ಮತ್ತು ಅಧಃಪತನದ ಪಾತಾಳಕ್ಕೆ ಅವರನ್ನು ದೂಡಲು ಇಸ್ಲಾಮ್ ಒಪ್ಪಲಾರದು. ಅದು ಇಸ್ಲಾಮ್‌ನಿಂದ ಸರ್ವಥಾ ಅಂಗೀಕರಿಸಲಾಗದ ವಿಷಯವಾಗಿದೆ.

ಕಠಿಣ ಪರೀಕ್ಷೆ, ವರ್ಗ ಸಂಘರ್ಷ ಮತ್ತು ಆರ್ಥಿಕ ಸ್ಥಿತಿಯ ಒತ್ತಡಗಳ ವಿನಾ ಇಸ್ಲಾಮಿಗೆ ಅಂತಹ ನ್ಯಾಯ ನಿರ್ಮಾಣ ಸಾಧ್ಯವಿಲ್ಲವೆಂದು ಯಾರೂ ವಾದಿಸಬೇಕಾಗಿಲ್ಲ. ಗುಲಾಮಗಿರಿ, ಜಾಗೀರುದಾರೀ ಪದ್ಧತಿ ಮತ್ತು ಪ್ರಾಥಮಿಕ ಭಂಡವಾಳಶಾಹಿತ್ವದ ವಿಷಯದಲ್ಲಿ ಮಾನವಕುಲದ ವಿಕಾಸ ಹಂತಗಳನ್ನು ಇಸ್ಲಾಮ್ ಯಾವುದೇ ಒತ್ತಡವಿಲ್ಲದೇ ಸ್ವಯಮೇವ ದಾಟಿದೆಯೆಂಬುದನ್ನು ಈಗಾಗಲೇ ವಸ್ತುನಿಷ್ಠವಾಗಿ ಸಮರ್ಥಿಸಲಾಗಿದೆ. ಫ್ರೆಡ್ರಿಕ್ ಏಂಜಲ್ಸ್ ಹಾಗೂ ಇತರ ಕಮ್ಯೂನಿಸ್ಟರು ಟೀಕಿಸುವ ಶಾಶ್ವತ ಸತ್ಯ ಮತ್ತು ಶಾಶ್ವತ ನ್ಯಾಯವನ್ನು ಬಾಹ್ಯ ಒತ್ತಡವಿಲ್ಲದೆಯೇ ಸ್ವಚಿಂತನೆ ಮತ್ತು ಸ್ವಯಂಪ್ರೇರಣೆಯಿಂದ ಇಸ್ಲಾಮ್ ಸಾಧಿಸಿತು. ರಶ್ಯವೂ ಜಾಗೀರುದಾರೀ ಪದ್ಧತಿಯಿಂದ ಕಮ್ಯೂನಿಝ್ಮ್‌ಗೆ ಧುಮುಕಿತು. ಅಲ್ಲಿ ಭಂಡವಾಳಶಾಹಿತ್ವ ಹುಟ್ಟಲಿಲ್ಲ. ಹಾಗೆ ಕಾರ್ಲ್‌ಮಾರ್ಕ್ಸ್‌ನ ಸಿದ್ಧಾಂತಗಳನ್ನು ಅಂಗೀಕರಿಸಿದ ರಶ್ಯವೇ ಮಾರ್ಕ್ಸ್‌ನ ವಿಕಾಸ ಸಿದ್ಧಾಂತವನ್ನು ಹುಸಿಗೊಳಿಸಿದೆ.

ಭಂಡವಾಳಶಾಹಿತ್ವದ ಸಹಜಾತ ಸಾಮ್ರಾಜ್ಯತ್ವ, ಯುದ್ಧ ಮತ್ತು ಶೋಷಣೆ ಇತ್ಯಾದಿ ಸಾರ್ವತ್ರಿಕ ಕೆಡುಕುಗಳನ್ನು ಇಸ್ಲಾಮ್ ಸರ್ವಥಾ ಸಹಿಸದು. ಸ್ವಾಭಾವಿಕವಾಗಿ ಅವು ಇಸ್ಲಾಮಿನಿಂದ ಹೊರಗಿವೆ. ಸಾಮ್ರಾಜ್ಯತ್ವ ಮತ್ತು ಶೋಷಣೆಗಾಗಿ ಯುದ್ಧದ ಕರೆ ನೀಡುವುದನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ಇಸ್ಲಾಮ್ ಅಂಗೀಕರಿಸುವ ಯುದ್ಧವು ಕೇವಲ ಪ್ರತಿಭಟನೆ ಅಥವಾ ಶಾಂತಿಯುತ ಆದರ್ಶ ಪ್ರಚಾರಕ್ಕೆ ಸೀಮಿತವಾಗಿದೆ. ಸಾಮ್ರಾಜ್ಯತ್ವವು ಮಾನವೇತಿಹಾಸದ ಒಂದು ಅನಿವಾರ್ಯ ಹಂತ; ಅದನ್ನು ಉತ್ತಮ ಆದರ್ಶ, ಸದಾಚಾರ, ಸದ್ಗುಣಗಳಿಂದ ನಿರೋಧಿಸಲು ಸಾಧ್ಯವಿಲ್ಲ; ಉತ್ಪಾದಕ ರಾಷ್ಟ್ರಗಳಲ್ಲಿ ರಾಶಿಬೀಳುವ ಸರಕುಗಳ ಮಾರಾಟಕ್ಕೆ ವಿದೇಶೀ ಮಾರುಕಟ್ಟೆಗಳು ಅಗತ್ಯವಾಗುತ್ತವೆ; ಇತ್ಯಾದಿ ಕಾರಣಗಳಿಂದಾಗಿ ಹುಟ್ಟಿಕೊಳ್ಳುವ ಆರ್ಥಿಕ ಸಮಸ್ಯೆಯೇ ಯುದ್ಧವೆಂದು

ಕಮ್ಯೂನಿಸ್ಟರು ವಾದಿಸುತ್ತಾರೆ. ಈ ವಾದಕ್ಕೆ ಇಸ್ಲಾಮಿನಲ್ಲಿ ಯಾವ ಸ್ಥಾನವೂ ಇಲ್ಲ ಅವರ ವಾದದಂತೆಯೇ ಅದರ ಅಗತ್ಯವೂ ಇಲ್ಲ. ರಶ್ಯವು ಈ ಸಮಸ್ಯೆಯನ ಬೇರೊಂದು ರೀತಿಯಿಂದ ವ್ಯವಹರಿಸುತ್ತಿದೆಯೆಂದು ಅವರು ಹೇಳುತ್ತಾರೆ. ದುಡಿಮೆಯ ಸಮಯವನ್ನು ಕಡಿಮೆಗೊಳಿಸಿ, ಕಾರ್ಮಿಕರ ವೇತನವನ್ನು ಹೆಚ್ಚಿಸಿ, ಸಾಮ್ರಾಜ್ಯತ್ವ ಅವಕಾಶ ನೀಡುವ ಅಧಿಕ ಉತ್ಪಾದನೆಯನ್ನು ತಡೆಯಬಹುದಂತೆ. ಕಮ್ಯೂನಿಝುಮ ತಲಪಿದೆಯೆಂದು ಹೇಳುವ ಈ ಮಾರ್ಗವು ಕೇವಲ ಅವರಿಗೆ ಸೀಮಿತವಲ್ಲ. ಸಾಮ್ರಾಜ್ಯತ ಮೋಹವು ಮಾನವಕುಲದಲ್ಲಿ ಹಿಂದೆಯೇ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ. ಅದು ಭಂಡವಾಳ ಶಾಹೀ ಪದ್ಧತಿಯಲ್ಲಿಯೂ ಅಸ್ತಿತ್ವದಲ್ಲಿತ್ತು. ಮಾತ ವಲ್ಲ, ಭಂಡವಾಳಶಾಹಿತ್ವವು ಅತ್ಯಾಧುನಿಕ ಮಾರಕಾಸ್ತ್ರಗಳನ್ನು ಬಳಸಿ ಅದರ ಬೀಭತ ಸ್ವರೂಪವನ್ನೂ ಪ್ರದರ್ಶಿಸಿತು.

ಮೂಲಭೂತವಾಗಿ ನೋಡಿದರೆ ಹಳೆಯ ರೋಮನ್ ಸಾಮ್ರಾಜ್ಯವು ಪೈಶಾಚಿಕತೆಯ ವಿಷಯದಲ್ಲಿ ಇಂದಿಗಿಂತ ಸ್ವಲ್ಪವೂ ಭಿನ್ನವಾಗಿರಲಿಲ್ಲ. ಶಕ್ತನು ಅಶಕ್ತನನ ಶೋಷಿಸುವುದರಲ್ಲಿಯೂ ಅವೆರಡೂ ಸಮಾನವಾಗಿದ್ದುವು. ಈ ನಿಟ್ಟಿನಲ್ಲಿ ಇಸ್ಲಾಮಿ ಪದ್ಧತಿಯು ಪವಿತ್ರವಾಗಿತ್ತೆಂಬುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ. ಯಾಕೆಂದರೆ ಅದ ಯುದ್ಧಗಳು ಕೆಲವು ವಿರಳ ಘಟನೆಗಳನ್ನು ಬಿಟ್ಟರೆ, ಶೋಷಣೆ ಮತ್ತು ಮರ್ದನ ತಾಂಡವಗಳಿಂದ ಸಂಪೂರ್ಣ ಮುಕ್ತವಾಗಿತ್ತು. ಆದ್ದರಿಂದಲೇ ಬೃಹತ್ ಕೈಗಾರಿಕೆಗ ಸ್ಥಾಪನೆಯಾಗುತ್ತಿದ್ದರೆ ಹೆಚ್ಚುವರಿ ಉತ್ಪಾದನೆಯ ಸಮಸ್ಯೆಯನ್ನು ಯುದ್ಧ ಮತ ಸಾಮ್ರಾಜ್ಯತ್ವವಿಲ್ಲದೆಯೇ ಪರಿಹರಿಸಲು ಅದು ಸುಶಕ್ತ ಪದ್ಧತಿಯಾಗಿತ್ತು. ವಾಸ್ತವದಲ ಅಧಿಕ ಉತ್ಪಾದನೆಯ ಸಮಸ್ಯೆಯು ಭಂಡವಾಳಶಾಹಿತ್ವದ ಇಂದಿನ ವ್ಯವಸ್ಥೆಯಿಂದಲೆ ಹುಟ್ಟಿಕೊಂಡಿದೆ. ಅದರ ಬುನಾದಿಯನ್ನು ಸುಧಾರಿಸುತ್ತಿದ್ದರೆ ಹೀಗಾಗುತ್ತಿರಲಿಲ್ಲ.[1]

ಅದಲ್ಲದೇ ಸಮಾಜದ ಬಹುತೇಕ ಮಂದಿ ಬಡತನ ಮತ್ತು ಸಂಕಷ್ಟಗಳಿಂ ನರಳುತ್ತಿರುವಾಗ, ಸಂಪತ್ತು ಸಂಪೂರ್ಣವಾಗಿ ಕೆಲವೇ ಮಂದಿಯ ಬಳಿ ರಾ ಬೀಳುವುದನ್ನು ಇಸ್ಲಾಮೀ ಆಡಳಿತಗಾರನು ಅಸಹಾಯಕವಾಗಿ ನೋಡುವುದಿಲ್ಲ. ಯಾಕೆಂದರ ಅದು ಸಂಪತ್ತು ಸಮಾಜದ ಎಲ್ಲ ವಿಭಾಗಗಳಲ್ಲಿಯೂ ವಿಕೇಂದ್ರೀಕರಣವಾಗಬೇಕೆಂ ಮೂಲ ಸಿದ್ಧಾಂತಕ್ಕೆ ವಿರುದ್ಧವಾಗಿದೆ. ಕುರ್‌ಆನ್ ಹೇಳುತ್ತದೆ:

"(ಸಂಪತ್ತು) ನಿಮ್ಮ ಮಧ್ಯೆ ಇರುವ ಶ್ರೀಮಂತರಲ್ಲಿಯೇ ಸುತ್ತಾಡದಿರಲಿಕ್ಕಾಗಿ. (ಅಲ್‌ಹಶ್ರ್:7

ಶರೀಅತ್‌ನ ಶಾಸನಗಳ ಜ್ಯಾರಿಗಾಗಿ ಅನ್ಯಾಯ ಮತ್ತು ಆಪತ್ತಿಗೆ ಎಡೆಗೊಡದೆ ಎ

1. ವಿವರಣೆಗೆ ಉಸ್ತಾದ್ ಅಬುಲ್ ಆಲಾ ಮೌದೂದಿಯವರ ಬಡ್ಡಿ ಕೃತಿಯನ್ನು ನೋಡಿರಿ. -ಅನ

ಮಗಳನ್ನೂ ಕೈಗೊಳ್ಳಬೇಕಾದುದು ಆತನ ಕರ್ತವ್ಯವಾಗಿದೆ. ಇದಕ್ಕಾಗಿ ಆತನು
ಲ್ಲಾಹನೊಂದಿಗಿರುವ ಕರ್ತವ್ಯದ ಹೊರತು, ಮಿತಿ ಮೇರೆಯಿಲ್ಲದ ವ್ಯಾಪಕ ಅಧಿಕಾರ
ಲವನ್ನು ಬಳಸಬಹುದು. ಇಸ್ಲಾಮಿ ಪದ್ಧತಿಯ ಸಾಮಾನ್ಯ ಸ್ವರೂಪವು ಏಕಸ್ವಾಮ್ಯವನ್ನು
ಡೆಯುವ ರೀತಿಯಲ್ಲಿದೆ. ವಾರಿಸು ಹಕ್ಕಿನ ನೀತಿಯು ಇದಕ್ಕೆ ಸಾಕ್ಷಿಯಾಗಿದೆ. ಪ್ರತಿಯೊಂದು
ಲೆಮಾರಿನ ಆರಂಭದಲ್ಲಿ ಸಂಪತ್ತು ವಿಕೇಂದ್ರೀಕರಣವಾಗುತ್ತದೆ. ವರ್ಷಕ್ಕೊಮ್ಮೆ
ಮೂಲಧನ ಮತ್ತು ಲಾಭಾಂಶದಲ್ಲಿ 2½ರಂತೆ ಹಂಚಲ್ಪಡುವ ಝಕಾತ್ ಪದ್ಧತಿಯೂ
ಇದನ್ನೇ ಬಯಸುತ್ತದೆ. ಕೆಲವು ತುರ್ತು ಸಂದರ್ಭಗಳಲ್ಲಿ ರಾಷ್ಟ್ರದ ಬೊಕ್ಕಸಕ್ಕೆ
ಅಗತ್ಯವಿರುವ ಹಣವನ್ನು ಸಾರ್ವಜನಿಕರಿಂದ ವಸೂಲು ಮಾಡುವ ಭದ್ರತಾ ವ್ಯವಸ್ಥೆಯೂ
ಇದೇ ತತ್ವವನ್ನು ಅವಲಂಬಿಸಿದೆ. ಸಂಪತ್ತನ್ನು ನಿಕ್ಷೇಪಿಸಿರಿಸುವುದನ್ನು ಇಸ್ಲಾಮ್
ವಿರೋಧಿಸುತ್ತದೆ. ಗುತ್ತೇದಾರಿ ಭಂಡವಾಳಶಾಹಿತ್ವವನ್ನು ಬೆಳೆಸುವ ಪ್ರಥಮ ಹಾಗೂ
ಪ್ರಧಾನ ಅಂಶವಾಗಿರುವ ಬಡ್ಡಿಯನ್ನು ನಖಶಿಖಾಂತ ನಿಷಿದ್ಧಗೊಳಿಸಿತು. ಎಲ್ಲಕ್ಕಿಂತ
ಹೆಚ್ಚಾಗಿ ಇಸ್ಲಾಮಿ ಸಮಾಜದ ವೈಯಕ್ತಿಕ ಸಂಬಂಧಗಳ ಸ್ವರೂಪವೇ ಪರಸ್ಪರ
ಭದ್ರತೆಯ ಬುನಾದಿಯಲ್ಲಿದೆ.

ಆ ಬಳಿಕ ರಾಷ್ಟ್ರದ ಕಾರ್ಮಿಕರ ಮೂಲ ಬೇಡಿಕೆಗಳೆಂದು ಪ್ರವಾದಿವರ್ಯರು(ಸ)
ಘೋಷಿಸಿರುವ ವಿಷಯಗಳನ್ನು ನೋಡಿರಿ: ನಮ್ಮೋರ್ವ ಕಾರ್ಮಿಕನಿಗೆ ಮನೆಯಿಲ್ಲದಿದ್ದರೆ,
ಆತನೊಂದು ಮನೆ ಕಟ್ಟಿಕೊಳ್ಳಲಿ; ಆತನಿಗೆ ಪತ್ನಿಯಿಲ್ಲದಿದ್ದರೆ ಓರ್ವ ಪತ್ನಿಯನ್ನೂ,
ಸೇವಕನಿಲ್ಲದಿದ್ದರೆ ಓರ್ವ ಸೇವಕನನ್ನೂ, ವಾಹನವಿಲ್ಲದಿದ್ದರೆ ಒಂದು ವಾಹನವನ್ನೂ
ಒದಗಿಸಿ ಕೊಡಿರಿ. (ಅಹ್ಮದ್-ಅಬೂ ದಾವೂದ್)

ಈ ಭದ್ರತಾ ವ್ಯವಸ್ಥೆಯು ಕೇವಲ ಸರಕಾರೀ ಅಧಿಕಾರಿಗಳಿಗೆ ಸೀಮಿತವೆಂಬುದನ್ನು
ಬುದ್ಧಿ ಒಪ್ಪುವುದಿಲ್ಲ. ಇವು ಸಮಾಜದ ಪ್ರತೀಯೊಬ್ಬ ವ್ಯಕ್ತಿಗೂ ಕೆಲಸದ ಪ್ರತಿಫಲವಾಗಿ
ದೊರೆಯಬೇಕಾದ ಮೂಲಭೂತ ಅವಶ್ಯಕತೆಗಳಾಗಿವೆ. ಆತನ ಕೆಲಸವು ರಾಷ್ಟ್ರಕ್ಕೆ
ನೇರವಾಗಿ ಸಂಬಂಧಿಸಿದ್ದಾಗಿರಬಹುದು ಅಥವಾ ಸಮಾಜದ ಸಮಗ್ರ ಹಿತಕ್ಕೆ
ಪೂರಕವಾಗಿರಬಹುದು, ರಾಷ್ಟ್ರದ ಕೈಕೆಳಗಿರುವ ಅಧಿಕಾರಿಗಳಿಗೆ ಪ್ರಸ್ತುತ ಅವಶ್ಯಕತೆಗಳನ್ನು
ಪೂರೈಸುವುದು ಸರಕಾರದ ಕರ್ತವ್ಯವೆಂದಾದರೆ, ರಾಷ್ಟ್ರದ ಪ್ರತೀಯೊಬ್ಬ ಕಾರ್ಮಿಕನಿಗೂ
ಆ ಭದ್ರತೆ ನೀಡಬೇಕಾದುದೂ ಸರಕಾರದ ಕರ್ತವ್ಯವಾಗಿದೆ. ನಿರ್ಗತಿಕರ ಸಂರಕ್ಷಣಾ
ವ್ಯವಸ್ಥೆಯು ನಮ್ಮ ಈ ಅಭಿಪ್ರಾಯವನ್ನು ಅನುಮೋದಿಸುತ್ತದೆ. ಅದರಂತೆ ಮಕ್ಕಳು,
ವೃದ್ಧರು ಮತ್ತು ರೋಗಿಗಳೇ ಮುಂತಾದ ಉಪಸಂಪಾದನೆ ಮಾಡಲಾಗದ ನಿರ್ಗತಿಕರ
ಮೂಲಭೂತ ಬೇಡಿಕೆಗಳ ನಿರ್ವಹಣೆಗೆ ರಾಷ್ಟ್ರದ ಬೊಕ್ಕಸ (ಬೈತುಲ್‌ಮಾಲ್) ದಿಂದ
ನೆರವು ನೀಡಲಾಗುತ್ತದೆ. ಇದರಿಂದ ಪ್ರವಾದಿ(ಸ) ಸೂಚಿಸಿರುವ ಸಂರಕ್ಷಣಾ ಹಕ್ಕುಗಳು
ರಾಷ್ಟ್ರದ ಪ್ರತಿ ಯೋರ್ವ ಕಾರ್ಮಿಕನಿಗೂ ಸೇರಿವೆಯೆಂದು ವ್ಯಕ್ತವಾಗುತ್ತದೆ. ಅದರ

ರೀತಿಯೇನೆಂಬುದು ಮುಖ್ಯ ಪ್ರಶ್ನೆಯಲ್ಲ. ಆಯಾ ಕಾಲಗಳಲ್ಲಿ ಸೂಕ್ತ ವಿಧಾನಗಳನ
ಕಂಡುಹಿಡಿಯಬೇಕು. ಇಲ್ಲಿ ಸಮಾಜದ ಎಲ್ಲ ಸ್ತರಗಳಲ್ಲಿಯೂ ಸಂಪತ್ತು ಹರಿಯಬೇ
ಮತ್ತು ಎಲ್ಲರ ಅಗತ್ಯಗಳಿಗೆ ಒದಗಬೇಕೆಂಬ ಮೂಲ ತತ್ವವೇ ಮುಖ್ಯ ಪ್ರಶ್ನೆಯಾಗಿ
ಈ ಬೇಡಿಕೆಗಳಿಗೆ ಭದ್ರತೆ ಒದಗಿಸುವ ಮೂಲಕ ಇಸ್ಲಾಮ್ ಕಾರ್ಮಿಕರನ್ನು ಕ್ರೂ
ಶೋಷಣೆಯಿಂದ ರಕ್ಷಿಸಿ, ಸ್ವಾತಂತ್ರ್ಯ ಮತ್ತು ಗೌರವಾರ್ಹ ಜೀವನೋಪಾಯದ ಭದ್ರ
ನೀಡಿತು.

ಅದೇನಿದ್ದರೂ, ಇಂದಿನ 'ನಾಗರಿಕ' ಪಾಶ್ಚಾತ್ಯ ಲೋಕದಲ್ಲಿ ನಾವು ಕಾಣುತ್ತಿರುವಂತ
ಸಾಮ್ರಾಜ್ಯತ್ವದ ಕರಾಳ ಸ್ವರೂಪದ ಉದ್ಭವಕ್ಕೆ ಇಸ್ಲಾಮ್ ಸರ್ವಥಾ ಅವಕಾ
ನೀಡುತ್ತಿರಲಿಲ್ಲ. ಅದು ಶರೀಅತ್ತಿನ ಮೂಲ ತತ್ವಗಳಿಗೆ ಬದ್ಧವಾಗಿ ಹೊಸ ಪರಿಸ್ಥಿತಿ
ಸರಿಹೊಂದುವ ಕಾನೂನುಗಳನ್ನು ಆವಿಷ್ಕರಿಸುತ್ತದೆ. ಪ್ರಸ್ತುತ ಕಾನೂನುಗಳ
ಭಂಡವಾಳಶಾಹಿತ್ವದ ಕೆಡುಕುಗಳನ್ನು ಬಲವಾಗಿ ತಡೆಯುವಂಥದ್ದಾಗಿರುವುದು. ಇಂದ
ಭಂಡವಾಳಶಾಹಿತ್ವದಿಂದ ಹುಟ್ಟಿಕೊಂಡಿರುವ ಶೋಷಣೆ, ಶ್ರಮಿಕ ವರ್ಗದ ರ
ಹೀರುವಿಕೆ, ಯುದ್ಧ ಮತ್ತು ಸಾಮ್ರಾಜ್ಯ ಶಾಹಿತ್ವವು ಪ್ರಜೆಗಳನ್ನು ಗುಲಾಮರನ್ನಾಗಿ
ಆಳುವುದೇ ಮುಂತಾದ ಭೀಕರ ಪಾತಕಗಳನ್ನು ಅದು ಸಹಿಸಲಾರದು.

ಇಸ್ಲಾಮ್ ಕೇವಲ ಆರ್ಥಿಕ ಅಥವಾ ಆರ್ಥಿಕೇತರ ಕಾನೂನುಗಳ ನಿರ್ಮಾಣದಿಂದಲೆ
ಸಂತೃಪ್ತವಾಗುವುದಿಲ್ಲ. ಸ್ವಾಭಾವಿಕವಾಗಿ ಅದು ನೈತಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಯನ್ನೂ
ಅವಲಂಬಿಸುತ್ತದೆ. ಇಸ್ಲಾಮಿನ ಪ್ರಸ್ತುತ ನೀತಿಯನ್ನು ಕಮ್ಯೂನಿಸ್ಟರು ಹಾಸ್ಯಾಸ್ಪದವಾ
ನೋಡುತ್ತಾರೆ. ಯಾಕೆಂದರೆ, ಯೂರೋಪಿನಲ್ಲಿ ಅವರು ಅದನ್ನು ಯಾವುದೆ
ಬುನಾದಿಯಿಲ್ಲದ ಶೂನ್ಯದಲ್ಲಿ ನೆಲೆಗೊಂಡ ಪದ್ಧತಿಯೆಂದು ಭಾವಿಸುತ್ತಾರೆ. ಆದ
ಇಸ್ಲಾಮಿನಲ್ಲಿ ಹಾಗಿಲ್ಲ. ಈ ಅದ್ಭುತ ಪದ್ಧತಿಯು ಆಧ್ಯಾತ್ಮಿಕ ಬೆಳವಣಿಗೆ ಮತ್ತು ಆರ್ಥಿ
ವ್ಯವಸ್ಥೆಯನ್ನು ನೀರು ಸೇರದ ಕೋಶದಲ್ಲಿ ಪ್ರತ್ಯೇಕವಾಗಿ ಇರಿಸುವುದಿಲ್ಲ. ಬದಲಾ
ಆಧ್ಯಾತ್ಮಿಕ ಬೆಳವಣಿಗೆ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಅದ್ವಿತೀಯ ವಿಧಾನದಿಂ
ರಮ್ಯವಾಗಿ ಪೋಣಿಸುತ್ತದೆ. ಕಲ್ಪನೆ ಮತ್ತು ವಾಸ್ತವಿಕತೆಗಳನ್ನು ಪರಸ್ಪರ ಬೆಸೆಯಲಾಗದೆ
ಅದು ವ್ಯಕ್ತಿಯನ್ನು ಪರಿಭ್ರಾಂತಗೊಳಿಸಿ ಅಸಹಾಯಕ ಸ್ಥಿತಿಗೆ ದೂಡುವುದಿಲ್ಲ. ಸತ
ಮತ್ತು ಸನ್ಮಾರ್ಗವೇನೆಂದರಿಯದೇ ಪೇಚಾಡುತ್ತಿರಲೂ ಅವಕಾಶ ನೀಡುವುದಿಲ್ಲ. ಅದ
ಪ್ರಥಮವಾಗಿ ಕಾನೂನು ಪದ್ಧತಿಯನ್ನು ನೈತಿಕ ಬುನಾದಿಯಲ್ಲಿ ಕಟ್ಟಿ ಬೆಳೆಸುತ್ತದೆ
ತರುವಾಯ ನೈತಿಕ ಪ್ರಜ್ಞೆಯನ್ನು ಕಾನೂನು ನಿರ್ಮಾಣದ ತಾಳಕ್ಕನುಸಾರವಾ
ಮುನ್ನಡೆಸುತ್ತದೆ. ಆಗ ಅವು ಪರಸ್ಪರ ಪೂರಕ ಮತ್ತು ಅವಲಂಬವಾಗಿ ಒಂದೇ
ಪದ್ಧತಿಯಲ್ಲಿ ಸೇರುತ್ತವೆ. ಅದರಲ್ಲಿ ವೈರುಧ್ಯ ಅಥವಾ ಸಂಘರ್ಷವಿರುವುದಿಲ್ಲ.

ಇಲ್ಲಿ ನೈತಿಕ ಕಾನೂನುಗಳು ಭೋಗ ವಿಲಾಸಗಳನ್ನು ನಿಷಿದ್ಧಗೊಳಿಸಿ, ಅದ

ವಿರುದ್ಧ ಹೋರಾಡುತ್ತದೆ. ಸಂಪತ್ತು ಕೆಲವೇ ಮಂದಿಯ ಬಳಿ ರಾಶಿ ಬಿದ್ದರೆ ನೀಚ ಭೋಗವಿಲಾಸ, ಲೌಕಿಕ ಸುಖಾಡಂಬರತೆಯ ಹೊರತು ಮತ್ತೇನು ತಾನೇ ಬೆಳೆದೀತು? ಕಾರ್ಮಿಕರ ವೇತನವನ್ನು ಸಂಪೂರ್ಣವಾಗಿ ನೀಡದೆ ವಂಚಿಸಿ, ಅನ್ಯಾಯವೆಸಗುವುದನ್ನೂ ಇಸ್ಲಾಮ್ ಕಟುವಾಗಿ ವಿರೋಧಿಸುತ್ತದೆ. ಕಾರ್ಮಿಕರನ್ನು ವಂಚಿಸದೆ ಹೇರಳ ಸಂಪಾದನೆ ಸಾಧ್ಯವಿದೆಯೇ? ದೇವಮಾರ್ಗದಲ್ಲಿ ಹಣ ವಿನಿಯೋಗಿಸಲು ಇಸ್ಲಾಮ್ ಆದೇಶಿಸುತ್ತದೆ. ಅಗತ್ಯವಿದ್ದರೆ ತನ್ನೆಲ್ಲಾ ಸಂಪತ್ತನ್ನೂ ಆ ಮಾರ್ಗದಲ್ಲಿ ವ್ಯಯಿಸಬೇಕು. ಶ್ರೀಮಂತರು ದೇವ ಮಾರ್ಗದಲ್ಲಿ ಹಣ ವ್ಯಯಿಸದೆ ಕೇವಲ ಸ್ವಾರ್ಥಕ್ಕಾಗಿ ಹಣ ವ್ಯಯಿಸುವಾಗ ಸಮಾಜದ ಬಹುಸಂಖ್ಯಾತ ಜನರನ್ನು ಸಂಕಷ್ಟಕ್ಕೀಡುಮಾಡುವ ಬಡತನವು ತಲೆಯೆತ್ತದಿದ್ದೀತೇ?[1]

ಆಧ್ಯಾತ್ಮಿಕ ಪ್ರಜ್ಞೆಯು ಮಾನವನನ್ನು ದೇವನೊಂದಿಗೆ ಜೋಡಿಸುತ್ತದೆ. ಅದು ದೇವಸಂಪ್ರೀತಿ ಮತ್ತು ಪರಲೋಕ ಮೋಕ್ಷದ ನಿರೀಕ್ಷೆಯಿಂದ, ತನ್ನ ಲೌಕಿಕ ಸುಖ ಸಂಪತ್ತುಗಳನ್ನು ತ್ಯಜಿಸುವ ಪ್ರೇರಣೆಯನ್ನು ಆತನಿಗೆ ನೀಡುತ್ತದೆ. ದೇವಭಕ್ತಿಯಿರುವಾತನು ಸಂಪತ್ತು ಶೇಖರಣೆಗಾಗಿ ನ್ಯಾಯ, ಪುರಸ್ಕಾರ ಮತ್ತು ಶೋಷಕ ವಿಧಾನವನ್ನು ನೆಚ್ಚಿಕೊಂಡಾನೇ? ಶಿಕ್ಷೆಗಳಿರುವ ಪರಲೋಕದ ಮೇಲೆ ವಿಶ್ವಾಸವಿರುವಾತನು ಅದಕ್ಕೆ ಕೈಹಚ್ಚಿಯಾನೇ?

ಹೀಗೆ ಭಂಡವಾಳಶಾಹಿತ್ವದ ಹಾದಿಗೆ ತಡೆಯೊಡ್ಡುವ ಕಾನೂನು ವ್ಯವಸ್ಥೆಗಳ ಹಾದಿಯನ್ನು ಸುಗಮಗೊಳಿಸುವುದೇ ಆಧ್ಯಾತ್ಮಿಕ ಮತ್ತು ನೈತಿಕ ಶಿಕ್ಷಣಗಳ ಮುಖ್ಯ ಕೆಲಸ. ಹೌದು, ಆಗ ಕಾನೂನು ಪಾಲನೆಗೆ ಕೇವಲ ಅಧಿಕಾರ ಬಲದ ಭೀತಿಯು ಪ್ರೇರಕವಾಗಿರಲಾರದು. ಬದಲಾಗಿ ಆತ್ಮಸಾಕ್ಷಿಯ ಕರೆಯನ್ನು ಆಲಿಸಿ ಅದರ ಅನುಸರಣೆಗೆ ಆತನು ಸನ್ನದ್ಧನಾಗುವನು.

ಒಟ್ಟಿನಲ್ಲಿ, ಇಂದು ಮುಸ್ಲಿಮ್ ಲೋಕದಲ್ಲಿ ಕಾಣುತ್ತಿರುವ ಭಂಡವಾಳ ಶಾಹಿತ್ವದ ಹೀನ ಸ್ವರೂಪಕ್ಕೆ, ಇಸ್ಲಾಮಿನೊಂದಿಗೆ ಯಾವ ಸಂಬಂಧವೂ ಇಲ್ಲ. ಅದಕ್ಕೆ ಇಸ್ಲಾಮ್ ಹೊಣೆಯಲ್ಲ. ಯಾಕೆಂದರೆ, ಆ ಜನತೆಯನ್ನು ಇಸ್ಲಾಮ್ ಆಳುತ್ತಿಲ್ಲ!

---

1.ಉದ್ಯಮಿಗಳು ಕಾರ್ಮಿಕರಿಗೆ ದಾನ ನೀಡಬೇಕೆಂದು ಇದರ ಉದ್ದೇಶವಲ್ಲ. ಮಾಲಿಕರು ಅತಿ ಕಡಿಮೆ ಲಾಭದಿಂದ ಸಂತೃಪ್ತರಾಗುವುದೂ ದೇವಮಾರ್ಗದ ವ್ಯಯವೇ ಆಗಿದೆ. ಕಾರ್ಮಿಕರಿಗೆ ಶಾಲೆ ಮತ್ತು ಆಸ್ಪತ್ರೆಗಳನ್ನು ಕಟ್ಟಿಸುವುದೂ ದೇವಮಾರ್ಗದ ವ್ಯಯವೇ ಆಗಿದೆ. 'ಇಸ್ಲಾಮ್ ಮತ್ತು ದಾನ ಧರ್ಮಗಳು' ಎಂಬ ಅಧ್ಯಾಯವನ್ನು ನೋಡಿರಿ.

# ಇಸ್ಲಾಮ್ ಮತ್ತು ಖಾಸಗಿ ಒಡೆತನ

ಖಾಸಗಿ ಒಡೆತನ ಹಕ್ಕು ಜನ್ಮಸಿದ್ಧವೇ? ಹಾಗಲ್ಲವೆಂದು ಕಮ್ಯೂನಿಸ್ಟರು ಮತ್ತು ಅವರ ಸಹಚರರು ಒತ್ತಿ ಹೇಳುತ್ತಾರೆ. ಆದಿ ಮಾನವ ಸಮುದಾಯದಲ್ಲಿ, ಪ್ರಾಚೀನ ಕಮ್ಯೂನಿಝಮ್‌ನ ಯುಗದಲ್ಲಿ ಯಾರಿಗೂ ವಿಶೇಷ ಒಡೆತನದ ಹಕ್ಕುಗಳಿರಲಿಲ್ಲವೆಂದು ಅವರು ಹೇಳುತ್ತಾರೆ. ಎಲ್ಲವೂ ಎಲ್ಲರ ಸಾರ್ವಜನಿಕ ಒಡೆತನದಲ್ಲಿದ್ದಿತಂತೆ. ಪ್ರೀತಿ ಸಹಕಾರ ಮತ್ತು ಸಹೋದರತೆಯ ವಾತಾವರಣ ವ್ಯಾಪಿಸಿತ್ತು.

ಆದರೆ ಆ ಸುವರ್ಣಕಾಲ ಹೆಚ್ಚುಕಾಲ ಉಳಿಯಲಿಲ್ಲವೆಂಬುದು ವಿಷಾದನೀಯ. ಕೃಷಿ ಸಾಗುವಳಿಯ ನಾಂದಿಯಿಂದ ಕಲಹ ಮತ್ತು ವಾದವಿವಾದಗಳು ಹುಟ್ಟಿಕೊಂಡುವು. ಹೊಲ ಗದ್ದೆ ಮತ್ತು ಸಾಗುವಳಿ ಸಲಕರಣೆಗಳಿಗಾಗಿ ಪೈಪೋಟಿ ಆರಂಭವಾಯಿತು. ಯುದ್ಧಗಳು ಭುಗಿಲೆದ್ದುವು..... ಖಾಸಗಿ ಒಡೆತನ ಸಂಪ್ರದಾಯವನ್ನು ಹೂಹಾರ ಹಾಕಿ ಪೂಜಿಸುವ, ಅದಕ್ಕಾಗಿ ತಲೆಯೊಡೆಯುವ ಇಂದಿನ ಪರಿಸ್ಥಿತಿಗೆ ಮಾನವ ತಲಪಿದನು.

ಆತನು ತನ್ನ ಪ್ರಾಥಮಿಕ ಹಂತಕ್ಕೆ ಮರಳದೆ ಈ ಗಂಡಾಂತರದಿಂದ ಪಾರಾಗಲಾರನು. ಅಲ್ಲಿ ಯಾರಿಗೂ ವಿಶೇಷ ಒಡೆತನದ ಹಕ್ಕು ಇರಲಾರದು. ಎಲ್ಲವೂ ಸಾರ್ವಜನಿಕ ಒಡೆತನದಲ್ಲಿರುವುದು. ಅಂದು ಪ್ರೀತಿ ಮತ್ತು ಸಾಮರಸ್ಯದ ಸ್ಫೂರ್ತಿಯು ಮಾನವಕುಲವನ್ನು ಪುನಃ ಆಳುವುದು!

******

ನಾವು ಸದ್ಯ ಕಮ್ಯೂನಿಸ್ಟರನ್ನು ಮರೆತುಬಿಡೋಣ. ಮನೋಶ್ಯಾಸ್ತ್ರ ಮತ್ತು ಸಮಾಜ ಶಾಸ್ತ್ರತಜ್ಞರು ಏನು ಹೇಳುವರೆಂದು ನೋಡೋಣ. ಮಾನವನ ಭಾವ ವಿಚಾರ ಮತ್ತು ವ್ಯವಹಾರ ರೀತಿಗಳಲ್ಲಿ ಯಾವುದು ನೈಸರ್ಗಿಕ ಮತ್ತು ಯಾವುದು ಆರ್ಜಿತವೆಂಬ ಬಗ್ಗೆ ಅವರಲ್ಲಿ ತೀವ್ರ ಭಿನ್ನಾಭಿಪ್ರಾಯವಿದೆ. ಸಹಜವಾಗಿ ಅವರು ಖಾಸಗೀ ಒಡೆತನದ ಬಗ್ಗೆಯೂ ಭಿನ್ನಾಭಿಪ್ರಾಯ ಹೊಂದಿದ್ದಾರೆ. ಅದು ಹಿನ್ನೆಲೆ ಮತ್ತು ಪರಿಸರಗಳಿಗತೀತವಾಗಿ ಹುಟ್ಟಿನಿಂದಲೇ ಮಾನವನಲ್ಲಿ ಬೆಳೆಯುವ ಗುಣವೇ? ಅಥವಾ ಪರಿಸ್ಥಿತಿಯ ಪ್ರಭಾವದಿಂದ ಪರಿಣಮಿಸಿದ್ದೇ? ಉದಾಹರಣೆಗಾಗಿ, ಒಂದು ಮಗುವು ಸಾಕಷ್ಟು ಆಟಿಕೆಗಳಿಲ್ಲದಿರುವಾಗ ಮತ್ತು ಇತರರು ಕಸಿದುಕೊಳ್ಳುವರೆಂಬ ಭೀತಿಯಿರುವಾಗ ಆಡಲೊಪ್ಪುವುದಿಲ್ಲ. ಹಾಗೆಯೇ ಹತ್ತು ಮಕ್ಕಳಿಗೆ ಒಂದೇ ಆಟಿಕೆಯಿದ್ದರೂ ಅಲ್ಲಿ ಜಗಳ ಶತಸಿದ್ಧ. ಆದರೆ ಹತ್ತು ಮಕ್ಕಳಿಗೆ ಹತ್ತು ಆಟಿಕೆಗಳಿರುವಾಗ, ಪ್ರತೀಯೊಬ್ಬರೂ ಒಂದೊಂದನ್ನು ತೆಗೆದುಕೊಂಡು ಸಂತೃಪ್ತರಾಗಿ ಅದರಿಂದ ಜಗಳ ಪರಿಹಾರವಾದೀತೇ?

******

ಈ ಎಲ್ಲ ವಾದಗಳನ್ನು ನಾವು ಸ್ವಲ್ಪ ವಿಶ್ಲೇಷಿಸೋಣ.

ಒಂದನೇಯದಾಗಿ ಖಾಸಗಿ ಒಡೆತನವು ಹುಟ್ಟುಗುಣವಲ್ಲವೆಂದು ಖಚಿತವಾಗಿ ಹೇಳಲು ಯಾವ ವಿಜ್ಞಾನಿಯಿಂದಲೂ ಸಾಧ್ಯವಾಗಿಲ್ಲ. ಅದೊಂದು ನೈಸರ್ಗಿಕ ಗುಣವೆಂಬುದಕ್ಕೆ ಸ್ಪಷ್ಟ ಸಾಕ್ಷ್ಯವಿಲ್ಲವೆಂದಷ್ಟೇ ಎಡಪಂಥೀಯ ವಾದಿಗಳ ಹೇಳಿಕೆ. ಈ ಧೋರಣೆ ಮತ್ತು ಸಂಪೂರ್ಣ ನಿರಾಕರಣೆಯಲ್ಲಿ ಪರಸ್ಪರ ವ್ಯತ್ಯಾಸವಿದೆ. ನಿರಾಕರಣೆಗೆ ಅರ್ಹವಾದ ಸ್ಪಷ್ಟ ಪುರಾವೆಯೇನಾದರೂ ದೊರೆತಿದ್ದರೆ, ಆ ಮೇಲೆ ಅದನ್ನು ಖಂಡತುಂಡವಾಗಿ ಹೇಳಲು ಅವರು ಹಿಂಜರಿಯಲಾರರು. ಯಾಕೆಂದರೆ ಅವರು ಭಾವನಾತ್ಮಕವಾಗಿ ಅದನ್ನು ದ್ವೇಷಿಸುವವರಾಗಿದ್ದಾರೆ.

ಎರಡನೇಯದಾಗಿ ಅವರು ಸೂಚಿಸುವ ಮಕ್ಕಳ ಆಟಿಕೆಯ ಉದಾಹರಣೆಯು ಅವರ ಧೋರಣೆಯನ್ನು ಸಮರ್ಥಿಸುವುದಿಲ್ಲ. ಹತ್ತು ಮಕ್ಕಳಿಗೆ ಹತ್ತು ಆಟಿಕೆಗಳು ದೊರೆಯುವಾಗ ಜಗಳ ಕೊನೆಗೊಳ್ಳುವುದಿದ್ದರೆ, ಖಾಸಗಿ ಒಡೆತನಕ್ಕೆ ಆಧಾರವಾಗಿರುವ ಹುಟ್ಟುಗುಣವು ಅಲ್ಲಿಲ್ಲವೆಂದು ಅರ್ಥೈಸುವಂತಿಲ್ಲ. ಸಂಕುಚಿತ ಪರಿಸ್ಥಿತಿಗಳಲ್ಲಿ ಸಂಪೂರ್ಣ ಸಮಾನತೆಯನ್ನು ಪಾಲಿಸಿ ಈ ಹುಟ್ಟು ಗುಣವನ್ನು ಸಂತೃಪ್ತಗೊಳಿಸಬಹುದೆಂದಷ್ಟೇ ಅದರಿಂದ ಸಾಬೀತಾಗುತ್ತದೆ. ಇಲ್ಲಿ ಅದರ ಮೂಲವನ್ನು ನಿರಾಕರಿಸುವುದಿಲ್ಲ. ಬದಲಾಗಿ ಅದಕ್ಕೊಂದು ಮಿತಿಯನ್ನು ನಿರ್ಧರಿಸಲಾಗಿದೆ. ಆದರೆ ಇಂತಹ ಸಂದರ್ಭಗಳಲ್ಲಿ ನಾವು ಹಲವೊಮ್ಮೆ ತದ್ವಿರುದ್ಧ ಸ್ಥಿತಿಯನ್ನು ಕಾಣುತ್ತೇವೆ. ಹೆಚ್ಚಿನ ಮಕ್ಕಳು ಅವರನ್ನು ತಡೆಯುವ ಬಾಹ್ಯ ಪ್ರೇರಣೆಗಳೇನೂ ಇಲ್ಲದಿದ್ದರೆ ತಮ್ಮ ಸಂಗಡಿಗರ ಆಟಿಕೆಯನ್ನೂ ಕಿತ್ತುಕೊಳ್ಳಲು ಪ್ರಯತ್ನಿಸುತ್ತಾರೆ.

ಮೂರನೇಯದಾಗಿ, ಅದಿ ಮಾನವರಲ್ಲಿ ರೂಢಿಯಲ್ಲಿದ್ದಿತೆಂದು ಕಮ್ಯೂನಿಸ್ಟರು ಭಾವಿಸುವ (ಅದಕ್ಕೆ ಯಾವ ಸ್ಪಷ್ಟ ಪುರಾವೆಯನ್ನೂ ನಾವು ಕಂಡಿಲ್ಲ.) ಆ 'ಸುವರ್ಣ ಯುಗ'ದಲ್ಲಿ ಉತ್ಪಾದಕ ಉಪಕರಣಗಳಿರಲಿಲ್ಲ. ಹಾಗಿದ್ದರೆ ಇಲ್ಲದ ವಸ್ತುವಿಗಾಗಿ ಪೈಪೋಟಿಯೇಕೆ? ಅವರಿಗೆ ಬೇಕಾದ ಆಹಾರವು ಮರಗಳಿಂದ ನೇರವಾಗಿ ದೊರೆಯುತ್ತಿತ್ತು. ಅವರು ಕ್ರೂರ ಪ್ರಾಣಿಗಳ ಭೀತಿಯಿಂದ ಗುಂಪಾಗಿಯೇ ಬೇಟೆಗೆ ಹೋಗುತ್ತಿದ್ದರು. ದೊರೆತ ಆಹಾರವನ್ನು ಅವರು ಸಾಮೂಹಿಕವಾಗಿಯೇ ಭಕ್ಷಿಸುತ್ತಿದ್ದರು. ಬೇಟೆಯ ವಸ್ತುವು ಬೇಗನೆ ಕೆಡುವ ಅವಕಾಶವಿರುವುದರಿಂದ ಅದನ್ನು ಶೇಖರಿಸಿಡುವ ಪ್ರಮೇಯವೇ ಇರಲಿಲ್ಲ. ಹೆಚ್ಚು ತಡ ಮಾಡದೆ ಅದನ್ನು ಉಪಯೋಗಿಸಿ ಮುಗಿಸಬೇಕಾಗಿತ್ತು. ಇಲ್ಲಿ ಪೈಪೋಟಿಯಿಲ್ಲದಿರುವುದಕ್ಕೆ ಖಾಸಗಿ ಒಡೆತನ ಹಕ್ಕಿನ ಹುಟ್ಟುಗುಣದ ಅಭಾವ ಕಾರಣವಲ್ಲ, ಬದಲಾಗಿ ಅಲ್ಲಿ ಪೈಪೋಟಿಗೆ ಒಂದು 'ಕಾರಣ'ವೇ ಇರಲಿಲ್ಲ. ಇದಕ್ಕೆ ಬೇಸಾಯದ ಸಂಶೋಧನೆಯ ಬಳಿಕ ಆರಂಭಗೊಂಡ ಪೈಪೋಟಿಯು ಪ್ರಬಲ ಆಧಾರವಾಗಿದೆ. ಅಥವಾ ಆ ತನಕ ಅನುಕೂಲ ವಾತಾವರಣವಿಲ್ಲದಿದ್ದುದರಿಂದ ಸುಪ್ತವಾಗಿದ್ದ ಭಾವನೆಯು ಆಗ ಸಕ್ರಿಯವಾಯಿತೆಂದಷ್ಟೇ ಹೇಳಬಹುದು.

ನಾಲ್ಕನೇಯದಾಗಿ, ಆ ಕಾಲದಲ್ಲಿ ಸ್ತ್ರೀಯನ್ನು 'ಒಡೆತನ'ದಲ್ಲಿರಿಸಲಿಕ್ಕಾಗಿ ಪುರುಷರೊಳಗೆ ನಡೆದ ಸಂಘರ್ಷವನ್ನು ಯಾರೂ ನಿರಾಕರಿಸಿಲ್ಲ. ಕಮ್ಯೂನಿಷ್ಟರ ವಾದದಂತೆ, 'ಲೈಂಗಿಕ ಕಮ್ಯೂನಿಝಮ್' ರೂಢಿಯಲ್ಲಿದ್ದ ಪ್ರಾಚೀನ ಸಮಾಜದಲ್ಲಿಯೂ ಅದು ಸಂಪೂರ್ಣ ಜ್ಯಾರಿಯಾಗಿತ್ತೆಂದು ಯಾರೂ ವಾದಿಸುವುದಿಲ್ಲ. ಆ ಪದ್ಧತಿಯು, ಹೆಚ್ಚು ಸುಂದರಿಯಾದ ಸ್ತ್ರೀಗಾಗಿ ನಡೆಯುವ ಸಂಘರ್ಷಕ್ಕೆ ತಡೆಯಾಗಿರಲಿಲ್ಲ. ಇಲ್ಲಿ ಅನಿವಾರ್ಯವಾಗಿ ಎದುರಿಸಬೇಕಾದ ಒಂದು ಜಟಿಲ ಸಮಸ್ಯೆಯಿದೆ-ಅದು ಈ ಚರ್ಚೆಯಲ್ಲಿ ಅತಿ ಪ್ರಾಮುಖ್ಯವಾಗಿದೆ. ಎಲ್ಲ ಸಾಧನ ಸೌಲಭ್ಯಗಳು ಸಮಾನವಾಗಿರುವಲ್ಲಿ ಸಂಘರ್ಷ ಉದ್ಭವಿಸುವುದಿಲ್ಲ, ಆದರೆ ಸೌಲಭ್ಯಗಳು ಜನರ ದೃಷ್ಟಿಯಲ್ಲಿ ಹೆಚ್ಚುಕಡಿಮೆಯಾದಾಗ ಪೈಪೋಟಿ ಮತ್ತು ಸಂಘರ್ಷ ಆರಂಭವಾಗುತ್ತದೆ. ಕಮ್ಯೂನಿಸ್ಟರ ಕಲ್ಪನೆಯ 'ಸ್ವರ್ಗಲೋಕ'ವೂ ಅದಕ್ಕೆ ಹೊರತಲ್ಲ. ಹೌದು, ಅವರು ಭವಿಷ್ಯದಲ್ಲಿ ಸಾಕ್ಷಾತ್ಕಾರ ವಾಗಬಹುದೆಂದು ಕನಸು ಕಾಣುತ್ತಿರುವ ಆ ಸ್ವರ್ಗಲೋಕದಲ್ಲಿಯೂ!

ಐದನೇಯದಾಗಿ, ಪ್ರಸ್ತುತ ಆದಿಸಮಾಜದಲ್ಲಿದ್ದ ಪ್ರತಿಷ್ಠೆಯ ಹಂಬಲವನ್ನು ಯಾರೂ ನಿರಾಕರಿಸಿಲ್ಲ. ಅದು ಧೈರ್ಯ, ಶಕ್ತಿ ಮತ್ತು ಸಹನೆಯಂತಹ ವಿಶಿಷ್ಟ ಗುಣಗಳ ಪ್ರದರ್ಶನದಿಂದಾಗಿರಬಹುದು. ಆದಿವಾಸಿಗಳಂತೆ ಜೀವಿಸುವ ಕೆಲವು ಪಂಗಡಗಳನ್ನು ನಾವು ಇಂದಿಗೂ ಕಾಣಬಹುದು. ಕಮ್ಯೂನಿಸ್ಟರು ಅವರನ್ನು ನೋಡಿಯೇ ಆದಿ ಕಮ್ಯೂನಿಸ್ಟ್ ಜನಾಂಗಗಳನ್ನು ಊಹಿಸುತ್ತಾರೆ. ಅವರು ಮಿಸುಕಾಡದೆ ನೂರು ಛಡಿಯೇಟುಗಳನ್ನು ಸಹಿಸುವ ಸಾಮರ್ಥ್ಯವುಳ್ಳವರಿಗೆ ಮಾತ್ರವೇ ತಮ್ಮ ಹೆಣ್ಮಕ್ಕಳನ್ನು ವಿವಾಹ ಮಾಡಿಕೊಡುತ್ತಾರಂತೆ. ಅದೇಕೆ? ಪ್ರತಿಷ್ಠೆಗಾಗಿ ಯುವಕರು ಈ ಅಗ್ನಿ ಪರೀಕ್ಷೆಗೆ ಸಿದ್ಧರಾಗುವುದೇಕೆ? ಎಲ್ಲ ವಿಷಯಗಳೂ ಸಂಪೂರ್ಣ ಸಮಾನತೆಯ ಆಧಾರದಲ್ಲಿ ನಡೆಯುವುದಿದ್ದರೆ, ಯಾರಾದರೂ ಹೀಗೇಕೆ ಹೇಳಬೇಕು: "ನಾನು ಇತರರ ಹಾಗಲ್ಲ. ಆತನಿಗಿಂತ ಶ್ರೇಷ್ಠ". ಇಲ್ಲಿ ಇನ್ನೊಂದು ಪ್ರಶ್ನೆ ಉದ್ಭವಿಸುತ್ತದೆ. ನಾವು ಬಹಳ ಪ್ರಾಮುಖ್ಯವೆಂದು ಭಾವಿಸುವ ಆ ಪ್ರಶ್ನೆಯ ಕುರಿತು ಆ ಮೇಲೆ ಹೇಳುತ್ತೇನೆ-ವಸ್ತುತಃ ಖಾಸಗಿ ಒಡೆತನವು ಕೇವಲ ಒಂದು ಹುಟ್ಟುಗುಣವಲ್ಲ. ಅದು ಇನ್ನೊಂದು ಹುಟ್ಟುಗುಣದೊಡನೆ ಬೆಸೆದುಕೊಂಡಿದೆ. ಅದು ಸ್ವಂತ ಮತ್ತು ವ್ಯತಿರಿಕ್ತವಾದ ಅಸ್ತಿತ್ವದ ಬಯಕೆಯಾಗಿದೆ. ಮಾನವಕುಲದ ಆರಂಭ ಹಂತದಲ್ಲಿಯೂ ಆ ಸಹಜ ಬಯಕೆಗಳು ಪರಸ್ಪರ ಸಂಬಂಧದಿಂದ ಮುಕ್ತವಾಗಿರಲಿಲ್ಲ.

******

ಈ ತಾತ್ವಿಕ ವಿಶ್ಲೇಷಣೆಯನ್ನು ಬದಿಗಿಟ್ಟು, ಇಸ್ಲಾಮಿನ ಖಾಸಗಿ ಒಡೆತನ ಸಂಪ್ರದಾಯವನ್ನು ನಾವು ಪರಿಶೀಲಿಸೋಣ. ಇತಿಹಾಸದಲ್ಲಿ ಸದಾಕಾಲವೂ ಖಾಸಗಿ

ಒಡೆತನ ಸಂಪ್ರದಾಯದಲ್ಲಿ ಅಕ್ರಮ, ಮರ್ದನ ಮತ್ತು ಸಂಘರ್ಷಗಳು ತಾಂಡವವಾಡುತ್ತಿದ್ದುವು. ಆ ನಿರಂತರ ಸಂಘರ್ಷದಿಂದ ಮಾನವಕುಲಕ್ಕೆ ವಿಮೋಚನೆ ದೊರೆಯಬೇಕಾದರೆ ಪ್ರಸ್ತುತ ಸಂಪ್ರದಾಯವನ್ನು ಕೊನೆಗೊಳಿಸಲೇ ಬೇಕಾಗಿದೆಯೆಂದು ಕಮ್ಯೂನಿಸ್ಟರು ವಾದಿಸುತ್ತಾರೆ.

ಆದರೆ ಇಲ್ಲಿ ಕಮ್ಯೂನಿಸ್ಟರು, ವೈಯಕ್ತಿಕ ಪ್ರೇರಣೆಗಳು ಮಾನವಕುಲದಲ್ಲಿ ವಹಿಸಿದ ಪಾತ್ರವನ್ನೂ ಆದಿ ಕಮ್ಯೂನಿಝಮ್‌ನಲ್ಲಿ ಮಾನವಕುಲವು ಸ್ವಲ್ಪವೂ ಪ್ರಗತಿ ಸಾಧಿಸಿಲ್ಲವೆಂಬ ವಾಸ್ತವಿಕತೆಯನ್ನೂ ಮನಃ ಪೂರ್ವಕವಾಗಿ ನಿರ್ಲಕ್ಷಿಸಿ ಬಿಟ್ಟಿದ್ದಾರೆ. ಒಡೆತನ ಹಕ್ಕಿನ ಪೈಪೋಟಿಯಿಂದಲೇ ಮಾನವಕುಲವು ಪ್ರಗತಿ ಸಾಧಿಸಲಾರಂಭಿಸಿತು. ಹಾಗೆಂದರೆ ಪೈಪೋಟಿಯು ಸ್ವಯಂ ಒಂದು ಕೆಡುಕಲ್ಲ. ಅದರ ಅಸ್ತಿತ್ವವು ಒಂದು ಮಿತಿಯ ತನಕ ಆರ್ಥಿಕ, ಸಾಮಾಜಿಕ ಮತ್ತು ಮಾನಸಿಕ ಅನಿವಾರ್ಯತೆಯಾಗಿದೆ.[1]

ಹಾಗೆಯೇ ವ್ಯಕ್ತಿ ಒಡೆತನವು ಮಾನವಕುಲವನ್ನು ಬಾಧಿಸಿದ ಮಹಾ ಶಾಪವೆಂಬ ವಾದವನ್ನೂ ಇಸ್ಲಾಮ್ ಅಂಗೀಕರಿಸುವುದಿಲ್ಲ. ಯೂರೋಪಿನಲ್ಲಿ ಅಥವಾ ಮುಸ್ಲಿಮ್ ಲೋಕದಿಂದ ಹೊರಗೆ ಬೇರೆಲ್ಲಿಯಾದರೂ, ಖಾಸಗೀ ಒಡೆತನ ಸಂಪ್ರದಾಯದೊಂದಿಗೆ ಅನ್ಯಾಯವಾಗುತ್ತಲಿದ್ದರೆ, ಅದಕ್ಕೆ ಅಲ್ಲಿ ಕಾನೂನು ನಿರ್ಮಾಣ ಮತ್ತು ಆಡಳಿತವು "ಒಡೆಯ ವರ್ಗದ" ನಿಯಂತ್ರಣದಲ್ಲಿದ್ದುದೇ ಕಾರಣವಾಗಿತ್ತು. ಆದ್ದರಿಂದ ಅವರ ಆಳ್ವಿಕೆಯು ಸ್ವಾಭಾವಿಕವಾಗಿ ಸ್ವಾರ್ಥ ಹಿತಾಸಕ್ತಿ ಸಂರಕ್ಷಣೆಗೆ ಸೀಮಿತವಾಯಿತು. ತನ್ಮೂಲಕ ಇದು ಸ್ವಾರ್ಥ ಹಿತಾಸಕ್ತಿ ಸಂರಕ್ಷಣೆ ಮತ್ತು ಅನ್ಯರ ಹಿತಾಸಕ್ತಿಗಳನ್ನು ದಮನಿಸುವ ಕಾನೂನು ನಿರ್ಮಾಣಕ್ಕೆ ಎಡೆಗೊಟ್ಟಿತು. ಆದರೆ ಇಸ್ಲಾಮಿನಲ್ಲಿ 'ಆಳುವ ವರ್ಗ' ಎಂಬುದಿಲ್ಲ. ಕಾನೂನು ಸಮಾಜದ ಯಾವುದೇ ವಿಶಿಷ್ಟ ವಿಭಾಗದ ನಿರ್ಮಾಣವಲ್ಲ. ಅದು ಸೃಷ್ಟಿಕರ್ತನಾದ ಅಲ್ಲಾಹನದ್ದು. ಆತನು ತನ್ನ ಸೃಷ್ಟಿಗಳಲ್ಲಿ ಯಾವನಾದರೊಬ್ಬ ವ್ಯಕ್ತಿ ಅಥವಾ ವರ್ಗದೊಂದಿಗೆ ವಿಶೇಷ ಪಕ್ಷಪಾತ ತೋರುವ ಪ್ರಮೇಯವೇ ಇಲ್ಲ. ಅದಕ್ಕಾಗಿ ಆತನನ್ನು ಪ್ರೇರೇಪಿಸುವ ಏನಿದೆ? ಇಲ್ಲ, ಅಲ್ಲಾಹ್ ಪರಮ ಪಾವನನು.[2]

---

1. ಪೈಪೋಟಿ ಅಥವಾ ಸ್ಪರ್ಧೆಯು ಸ್ವಯಂ ಕೆಡುಕೆಂದು ಇಸ್ಲಾಮ್ ಭಾವಿಸುವುದಿಲ್ಲ. ಅದು ಕೆಡುಕಿನ ಹಾದಿಯಲ್ಲಿದ್ದರೆ ಮಾತ್ರ ಕೆಡುಕಾಗುತ್ತದೆ. ಒಳಿತಿನ ಹಾದಿಯಲ್ಲಿದ್ದರೆ, ಇಸ್ಲಾಮ್ ಹೇಳುತ್ತದೆ: "ಅದರಲ್ಲಿ ಎಲ್ಲಾ ಸ್ಪರ್ಧಾಳು ಸ್ಪರ್ಧಿಸಿ ಕೊಳ್ಳಿರಿ."

2. "ಜೀವನ ಸೌಲಭ್ಯಗಳ ವಿಷಯದಲ್ಲಿ ನಾವು ನಿಮ್ಮಲ್ಲಿ ಕೆಲವರನ್ನು, ಇನ್ನು ಕೆಲವರಿಗಿಂತ ಉನ್ನತಗೊಳಿಸಿದ್ದೇವೆ." ಎಂಬ ಕುರ್‌ಆನ್ ವಾಕ್ಯವು ಬೇರೊಂದು ವಿಷಯವನ್ನು ಸೂಚಿಸುತ್ತದೆ. ಆ ಕುರಿತು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗುವುದು. ಇಲ್ಲಿ ನಾವು ಸಮಸ್ತ ಮಾನವರಿಗೆ ಬೇಕಾದ ಕಾನೂನು ನಿರ್ಮಾಣದ ಕುರಿತು ಚರ್ಚಿಸುತ್ತಿದ್ದೇವೆ. ಆ ಬಗ್ಗೆ ಇಸ್ಲಾಮ್ ಸಂಪೂರ್ಣ ಸಮಾನತೆಯನ್ನು ಬಯಸುತ್ತದೆ.

ಇಸ್ಲಾಮಿನ ಆಡಳಿತಾಧಿಕಾರಿಯು ಮುಸ್ಲಿಮ್ ಸಮಾಜದ ಮುಕ್ತ ಚುನಾವಣೆಯಿಂದ ಅಧಿಕಾರಕ್ಕೇರುತ್ತಾನೆ. ಆತನನ್ನು ಆಳ್ವಿಕೆಗೆ ಅರ್ಹಗೊಳಿಸುವ ಯಾವ ವರ್ಗಮೇಲ್ಮೆಯೂ ಇಲ್ಲ. ಆಡಳಿತ ಸ್ಥಾನಕ್ಕೇರಿದ ಬಳಿಕ ಕೇವಲ ದೇವನ ಶರೀಅತ್ತನ್ನು ಜ್ಯಾರಿಗೊಳಿಸುವುದೇ ಆತನ ಕೆಲಸ. ಆತನು ಪ್ರಜೆಗಳ ಮೇಲೆ ಚಲಾಯಿಸುವ ಯಾವುದೇ ಅಧಿಕಾರವು, ಕೇವಲ ಶರೀಅತ್ ಕಾನೂನನ್ನು ಜ್ಯಾರಿಗೊಳಿಸುವ ಹೊಣೆಗಾರನೆಂಬ ನಿಟ್ಟಿನಲ್ಲಿರುವುದೇ ವಿನಾ ಬೇರೇನಿಲ್ಲ. ಪ್ರಥಮ ಖಲೀಫ ಅಬೂಬಕರ್(ರ) ಹೇಳಿದರು: "ನಾನು ಅಲ್ಲಾಹನನ್ನು ಅನುಸರಿಸುತ್ತಿರುವ ತನಕ ನೀವು ನನ್ನನ್ನು ಅನುಸರಿಸಿರಿ. ನಾನು ಅಲ್ಲಾಹನನ್ನು ಧಿಕ್ಕರಿಸಿದರೆ, ನೀವು ನನ್ನನ್ನು ಅನುಸರಿಸಬೇಡಿರಿ." ಅವರ ವ್ಯಕ್ತಿತ್ವಕ್ಕೆ ಸಾಂವಿಧಾನಿಕವಾಗಿ ಯಾವುದೇ ವಿಶಿಷ್ಟತೆಯನ್ನು ನಿರ್ಧರಿಸಲು ಅವರಿಗಾಗಲೀ, ಅನ್ಯರಿಗಾಗಲೀ ಹಕ್ಕಿಲ್ಲ. ಆದ್ದರಿಂದಲೇ ಜನವಿಭಾಗವೊಂದಕ್ಕೆ ಇನ್ನೊಂದಕ್ಕಿಂತ ಯಾವುದೇ ವಿಶಿಷ್ಟತೆ ನೀಡಲು ಅವರಿಗೂ ಹಕ್ಕಿರುವುದಿಲ್ಲ. ಒಡೆಯರ ರಾಜಕೀಯ ಪ್ರಭಾವಗಳಿಗೆ ಮಣಿಯುವ ಪ್ರಮೇಯವೂ ಇಲ್ಲ. ಹೀಗೆ ಒತ್ತಡಕ್ಕೆ ಮಣಿದು, ಮಾಲಿಕರಲ್ಲದವರ ಹಿತಾಸಕ್ತಿಗಳನ್ನು ದಮನಿಸಿ, ಮಾಲಿಕರ ಹಿತರಕ್ಷಣೆಗಾಗಿ ಕಾನೂನು ನಿರ್ಮಿಸುವುದಿಲ್ಲ. ಇದು ಇಸ್ಲಾಮೀ ಪದ್ಧತಿಯು ರೂಢಿಯಲ್ಲಿದ್ದ ಕಾಲದ ಕುರಿತು ನಾವು ಹೇಳುತ್ತಿದ್ದೇವೆ. ಅದರ ಅಧಃಪತನದಿಂದ ಪರಂಪರಾಗತ ರಾಜಾಳ್ವಿಕೆಯು ಅಧಿಕಾರಕ್ಕೇರಿದ ಕಾಲದ ಕುರಿತಲ್ಲ. ಯಾಕೆಂದರೆ ಅದು ಇಸ್ಲಾಮೀ ಆಳ್ವಿಕೆಯಾಗಿರಲಿಲ್ಲ. ಅದಕ್ಕೆ ಇಸ್ಲಾಮ್ ಸರ್ವಥಾ ಹೊಣೆಯಲ್ಲ. ಇಸ್ಲಾಮಿನ ನ್ಯಾಯನಿಷ್ಠ ಮತ್ತು ಮಾದರೀಯೋಗ್ಯ ಹಂತವು ತೀರಾ ಅಲ್ಪವಾಗಿದ್ದುದರಿಂದ ಅದು ವಾಸ್ತವಿಕ ಲೋಕದಲ್ಲಿ ಸಾಕ್ಷಾತ್ಕಾರಗೊಳಿಸಲಾಗದ ಕಾಲ್ಪನಿಕ ಪದ್ಧತಿಯೆಂದೆಣಿಸಲಾಗುವುದಿಲ್ಲ. ಒಮ್ಮೆ ಸಂಭವಿಸಿದ್ದು ಯಾವಾಗ ಬೇಕಿದ್ದರೂ ಪುನರಾವರ್ತನೆಯಾಗಬಹುದು. ಆ ಯುಗದ ಪುನರಾವರ್ತನೆಗಾಗಿ ಪ್ರಯತ್ನಿಸಬೇಕಾದುದು ಇಂದಿನ ಮಾನವರ ಕರ್ತವ್ಯವಾಗಿದೆ. ಇತಿಹಾಸದ ಕರಾಳ ಮಧ್ಯಂತರಗಳಲ್ಲಿಯೂ ಅವರ ಪೂರ್ವಜರು ಅದನ್ನು ಕಾರ್ಯಗತಗೊಳಿಸಿದ್ದರೆ, ಈ ಕಾಲವು ಅದರ ಸಾಕ್ಷಾತ್ಕಾರಕ್ಕೆ ಎಲ್ಲ ದೃಷ್ಟಿಯಿಂದಲೂ ಸುಯೋಗ್ಯವಾಗಿದೆ.

ಹಾಗಿದ್ದರೆ ಇಸ್ಲಾಮೀ ಪದ್ಧತಿಯಲ್ಲಿ ಸಿರಿವಂತರು ಕಾನೂನು ನಿರ್ಮಿಸುವುದಿಲ್ಲ. ಮಾನವ ಮೇಲ್ಮೆ ಮತ್ತು ಮಾನವೀಯ ಹಕ್ಕುಗಳಲ್ಲಿ ಸಮಾನತೆಯನ್ನು ಹೊಂದಿರುವ ಕಾನೂನಿಗೆ ಇತರರಂತೆಯೇ ಅವರೂ ಬದ್ಧರಾಗಿರುತ್ತಾರೆ. ಯಾವುದಾದರೊಂದು ದಾಖಲೆಯ ವಿಷಯದಲ್ಲಿ ವಿವಾದ ಉದ್ಭವಿಸಿದರೆ-ಅದು ಲೋಕದ ಇತರ ಕಾನೂನುಗಳಲ್ಲಿಯೂ ಸ್ವಾಭಾವಿಕ-ಕರ್ಮ ಶಾಸ್ತ್ರಜ್ಞರು ಆ ಬಗ್ಗೆ ತೀರ್ಪು ನೀಡಬೇಕು.[1] ಇಸ್ಲಾಮೀ ಕರ್ಮಶಾಸ್ತ್ರಜ್ಞರು ಶ್ರಮಿಕ ವರ್ಗದ ವಿರುದ್ಧ ಒಡೆಯರಿಗಾಗಿ ಕಾನೂನು ನಿರ್ಮಿಸಿಲ್ಲದಿರುವುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ. ಆ ವಿದ್ವಾಂಸರು ದುಡಿಯುವ ವರ್ಗದ ಹಕ್ಕು ಸಂರಕ್ಷಣೆ ಮತ್ತು ಮೂಲ

---

1. ವಿವಾದಾಸ್ಪದವಲ್ಲದ, ಸ್ಪಷ್ಟದಾಖಲೆಗಳು ಇಲ್ಲದ ಪ್ರಸಂಗಗಳಲ್ಲಿ ಮಾತ್ರ.

ಬೇಡಿಕೆಗಳನ್ನು ಪೂರೈಸುವುದಕ್ಕಾಗಿಯೇ ಸದಾಕಾಲ ಪ್ರಯತ್ನಿಸಿದ್ದರು. ಹಿಂದಿನ ಅಧ್ಯಾಯದಲ್ಲಿ ನಾವು ಉದಾಹರಿಸಿರುವಂತೆ, ಕಾರ್ಮಿಕನ ದುಡಿಮೆ ಮತ್ತು ಮಾಲಿಕನ ಭಂಡವಾಳವು ಸಮಾನವೆಂಬ ಕಾನೂನು ಅದಕ್ಕೆ ಸ್ಪಷ್ಟ ಸಾಕ್ಷಿಯಾಗಿದೆ.

ಖಾಸಗಿ ಒಡೆತನವೆಂದರೆ ಅಕ್ರಮ ಮತ್ತು ಮರ್ದನವೆಂಬಷ್ಟರ ಮಟ್ಟಿಗೆ ಮಾನವೀಯ ಗುಣದ ಕುರಿತು ಇಸ್ಲಾಮಿಗೆ ಕೆಟ್ಟ ಅಭಿಪ್ರಾಯ ವಿಲ್ಲ. ಮಾನವ ಮನದ ಸುಧಾರಣೆಯಲ್ಲಿ ಅದು ಮಹಾ ವಿಜಯವನ್ನು ಸಾಧಿಸಿದೆ. ಅವರಲ್ಲಿ ಕೆಲವರು ಒಡೆಯರಾಗಿದ್ದರು. "ಅವರಿಗೆ ನೀಡಲ್ಪಟ್ಟುದರ (ಸಂಪತ್ತಿನಲ್ಲಿ) ಬಗ್ಗೆ ಅವರ ಹೃದಯದಲ್ಲಿ ಯಾವ ಆಶೆಯೂ ಇರಿಸುವುದಿಲ್ಲ. ಅವರು ತಮಗೆ ಅನಿವಾರ್ಯ ಅವಶ್ಯಕತೆಗಳಿದ್ದಾಗಲೂ ಇತರರಿಗೆ ಆದ್ಯತೆ ನೀಡುವರು" (ಅಲ್‌ಹಶ್ರ್:7) ಹೀಗೆ ಅವರು ತಮ್ಮ ಸಂಪತ್ತುಗಳಲ್ಲಿ ಇತರರನ್ನೂ ಸಹಭಾಗಿಗಳಾಗಿಸುತ್ತಾರೆ. ಅವರಿಂದ ಪ್ರತಿಫಲ ಅಥವಾ ಲಾಭವನ್ನು ನಿರೀಕ್ಷಿಸದೆ ಕೇವಲ ಅಲ್ಲಾಹನ ಸಂಪ್ರೀತಿ ಮತ್ತು ಕ್ಷಮೆಯನ್ನಷ್ಟೇ ಬಯಸಿದ್ದರು.

ಅಪೂರ್ವವಾಗಿದ್ದರೂ ಇಂತಹ ಉನ್ನತ ಮಾದರಿಗಳನ್ನು ನಿರ್ಲಕ್ಷಿಸುವಂತಿಲ್ಲ. ಯಾಕೆಂದರೆ ಅವು ಭವಿಷ್ಯದ ದಾರಿದೀಪಗಳಾಗಿವೆ. ಹಾಗೆಯೇ ಮಾನವಕುಲ ಎಂದಾದರೊಂದು ದಿನ ಅದನ್ನು ಸಾಧಿಸಬಹುದೆಂಬುದರ ಶುಭ ಸೂಚನೆಯಾಗಿದೆ. ಇಸ್ಲಾಮ್ ಕಲ್ಪನಾ ಲೋಕದಲ್ಲಿ ವಿಹರಿಸುವುದಿಲ್ಲ. ಸಂಭಾವ್ಯ ಅಥವಾ ಅಸಂಭವಕ್ಕೆ ಅವಕಾಶವಿರುವ ಉನ್ನತ ಧ್ಯೇಯಗಳಿಗಾಗಿ ಸಮಾಜದ ಹಿತಾಸಕ್ತಿಗಳನ್ನು ಪಣವಿಡುವುದಿಲ್ಲ. ಆತ್ಮಶುದ್ಧಿ ಮತ್ತು ಸಂಸ್ಕರಣೆಗೆ ತೀವ್ರ ಗಮನ ಹರಿಸುವುದರೊಂದಿಗೆ, ಅದು ಕಾರ್ಯಸಾಧನೆಯ ನೈಜ ಪ್ರಜ್ಞೆಯನ್ನೂ ಹೊಂದಿದೆ. ಆದ್ದರಿಂದಲೇ ಅದು ಸಂಪತ್ತಿನ ನ್ಯಾಯೋಚಿತ ವಿತರಣೆಯ ಕಾನೂನುಗಳನ್ನೂ ರಚಿಸಿದೆ. ಹೀಗೆ ಅದು ದ್ವಿಮುಖ ಭದ್ರತೆಯನ್ನು ಒದಗಿಸುತ್ತದೆ. ಇಲ್ಲಿ ನೀತಿ ಮತ್ತು ನ್ಯಾಯ ಸಮಂಜಸವಾಗಿ ಸಮ್ಮಿಳಿತ ವಾಗುತ್ತದೆ. ಅದನ್ನೇ ಉಸ್ಮಾನ್(ರ) ಹೇಳಿದ್ದಾರೆ: *"ಕುರ್‌ಆನ್‌ನಿಂದ ಜ್ಯಾರಿಗೊಳಿಸಲಸಾಧ್ಯವಾದುದನ್ನು ಅಲ್ಲಾಹನು ಅಧಿಕಾರದಿಂದ ಜ್ಯಾರಿಗೊಳಿಸುತ್ತಾನೆ."*

ಇಸ್ಲಾಮೀ ಇತಿಹಾಸದಲ್ಲಿ ಒಡೆತನ ಸಂಪ್ರದಾಯವು ಒಂದು ವಾಸ್ತವಿಕತೆಯಾಗಿಯೇ ಉಳಿದಿತ್ತು. ಆದರೂ ಅಲ್ಲಿ ಅನ್ಯಾಯವಾಗಲಿಲ್ಲ. ಹಿಂದಿನ ಎರಡು ಅಧ್ಯಾಯಗಳಲ್ಲಿ ನಾವು ಇಸ್ಲಾಮಿನ ಎರಡು ಉದಾಹರಣೆಗಳನ್ನು ಬೊಟ್ಟು ಮಾಡಿದ್ದೇವು. ಕೃಷಿ ಒಡೆತನ ಅವುಗಳಲ್ಲೊಂದು. ಅದು ಯೂರೋಪಿನಂತೆ ಇಸ್ಲಾಮೀ ಲೋಕವನ್ನು ಜಾಗೀರುದಾರೀ ಪದ್ಧತಿಗೆ ಸಾಗಿಸಲಿಲ್ಲವೆಂಬುದನ್ನು ನಾವು ಕಂಡೆವು. ಅಲ್ಲಿ ಜಾಗೀರುದಾರೀ ಪದ್ಧತಿಯನ್ನು ತಡೆಯುವ ಸಾಮಾಜಿಕ-ಆರ್ಥಿಕ ಕಾನೂನುಗಳಿದ್ದುದರಿಂದಲೇ ಹಾಗಾಯಿತು. ಮಾಲಿಕರ ಶೋಷಣೆಗೆ ಗುರಿಯಾಗದೆ ಮಾಲಕರಲ್ಲದವರು ಸ್ವಾವಲಂಬಿಗಳಾಗುವಂತಹ ಗೌರವಾರ್ಹ ಜೀವನ ಸೌಲಭ್ಯಗಳನ್ನು ಇಸ್ಲಾಮ್ ಅವರಿಗೆ ಒದಗಿಸಿಕೊಟ್ಟಿತು.

ಇನ್ನೊಂದು ಉದಾಹರಣೆಯು ಭಂಡವಾಳಶಾಹೀ ಒಡೆತನದ ಕುರಿತಾಗಿದೆ. ಇಸ್ಲಾಮೀ ಲೋಕದಲ್ಲಿ ಭಂಡವಾಳಶಾಹಿತ್ವವು ಹುಟ್ಟಿಕೊಳ್ಳುತ್ತಿದ್ದರೆ, ಅದರಲ್ಲಿ ಒಳಿತಿನ ಅಂಶವು ಪ್ರಾಬಲ್ಯದಲ್ಲಿರುವ ತನಕ ಇಸ್ಲಾಮ್ ಅದನ್ನು ಅನುಮತಿಸುತ್ತಿತ್ತು. ಅದು ಸುಧಾರಣೆ ಮತ್ತು ಕಾನೂನು ನಿರ್ಮಾಣದ ಸಕಲ ಮಾರ್ಗಗಳನ್ನು ಬಳಸಿ ಅನ್ಯಾಯ ಮತ್ತು ಶೋಷಣೆಗಳನ್ನು ತಡೆಗಟ್ಟುತ್ತಿತ್ತು. ಅದು ಖಾಸಗಿ ಒಡೆಯನನ್ನು ಪಾಶ್ಚಾತ್ಯ ಭಂಡವಾಳಶಾಹೀ ಲೋಕವು ಇಂದು ಅನುಭವಿಸುತ್ತಿರುವ ದುಷ್ಪರಿಣಾಮಗಳೆಡೆಗೆ ತಳ್ಳುತ್ತಿರಲಿಲ್ಲ. ಹಾಗೆಯೇ ಅದು ಖಾಸಗಿ ಒಡೆತನಕ್ಕೆ ಸರ್ವಸ್ವಾತಂತ್ರ್ಯವನ್ನೂ ನೀಡುವುದಿಲ್ಲ. ಇಸ್ಲಾಮೀ ಕಾನೂನಿನಂತೆ ಸಾರ್ವಜನಿಕ ಸಂಪನ್ಮೂಲಗಳು ಸಾರ್ವಜನಿಕ ಒಡೆತನದಲ್ಲಿರಬೇಕು. ನ್ಯಾಯಬಾಹಿರವೆಂದು ಮನಗಂಡಾಗ ಅದು ಖಾಸಗಿ ಒಡೆತನವನ್ನು ನಿಷೇಧಿಸಿತು. ಮಾನವನು ಮಾನವನನ್ನು ಅಧೀನಗೊಳಿಸಿ ಅನ್ಯಾಯವೆಸಗುವುದಿಲ್ಲವೆಂದು ಮನಗಂಡಾಗ ಅದಕ್ಕೂ ಅನುಮತಿ ನೀಡಿತು.

ಇಸ್ಲಾಮೀ ಲೋಕದ ಹೊರಗಿನ, ಮೂರನೇಯ ಉದಾಹರಣೆಯನ್ನೂ ಹೇಳುತ್ತೇನೆ: ಸ್ಕೇಂಡಿನೇವಿಯನ್ ರಾಷ್ಟ್ರಗಳ ಉದಾಹರಣೆ. ಜಗತ್ತಿನಲ್ಲಿ ಅತ್ಯಂತ ವ್ಯತಿರಿಕ್ತ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆಯಿರುವ ಬ್ರಿಟಿಷರು, ಫ್ರೆಂಚರು ಮತ್ತು ಅಮೇರಿಕನರು; ಸ್ಕೇಂಡಿನೇವಿಯನ್ ರಾಷ್ಟ್ರಗಳು ಲೋಕದಲ್ಲಿ ಅತ್ಯಧಿಕ ಪ್ರಗತಿ, ಸೌಹಾರ್ದ ಮತ್ತು ಸಮತೋಲನ ಸಾಧಿಸಿವೆಯೆಂದು ವಾದಿಸುತ್ತಾರೆ. ಆದರೆ ಅಲ್ಲಿಯೂ ಖಾಸಗಿ ಒಡೆತನದ ಕಾನೂನನ್ನು ನಿಷೇಧಿಸಿಲ್ಲ. ಅವರು ಸಮಾಜದ ವಿವಿಧ ವರ್ಗಗಳ ಅಂತರವನ್ನು ಕಡಿಮೆಗೊಳಿಸಲು ಹಾಗೂ ದುಡಿಮೆ ಮತ್ತು ವೇತನದಲ್ಲಿ ಸಮತೋಲನವನ್ನು ಕಾಪಾಡಲು ಪರ್ಯಾಪ್ತವಾದ ರೀತಿಯಲ್ಲಿ ಸಂಪತ್ತಿನ ನ್ಯಾಯೋಚಿತ ವಿತರಣೆಯ ಭದ್ರತೆಯನ್ನಷ್ಟೇ ಏರ್ಪಡಿಸಿದರು. ಈ ಬಗ್ಗೆ ಸ್ಕಾಂಡಿನೇವಿಯನ್ ರಾಷ್ಟ್ರಗಳು ಇಸ್ಲಾಮೀ ವಿಚಾರಧಾರೆಯನ್ನು ಅತ್ಯಧಿಕ ಸಾಕ್ಷಾತ್ಕಾರ ಗೊಳಿಸಿವೆಯೆಂದೂ ಹೇಳಬಹುದಾಗಿದೆ.

ಯಾವ ಆರ್ಥಿಕ ಪದ್ಧತಿಯನ್ನಾದರೂ ಅದರ ಹಿನ್ನೆಲೆಯಲ್ಲಿರುವ ಸಾಮಾಜಿಕ ಮತ್ತು ವೈಚಾರಿಕ ತತ್ವ ಚಿಂತನೆಗಳಿಂದ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಇಂದು ಲೋಕದಲ್ಲಿ ಪ್ರಚಾರವಾಗುತ್ತಿರುವ ಭಂಡವಾಳಶಾಹಿತ್ವ, ಕಮ್ಯೂನಿಝಮ್ ಮತ್ತು ಇಸ್ಲಾಮ್ ಎಂಬೀ ಮೂರು ಪದ್ಧತಿಗಳನ್ನು ಪರಿಶೀಲಿಸಿದರೆ, ಅವುಗಳ ಆರ್ಥಿಕ ಪದ್ಧತಿಗೂ ಖಾಸಗಿ ಒಡೆತನ ಸಿದ್ಧಾಂತಕ್ಕೂ ಸಾಮಾಜಿಕ ಚಿಂತನೆಗಳೊಂದಿಗೆ ನಿಕಟ ಸಂಬಂಧವಿರುವುದು ನಮಗೆ ವ್ಯಕ್ತವಾಗುತ್ತದೆ. ಭಂಡವಾಳಶಾಹಿತ್ವವನ್ನು ನೋಡೋಣ- ವ್ಯಕ್ತಿಗಳ ಪ್ರಮಾದರಾಹಿತ್ಯವೇ ಅದರ ಆಧಾರ ಶಿಲೆ. ಆತ ಪವಿತ್ರ ಮತ್ತು ಸಂಪೂರ್ಣ ಸ್ವತಂತ್ರ್ಯ. ಆತನ ವೈಯಕ್ತಿಕ ಸ್ವಾತಂತ್ರ್ಯದ ಮೇಲೆ ಹಸ್ತಕ್ಷೇಪ ನಡೆಸಲು ಸಮಾಜಕ್ಕೆ ಅಧಿಕಾರವಿಲ್ಲ. ಆದ್ದರಿಂದ ಅಲ್ಲಿ ಖಾಸಗೀ ಒಡೆತನವು ಯಾವ ನಿಯಂತ್ರಣವೂ ಇಲ್ಲದೆ

ಅನುಮತಿಸಲ್ಪಟ್ಟಿದೆ.[1]. ಕಮ್ಯೂನಿಝುಮ್‌ನಲ್ಲಿ ಸಮಾಜವೇ ಪರಮ ಪ್ರಧಾನ. ಅದು ಸಮಾಜದ ಪ್ರತಿನಿಧಿಯೆಂಬ ನೆಲೆಯಲ್ಲಿ ಒಡೆತನ ಹಕ್ಕನ್ನು ರಾಷ್ಟ್ರದ ಹಸ್ತಗಳಲ್ಲಿ ಅರ್ಪಿಸಿದೆ. ಜನರಿಗೆ ಅದು ನಿಷಿದ್ಧವಾಗಿದೆ.

ಆದರೆ ಇಸ್ಲಾಮಿನ ವಿಚಾರಧಾರೆಯು ಈ ನಿಟ್ಟಿನಲ್ಲಿ ಸಂಪೂರ್ಣ ಭಿನ್ನವಾಗಿದೆ. ಆದ್ದರಿಂದ ಅದರ ಆರ್ಥಿಕ ಸಿದ್ಧಾಂತವೂ ಭಿನ್ನವಾಗಿದೆ. ವ್ಯಕ್ತಿ ಮತ್ತು ಸಮಾಜದ ಕುರಿತು ಇಸ್ಲಾಮ್ ಹೊಂದಿರುವ ದೃಷ್ಟಿಕೋನದಂತೆ ವ್ಯಕ್ತಿಗೆ ಏಕಕಾಲದಲ್ಲಿ ಎರಡು ಪಾತ್ರಗಳಿವೆ. ಓರ್ವ ಸ್ವತಂತ್ರ ವ್ಯಕ್ತಿ ಮತ್ತು ಸಮಾಜದ ಓರ್ವ ಸದಸ್ಯನೆಂಬ ನೆಲೆಗಳಲ್ಲಿ. ಈ ಎರಡೂ ಗುಣಗಳೂ ಆತನಲ್ಲಿ ಸರದಿಯಂತೆ ಪ್ರಕಟವಾಗುವುವು. ಅಂತಿಮವಾಗಿ ಅವೆರಡೂ ಆತ ನಲ್ಲಿ ಮೈಗೂಡುತ್ತವೆ. ಅವೆರಡೂ ಗುಣಗಳನ್ನು ಸಮನ್ವಯಗೊಳಿಸಲು ಆತ ಶಕ್ತನಿದ್ದಾನೆ.

ಈ ದೃಷ್ಟಿಕೋನದಿಂದ ರೂಪುಗೊಳ್ಳುವ ಇಸ್ಲಾಮಿನ ಸಾಮಾಜಿಕ ನೀತಿಯು ಸಮಾಜ ಮತ್ತು ವ್ಯಕ್ತಿಯನ್ನು ಪರಸ್ಪರ ಬೇರ್ಪಡಿಸುವುದಿಲ್ಲ. ಅವರೀರ್ವರನ್ನೂ ವೈರಿಗಳನ್ನಾಗಿ ಮಾಡಿ, ವಿರುದ್ಧ ದಿಕ್ಕಿನಲ್ಲಿ ನಿಲ್ಲಿಸಿ ಹೋರಾಡಿಸುವುದಿಲ್ಲ. ಪರಸ್ಪರ ವಂಚಿತವಾಗಲು ಪ್ರೇರೇಪಿಸುವುದಿಲ್ಲ. ಪ್ರತೀಯೊಬ್ಬರೂ ಸ್ವಂತ ನೆಲೆಯಲ್ಲಿ ಸ್ವತಂತ್ರ ವ್ಯಕ್ತಿಯಾಗಿರುವಂತೆಯೇ ಸಮಾಜದಲ್ಲಿ ಓರ್ವ ಸದಸ್ಯರೂ ಆಗಿರುತ್ತಾರೆ. ಆದ್ದರಿಂದ ಕಾನೂನು, ವೈಯಕ್ತಿಕ ಮತ್ತು ಸಾಮಾಜಿಕ ಭಾವನೆಗಳನ್ನು ಸಂತುಲಿತಗೊಳಿಸಬೇಕು. ಸಮಾಜದ ನಿರ್ಮಾಣಕ್ಕೆ ಪೂರಕವಾದ ಪ್ರತೀಯೊಬ್ಬ ವ್ಯಕ್ತಿಯ ಹಿತಾಸಕ್ತಿಗಳಲ್ಲಿ ಸಮತೋಲನ ಸಾಧಿಸಬೇಕು. ಅಲ್ಲಿ ಯಾವುದಾದರೊಂದು ಭಾವನೆಯ ವಿರುದ್ಧ ಪಕ್ಷಪಾತ ತೋರಬಾರದು. ಹಾಗೆಯೇ ವ್ಯಕ್ತಿಗಾಗಿ ಸಮಾಜವನ್ನು ಅಥವಾ ಸಮಾಜಕ್ಕಾಗಿ ವ್ಯಕ್ತಿಯನ್ನು ಬಲಿಪಶುವನ್ನಾಗಿ ಮಾಡಬಾರದು.

ಮುಂದೆ ಇಸ್ಲಾಮಿ ಆರ್ಥಿಕ ಸಿದ್ಧಾಂತಗಳು ಸಂತುಲಿತವಾದ ಈ ವಿಚಾರಶೈಲಿಗನು ಸಾರವಾಗಿ ಸಾಗುತ್ತವೆ. ಇದು ಕಮ್ಯೂನಿಝುಮ್ ಮತ್ತು ಭಂಡವಾಳಶಾಹಿತ್ವ ಗಳೆರಡರಲ್ಲಿಯೂ ಇರುವ ಒಳಿತುಗಳನ್ನೊಳಗೊಂಡಿದ್ದು ಅವುಗಳ ಕೆಡುಕಿನಿಂದ ಸಂಪೂರ್ಣ ಮುಕ್ತವಾದ ಸಮರ್ಥ ಪದ್ಧತಿಯಾಗಿದೆ. ಅದು ತಾತ್ವಿಕವಾಗಿ ಖಾಸಗಿ ಒಡೆತನವನ್ನು ಅಂಗೀಕರಿಸುತ್ತದೆ. ಜೊತೆಗೇ ಅದರ ಕೆಡುಕುಗಳನ್ನು ತಡೆಯುವ ನಿಯಂತ್ರಣಗಳನ್ನೂ ಅದರ ಮೇಲೆ ಹೊರಿಸುತ್ತದೆ. ಸಮಾಜದ ಸಮಗ್ರ ಹಿತಕ್ಕೆ ಪ್ರಯೋಜನಕಾರಿಯೆಂದು ಭಾಸವಾದಾಗಲೆಲ್ಲಾ ಖಾಸಗಿ ಒಡೆತನವನ್ನು ನಿಯಂತ್ರಿಸಲು ಹಾಗೂ ಸುವ್ಯವಸ್ಥಿತಗೊಳಿಸಲು ಸಮಾಜಕ್ಕೆ - ಸಮಾಜದ ಪ್ರತಿನಿಧಿಯಾಗಿರುವ ಆಡಳಿತಗಾರನಿಗೆ ಅಧಿಕಾರವಿದೆ.

---

1. ಕಟ್ಟಕಡೆಗೆ ಕಮ್ಯೂನಿಝುಮ್‌ನ ಭೀತಿಯಿಂದ ಕೆಲವು ನಿರ್ಬಂಧಗಳನ್ನು ಹೇರಲಾಯಿತು. ಇಂಗ್ಲೆಂಡಿನಲ್ಲಿ ಖನಿಜಗಳು ವಾಸ್ತವದಲ್ಲಿ ಸಾರ್ವಜನಿಕ ಸಂಪತ್ತಾಗಿದೆ. ಅದು ಕೆಲವಾರು ವರ್ಷಗಳ ಹಿಂದಿನ ತನಕ ಖಾಸಗಿ ಒಡೆತನದಲ್ಲಿದ್ದಿತು. ಅಮೇರಿಕದಲ್ಲಿ ಇಂದಿಗೂ ಅವು ಖಾಸಗಿ ಒಡೆತನದಲ್ಲಿದೆ.

ಆದ್ದರಿಂದ ಖಾಸಗಿ ಒಡೆತನದ ದೋಷಗಳನ್ನು ನಿವಾರಿಸಿಕೊಳ್ಳಬಹುದೆಂಬ ಭರವಸೆಯಿರುವ ತನಕ ಇಸ್ಲಾಮ್ ಅದನ್ನು ನಿಷೇಧಿಸಲಾರದು. ಖಾಸಗಿ ಒಡೆತನವನ್ನು ನಿಯಂತ್ರಿಸುವ ಹಾಗೂ ಸುವ್ಯವಸ್ಥಿತಗೊಳಿಸುವ ಸಮಾಜದ ಹಕ್ಕನ್ನು ಅಂಗೀಕರಿಸುತ್ತಾ, ಒಂದು ತತ್ವವೆಂಬ ನೆಲೆಯಲ್ಲಿ ಅದನ್ನು ಉಳಿಸಿಕೊಳ್ಳುವುದು ಸಂಪೂರ್ಣವಾಗಿ ನಿಷೇಧಿಸುವುದಕ್ಕಿಂತ ಅದೆಷ್ಟೋ ಉತ್ತಮ. ಅದು ಮಾನವ ಸ್ವಭಾವಕ್ಕೆ ಸೂಕ್ತವಾದ ನೀತಿಯೂ ಆಗಿದೆ. ಅದರ ನಿಷೇಧಕ್ಕಾಗಿ ನೀಡಲಾಗುತ್ತಿರುವ ಸಮರ್ಥನೆಗಳಾದರೋ, ಈ ತನಕ ನಿಖರವಾಗಿ ಸಾಬೀತುಗೊಂಡಿಲ್ಲ. ಖಾಸಗಿ ಒಡೆತನದ ಕೆಲವು ಅಂಶಗಳಿಗೆ ರಶ್ಯವು ಅನಿವಾರ್ಯವಾಗಿ ಅನುಮತಿ ನೀಡಿದೆ. ಇದು ಮಾನವನ ನೈಸರ್ಗಿಕ ಬೇಡಿಕೆಗಳಿಗೆ ಸ್ಪಂದಿಸುವುದರಲ್ಲಿಯೇ ನೈಜ ಹಿತ ಅಡಕವಾಗಿರುವುದೆಂಬುದಕ್ಕೆ ಪ್ರಬಲ ಪುರಾವೆಯಾಗಿದೆ. ಅದು ವ್ಯಕ್ತಿಗೂ ಸಮಾಜಕ್ಕೂ ಸಮಾನ ಹಿತಕಾರಿಯಾಗಿದೆ.

******

ಇನ್ನೊಂದು ಪ್ರಶ್ನೆ:

ಖಾಸಗಿ ಒಡೆತನವನ್ನು ಯಾಕೆ ನಿಷೇಧಿಸಬೇಕು? ಇಸ್ಲಾಮ್ ಕೂಡಾ ಅದನ್ನು ನಿಷೇಧಿಸಬೇಕೆಂದು ನಾವು ಒತ್ತಾಯಿಸುವುದರ ಉದ್ದೇಶವೇನು?

ಖಾಸಗಿ ಒಡೆತನದ ನಿಷೇಧವೇ ಮಾನವೀಯ ಸಮಾನತೆಯ ಏಕೈಕ ಹಾದಿಯೆಂದು ಕಮ್ಯೂನಿಸ್ಟರು ಹೇಳುತ್ತಾರೆ. ಅಧಿಕಾರ ಮೋಹ ಮತ್ತು ಆಧಿಪತ್ಯ ಲಾಲಸೆಯ ಉಚ್ಚಾಟನೆಗೆ ಅದೊಂದೇ ದಾರಿಯಿರುವುದಂತೆ. ಉತ್ಪಾದಕ ಉಪಕರಣಗಳ ಖಾಸಗಿ ಒಡೆತನವನ್ನು ರಶ್ಯ ನಿಷೇಧಿಸಿತು.... ಆದರೆ ತನ್ಮೂಲಕ ನಿರ್ದಿಷ್ಟ ಧ್ಯೇಯ ಸಾಧಿಸಿತೇ? ಸ್ಟಾಲಿನ್‌ರ ಕಾಲದಲ್ಲಿ ರಶ್ಯವು ಹೆಚ್ಚು ದುಡಿಮೆಗೆ ಹೆಚ್ಚು ವೇತನವೆಂಬ ನೀತಿಯನ್ನು ಅಂಗೀಕರಿಸಿತು. ಆದರೆ ಅದರಿಂದ ಕಾರ್ಮಿಕರ ವೇತನ ಮಟ್ಟದಲ್ಲಿಯೇ ಭಾರೀ ಅಂತರ ಉಂಟಾಗಲಿಲ್ಲವೇ? ಕಮ್ಯೂನಿಸ್ಟ್ ತತ್ವವು, ಪ್ರತೀಯೊಬ್ಬರಿಂದಲೂ ಸಾಮರ್ಥ್ಯಕ್ಕನುಸಾರ, ಪ್ರತೀಯೊಬ್ಬರಿಗೂ ಬೇಡಿಕೆಗನುಸಾರ ಎಂದಿತ್ತಲ್ಲವೇ? ಸೋವಿಯಟ್ ರಶ್ಯದಲ್ಲಿ ಎಲ್ಲರಿಗೂ ಸಮಾನ ವೇತನ ದೊರೆಯುತ್ತಿದೆಯೇ? ಓರ್ವ ಇಂಜಿನಿಯರನಿಗೂ ಸಾಮಾನ್ಯ ಕಾರ್ಮಿಕನಿಗೆ ದೊರೆಯುವ ವೇತನ ನೀಡಲಾಗುತ್ತಿದೆಯೇ? ದಾದಿ ಮತ್ತು ವೈದ್ಯರಿಗೆ ಸಮಾನ ವೇತನ ನೀಡಲಾಗುತ್ತಿದೆಯೇ? ಸೋವಿಯಟ್ ರಶ್ಯದಲ್ಲಿ ಇಂಜಿನಿಯರುಗಳಿಗೆ ಅತ್ಯಧಿಕ ಸಂಬಳ ನೀಡಲಾಗುತ್ತಿದೆಯೆಂದು ಕಮ್ಯೂನಿಸ್ಟರೇ ಬೊಬ್ಬಿರಿಯುತ್ತಿದ್ದಾರೆ. ಕಲೆಗಾರರಿಗೆ ಅಲ್ಲಿ ಉನ್ನತ ಸ್ಥಾನವಿದೆ. ರಶ್ಯನ್ ಜನತೆಯಲ್ಲಿ ವಿವಿಧ ವಿಭಾಗಗಳಿಗೆ ವಿಭಿನ್ನ ವೇತನ ಮಟ್ಟವಿದೆಯೆಂದು ಅವರೇ ಒಪ್ಪುತ್ತಾರೆ. ಕಾರ್ಮಿಕರಲ್ಲಿ, ನಾವು ಈ ಹಿಂದೆ ನೋಡಿದಂತೆ ಒಂದೇ ವಿಭಾಗದಲ್ಲಿಯೂ ವಿಭಿನ್ನ ವೇತನಮಟ್ಟಗಳಿವೆ.

ಕೊನೆಗೆ, ಆಧಿಪತ್ಯ ಮೋಹ, ಮತ್ತು ವ್ಯಕ್ತಿತ್ವ ಪ್ರಜ್ಞೆಯನ್ನು ಅಳಿಸಲು ಅವರಿಂದ ಧ್ಯವಾಯಿತೇ? ಹಾಗಿದ್ದರೆ ಚುನಾವಣೆ ಮತ್ತು ಸ್ಪರ್ಧೆ ನಡೆಯುವುದೇಕೆ? ರಶ್ಯನ್ ಮ್ಯುನಿಸ್ಟ್ ಪಕ್ಷದ ಓರ್ವ ಸದಸ್ಯನಿಗೆ ಇನ್ನೊಬ್ಬ ಸದಸ್ಯನಿಗಿಂತ ವಿಶಿಷ್ಟತೆ ಕಲ್ಪಿಸುವುದೇಕೆ?

ಖಾಸಗಿ ಒಡೆತನವನ್ನು ಕೊನೆಗೊಳಿಸುವ ಅಥವಾ ಉಳಿಸಿಕೊಳ್ಳುವ ಮಾತಂತಿರಲಿ, ಧಿಕಾರ ಮೋಹ ಮತ್ತು ವ್ಯಕ್ತಿತ್ವ ಪ್ರಜ್ಞೆ ಮಾನವನ ಹುಟ್ಟುಗುಣವಲ್ಲವೇ? ಕಮ್ಯೂನಿಸ್ಟರು ರ್ಲಕ್ಷಿಸಲಾಗದ ಮಹಾ ಗಂಡಾಂತರವೆಂದು ಭಾವಿಸುವ ಖಾಸಗಿ ಒಡೆತನದ ಷೇಧದಿಂದಲೂ ಮಾನವಕುಲಕ್ಕೆ ವಿಮೋಚನೆ ದೊರೆತಿಲ್ಲವೆಂದ ಮೇಲೆ ಯಾವ ೀತಿಯಿಂದಲೂ ಸಾಕ್ಷಾತ್ಕರಿಸಲಾಗದ ಧ್ಯೇಯಕ್ಕಾಗಿ ಮಾನವನ ನೈಸರ್ಗಿಕ ಸ್ವಭಾವದೊಂದಿಗೆ ವೇಕೆ ಸಂಘರ್ಷಿಸಬೇಕು?

ಹಾಗಲ್ಲ, ರಶ್ಯದ ವಿವಿಧ ವಿಭಾಗಗಳಲ್ಲಿ ಮತ್ತು ವ್ಯಕ್ತಿಗಳಲ್ಲಿರುವ ಅಂತರವು ತೀರಾ ಲ್ಲಕ, ಅದು ಸುಖಾಡಂಬರ ಮತ್ತು ಹಸಿವಿನ ಎರಡು ಧ್ರುವಗಳಿಗೆ ತಲಪಿಸುವಷ್ಟು ೕಕರವಾಗಿಲ್ಲವೆಂದು ಅವರು ಹೇಳುತ್ತಾರೆಯೇ? ಹಾಗಿದ್ದರೆ, ನಾವು ಅವರೊಡನೆ ೀಳುತ್ತೇವೆ: ಹೌದು! ಇಸ್ಲಾಮ್ ಹಾಗಿದೆ. ಕಮ್ಯೂನಿಝಮ್‌ಗಿಂತ 1300 ವರುಷಗಳ ಂದೆಯೇ ಅದು ಜನರ ಪರಸ್ಪರ ಅಂತರವನ್ನು ಗರಿಷ್ಟ ಕಡಿಮೆಗೊಳಿಸಲಿಕ್ಕಾಗಿ ್ರಯತ್ನಿಸಿತ್ತು, ಆಡಂಬರದ ನಿರ್ಮೂಲನ, ಬಡತನದ ನಿವಾರಣೆಯೇ ಅದರ ್ಯೇಯವಾಗಿತ್ತು. ಆದರೆ ಅದರ ಸಾಧನೆಗಾಗಿ ಕೇವಲ ಕಾನೂನು ಕ್ರಮಗಳನ್ನಷ್ಟೇ ಅದು ಮ್ಮಿ ಕೊಳ್ಳುವುದಿಲ್ಲ. ಕಾನೂನು ಕ್ರಮಗಳೊಂದಿಗೆ ಅಲ್ಲಾಹನಲ್ಲಿಯೂ, ಒಳಿತು ಮತ್ತು ್ರೀತಿಯಲ್ಲಿ ಜನರಿಗಿರುವ ವಿಶ್ವಾಸವನ್ನೂ ಅದು ಅವಲಂಬಿಸುತ್ತದೆ.

# ಇಸ್ಲಾಮ್ ಮತ್ತು ವರ್ಗ ಪದ್ಧತಿ

"ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಜೀವನಾಧಾರದಲ್ಲಿ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆ." (ಅನ್ನಹ್ಲ್:71

"...ನಾವು ಇವರಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅನೇಕ ಮೇಲ್ಮೆ ನೀಡಿರುವೆವು. (ಅಝ್ಝುಖ್‌ರುಫ್:32

ಈ ಕುರ್‌ಆನ್‌ನ ಆಯತ್‌ಗಳನ್ನು ಉದ್ಧರಿಸಿ ಕೆಲವರು ಇಸ್ಲಾಮಿನಲ್ಲಿ ವರ್ಗಪದ್ಧತಿಯಿದೆಯೆಂದು ಸಮರ್ಥಿಸಲು ಪ್ರಯತ್ನಿಸುತ್ತಾರೆ.

ವರ್ಗ ಸಂಪ್ರದಾಯವೆಂದರೇನೆಂದು ನಾವು ಮೊದಲು ಪರಿಶೀಲಿಸೋಣ. ಆ ಬಳಿ ಇಸ್ಲಾಮ್ ಅದನ್ನು ಅನುಮತಿಸಿದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಬಹುದು

ಮಧ್ಯ ಯುಗದ ಐರೋಪ್ಯ ಇತಿಹಾಸವನ್ನು ಪರಿಶೀಲಿಸಿದರೆ, ದೊರೆಗಳು ಪುರೋಹಿತರು ಮತ್ತು ಜನಸಾಮಾನ್ಯರೆಂಬ ಸ್ಪಷ್ಟ ಗುಣ ವೈಶಿಷ್ಟ್ಯಗಳಿರುವ ಮೂರ ವಿಭಿನ್ನ ವರ್ಗಗಳು ಕಂಡುಬರುತ್ತವೆ. ಪ್ರಥಮ ನೋಟದಲ್ಲಿಯೇ ಅದನ್ನು ಯಾರಿಗೂ ವಿಂಗಡಿಸಿ ತಿಳಿಯಲು ಸಾಧ್ಯವಿತ್ತು.

ಪುರೋಹಿತರಿಗೆ ಸ್ವತಃ ವಿಶಿಷ್ಟ ವೇಷಭೂಷಣಗಳಿದ್ದುವು. ಆ ಕಾಲದಲ್ಲಿ ಅವರಿ ವಿಶೇಷ ಅಧಿಕಾರಗಳಿದ್ದುವು. ಅವರಿಗೆ ರಾಜರಿಗೂ ಸಾಮ್ರಾಟರಿಗೂ ಸಮಾನವಾದಂತಹ ಅಧಿಕಾರ ಶಕ್ತಿಯಿದ್ದಿತು. ಪುರೋಹಿತರು ಅವರಿಗೆ, ನಾವೇ ಅಧಿಕಾರ ನೀಡಿರುವೆವೆಂದೂ ಅವರು ತಮ್ಮ ಹಿರಿಮೆಯಿಂದ ಸ್ವತಂತ್ರವಾಗಲು ಪ್ರಯತ್ನಿಸುತ್ತಿರುವರೆಂದೂ ವಾದಿಸುತ್ತಿದ್ದರು. ಹಾಗೆಯೇ ಪುರೋಹಿತರ ಬಳಿ ಅಪಾರ ಸಂಪತ್ತು ಇರುತ್ತಿತ್ತು. ಆ ಸಂಪತ್ತು ಧರ್ಮಾನುಯಾಯಿಗಳಿಂದ ದಾನವಾಗಿಯೂ ಜನಸಾಮಾನ್ಯರಿಂದ ತೆರಿ ಮತ್ತು ಸುಂಕದ ರೂಪದಲ್ಲೂ ಸಂಗ್ರಹಿಸಿದ್ದಾಗಿತ್ತು. ಕೆಲವೊಮ್ಮೆ ಚರ್ಚ್‌ಗಳಿಗೆ ಸ್ವಂತ ಸೇನೆಯೂ ಇರುತ್ತಿತ್ತು.

ಇನ್ನೊಂದೆಡೆ, ಕುಲೀನತೆ ಪರಂಪರಾಗತವಾಗಿರುವ ದೊರೆವರ್ಗ. ದೊರ ಕುಟುಂಬದಲ್ಲಿ ಜನಿಸಿದವರು ಸಾಯುವ ತನಕ ದೊರೆಗಳೇ ಆಗಿರುತ್ತಿದ್ದರು. ಆಯುಷ್ಕಾಲದಲ್ಲಿ ಅವರು ಎಸಗುವ ಕೃತ್ಯವಾಗಲೀ, ಅವುಗಳಿಗೆ ಪ್ರಸ್ತುತ ಕುಲೀನತೆ ಯೊಂದಿಗಿರುವ ಸಂಬಂಧವಾಗಲೀ ಸಮಸ್ಯೆಯೇ ಅಲ್ಲ. ಅವರಿಗೆ ಜಾಗೀರುದಾರಿ ಪದ್ಧತಿಯಲ್ಲಿ ಜನತೆಯ ಮೇಲೆ ನಿರಂಕುಶ ಅಧಿಕಾರವಿತ್ತು. ಕಾನೂನು ನಿರ್ಮಾಣ, ನ್ಯಾಯ ತೀರ್ಮಾನ ಮತ್ತು ಆಡಳಿತವೆಲ್ಲವೂ ಅವರ ಹಸ್ತಗಳಲ್ಲಿದ್ದುವು. ಜನತೆಯ ಮೇಲೆ ಅವರ ಇಚ್ಛೆ ಮತ್ತು ಭಾವನೆಗಳಂತೆ ಕಾನೂನು ಜ್ಯಾರಿಗೊಳಿಸಲಾಗುತ್ತಿತ್ತು.

ಾಷ್ಟ್ರದ ಶಾಸನ ಮಂಡಳಿಗಳನ್ನು ಅವರಿಂದಲೇ ರಚಿಸಲಾಗುತ್ತಿತ್ತು. ಅವರ ಕಾನೂನು ರ್ಮಾಣದ ಧ್ಯೇಯವು ಸ್ವಾಭಾವಿಕವಾಗಿ ಅವರ ವಿಶಿಷ್ಟ ಹಕ್ಕುಗಳನ್ನು ಸಂರಕ್ಷಿಸುವುದೇ ಗಿತ್ತು. ಪ್ರಸ್ತುತ ಕಾನೂನುಗಳಿಗೆ ಅವರು ಪಾವಿತ್ರ್ಯತೆಯ ಸೋಗು ಹಾಕಿದರು.

ಜನಸಾಮಾನ್ಯರು, ಯಾವುದೇ ಹಕ್ಕು ಅಥವಾ ವಿಶಿಷ್ಟತೆಗಳಿಲ್ಲದ ನಿರ್ಲಕ್ಷಿತ ರ್ಗವಾಗಿದ್ದರು. ಅವರಿಗಿದ್ದುದು ಕೇವಲ ಕರ್ತವ್ಯಗಳು ಮಾತ್ರ. ಕೇವಲ ಕರ್ತವ್ಯಗಳು. ಲ್ಲ ಕರ್ತವ್ಯಗಳನ್ನೂ ಅವರ ಮೇಲೆ ಹೊರಿಸಲಾಯಿತು. ಅವರು ಪರಂಪರಾಗತವಾಗಿ ರ್ಷಗಟ್ಟಲೆ ಅಪಮಾನ, ಬಡತನ ಮತ್ತು ಗುಲಾಮಗಿರಿಯಲ್ಲಿ ನರಳಿದರು.

ತರುವಾಯ ಯೂರೋಪಿನಲ್ಲುಂಟಾದ ಭಾರೀ ಆರ್ಥಿಕ ಬದಲಾವಣೆಗಳಿಂದಾಗಿ, ್ಥಾನಮಾನ ಮತ್ತು ವಿಶಿಷ್ಟ ಹಕ್ಕುಗಳಿಗಾಗಿ ದೊರೆಗಳೊಡನೆ ಪೈಪೋಟಿ ನಡೆಸುವಂತಹ ಹೊಸ ರ್ಗವು ಹುಟ್ಟಿಕೊಂಡಿತು. ನೌಕರಶಾಹೀ ವರ್ಗ, ಪ್ರಸ್ತುತ ವರ್ಗದ ನಾಯಕತ್ವವೇ ಾಸ್ತವದಲ್ಲಿ ವರ್ಗಬೇಧವನ್ನು ಅಳಿಸಿ, ತಾತ್ವಿಕವಾಗಿ ಸ್ವಾತಂತ್ರ್ಯ, ಸಮಾನತೆ ಮತ್ತು ಹೋದರತೆಯನ್ನು ಘೋಷಿಸಿದ ಫ್ರೆಂಚ್ ಕ್ರಾಂತಿಗೆ ಹುಟ್ಟುಹಾಕಿತು.

ಆಧುನಿಕ ಯುಗದಲ್ಲಿ ಈ ಭಂಡವಾಳಶಾಹೀ ವರ್ಗವು ಹಿಂದಿನ ದೊರೆ ವರ್ಗಕ್ಕೆ ಲ್ಯವಾಗಿದೆ. ಆರ್ಥಿಕ ಬೆಳವಣಿಗೆಯ ಮೂಲಕ ಅನಿವಾರ್ಯವಾಗಿ ಸಂಭವಿಸಿದ ಕೆಲವು ದಲಾವಣೆಗಳ ಒಂದು ತೆರೆಮರೆಯಷ್ಟೇ ವ್ಯತ್ಯಾಸ. ಆದರೆ ಮೂಲಭೂತ ತತ್ವಗಳಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಈಗಲೂ ಅವರಿಗೆ ಸಂಪತ್ತು, ಅಧಿಕಾರ ಮತ್ತು ಡಳಿತ ಯಂತ್ರವನ್ನು ನಿಯಂತ್ರಿಸುವ ಸಾಮರ್ಥ್ಯವಿದೆ. ಪ್ರಜಾಪ್ರಭುತ್ವ, ಚುನಾವಣೆ ತ್ಯಾದಿಗಳಲ್ಲಿ ತೋರಿಕೆಗೆ ಸ್ವಾತಂತ್ರ್ಯದ ಛಾಯೆ ಗೋಚರಿಸುತ್ತಿದೆಯಾದರೂ ಪಾರ್ಲಿಮೆಂಟ್ ುತ್ತು ಸರಕಾರೀ ಕಚೇರಿಗಳಿಗೆ ತಲಪುವ ಸುಲಭ ಮಾರ್ಗವು ಧನಿಕ ವರ್ಗಕ್ಕೆ ತಿಳಿದಿದೆ. ಾಮ ಮಾರ್ಗಗಳಿಂದ, ವಿಭಿನ್ನ ಹೆಸರುಗಳಲ್ಲಿ ಯಾವ ನೀಚ ಕಾರ್ಯವನ್ನೂ ಸಾಧಿಸಲು ವರಿಗೆ ಸಾಧ್ಯವಿದೆ.

ಪ್ರಜಾಪ್ರಭುತ್ವದ ಹುಟ್ಟೂರೆಂದು ವರ್ಣಿಸಲಾಗುವ ಬ್ರಿಟನ್‌ನ ಪಾರ್ಲಿಮೆಂಟಿನಲ್ಲಿ ಂದಿಗೂ 'ದೊರೆಸಭೆ' (House of lords) ಅಸ್ತಿತ್ವದಲ್ಲಿದೆ. ಇಂದಿಗೂ ಅಲ್ಲಿ ್ಯೂಡಲ್' ಪದ್ಧತಿಯ ಪರ್ಯಾಯ ಕಾನೂನಿದೆ. ಮೃತ ವ್ಯಕ್ತಿಯ ಸಂಪತ್ತಿನಲ್ಲಿ ಹಿರಿಯ ುಗನಿಗೆ ವಿನಾ ಅನ್ಯರಿಗೆ ಹಕ್ಕಿಲ್ಲ. 'ಕುಲ ಸಂಪತ್ತ'ನ್ನು ಸಂರಕ್ಷಿಸಿ, ಅದು ಹರಿಹಂಚಾಗದಂತೆ ುಳಿಸಿ, ಮಧ್ಯ ಯುಗಗಳಲ್ಲಿ ಜಾಗೀರುದಾರೀ ದೊರೆವರ್ಗದಲ್ಲಿದ್ದ ಪರಂಪರಾಗತ ೇಲ್ಮೆಯನ್ನು ಕಾಪಾಡುವುದೇ ಅದರ ಹಿಂದಿನ ಧ್ಯೇಯವೆಂಬುದು ವ್ಯಕ್ತ.

ಇದುವೇ ವರ್ಗಪದ್ಧತಿ. ಇದು ಧನಿಕ ವರ್ಗದ ಹಸ್ತಗಳಲ್ಲಿ ಅಧಿಕಾರವನ್ನು ುಳಿಸಿಕೊಳ್ಳುವ ಪದ್ಧತಿಯಾಗಿದೆ. ಅವರು ನೇರವಾಗಿ ಅಥವಾ ಪರೋಕ್ಷವಾಗಿ ಶಾಸಕಾಂಗಗಳನ್ನು ್ವಾಧೀನಪಡಿಸಿ, ತಮ್ಮ ಹಿತರಕ್ಷಣೆಗೆ ಬೇಕಾದ ಕಾನೂನುಗಳನ್ನು ನಿರ್ಮಿಸುತ್ತಾರೆ.

ಬಹುಸಂಖ್ಯಾತ ಜನಸಾಮಾನ್ಯರನ್ನು ತಮ್ಮ ಅಧಿಕಾರಕ್ಕೊಳಪಡಿಸಿ ಆಡಳಿತವರ್ಗ ಹಿತಸಾಧನೆಗಾಗಿ ಅವರ ಹೆಚ್ಚಿನ ಹಕ್ಕುಗಳನ್ನು ಮೊಟಕುಗೊಳಿಸುತ್ತಾರೆ. ಈ ವಿಷಯವನ ನಾವು ಮನನ ಮಾಡಿದರೆ ಇಸ್ಲಾಮಿನಲ್ಲಿ ವರ್ಗ ಸಂಪ್ರದಾಯವಿರಲಿಲ್ಲವೆಂದು ನಮ ಸುಲಭದಲ್ಲಿ ವ್ಯಕ್ತವಾಗುತ್ತದೆ ಯೂರೋಪಿನ ದೊರೆವರ್ಗದಲ್ಲಿದ್ದಂತೆ ಪರಂಪರಾಗತವಾ ದೊರೆಯುವ ಯಾವ ವಿಶಿಷ್ಟ ಹಕ್ಕುಗಳೂ ಇಸ್ಲಾಮಿನಲ್ಲಿ ಇಲ್ಲ. 'ರಾಜ ಮನೆತನ'ವೆಂ ಹೆಸರಿನಲ್ಲಿ ಒಂದು ಕುಲೀನ ವರ್ಗವು ಸಿಂಹಾಸನದ ಪಾರಂಪರ್ಯ ಉತ್ತರಾಧಿಕಾರಿಯಾಗು ಸಂಪ್ರದಾಯಕ್ಕೆ ಇಸ್ಲಾಮಿನೊಂದಿಗೆ ಯಾವ ಸಂಬಂಧವೂ ಇಲ್ಲ. ಆ ಪದ್ಧತಿಯ ಮುಸ್ಲಿಮ್ ಸಮಾಜದಲ್ಲಿ ಎಲ್ಲಾದರೂ ಅಸ್ತಿತ್ವದಲ್ಲಿದ್ದರೆ, ಅದು ಮದ್ಯಪಾನ, ಜೂಜಾ ಮತ್ತು ಬಡ್ಡಿ ವ್ಯಾಪಾರ ನಡೆಸುವ ಮುಸ್ಲಿಮರಿರುವಂತೆ ಮಾತ್ರವಾಗಿದೆ. ಆದ ಇಸ್ಲಾಮ್ ಮದ್ಯ, ಜೂಜಾಟ ಮತ್ತು ಬಡ್ಡಿಯನ್ನು ಅನುಮತಿಸಿದೆಯೆಂದು ಯಾರು ಹೇಳಲಾರರಷ್ಟೇ.

ಹಾಗೆಯೇ ಸಂಪತ್ತು ವಿತರಣೆಯಾಗದೆ ಯಾವುದಾದರೊಂದು ವರ್ಗದ ಹಸ್ತಗಳಲ್ಲೇ ವಂಶ ಪಾರಂಪರ್ಯವಾಗಿ ಜಮೆಯಾಗಿರುವಂತಹ ಯಾವ ನಿಯಮವೂ ಇಸ್ಲಾಮಿನಲ್ಲಿಲ್ಲ ಇಸ್ಲಾಮ್ ಅದನ್ನು ವಿರೋಧಿಸುತ್ತದೆ. ಸ್ಪಷ್ಟವಾದ ಭಾಷೆಯಲ್ಲಿ ಅದ ಘೋಷಿಸಿತು:"ಸಂಪತ್ತು ನಿಮ್ಮಲ್ಲಿರುವ ಶ್ರೀಮಂತರ ನಡುವೆ ಮಾತ್ರ ಚಲಿಸು ಇರಬಾರದೆಂದು" (ಅಲ್‌ಹಶ್ರ್:7) ಅದರೊಂದಿಗೆ ಆರ್ಥಿಕ ವಿಕೇಂದ್ರೀಕರಣಕ್ಕೆ ಅಗತ್ಯವಿರು ಕಾನೂನುಗಳನ್ನೂ ನಿರ್ಮಿಸಿತು. ಅದರಂತೆ ಸಮಾಜದಲ್ಲಿ ಸಂಪತ್ತು ಹೊಸ ಹೊ ನಿಷ್ಪತ್ತಿಯಲ್ಲಿ ಸದಾ ಹಂಚಲ್ಪಡುತ್ತಿತ್ತು. ಇದು ಇಸ್ಲಾಮಿನ ವಾರೀಸು ಹಕ್ಕಿನ ಕೊಡುಗ ಅದರಂತೆ ಸಂಪತ್ತು ಪ್ರತೀಯೊಂದು ತಲೆಮಾರಿನಲ್ಲಿಯೂ ವಿಭಜನೆಗೊಳಗಾಗುತ್ತದ ಒಬ್ಬನೇ ಪುತ್ರನು ಸಂಪೂರ್ಣ ಸೊತ್ತಿನ ಹಕ್ಕುದಾರನಾಗುವ ಅಪೂರ್ವ ಸಂದರ್ಭ ಗಳಿರಬಹುದು. ಆದರೆ ಅದಕ್ಕಾಗಿ ಒಂದು ಸಾರ್ವತ್ರಿಕ ಕಾನೂನನ್ನು ಟೀಕಿಸುವುದ ಅರ್ಥಶೂನ್ಯವಾಗಿದೆ. ಅದಲ್ಲದೇ ಪ್ರಸ್ತುತ ವಿಶೇಷ ಪರಿಸ್ಥಿತಿಯನ್ನು ಇಸ್ಲಾಮ್ ಹಾಗೆಯೆ ಬಿಡುವುದಿಲ್ಲ. ಆಧುನಿಕ ಯುಗದ ಆದಾಯ ತೆರಿಗೆಯಂತೆ ವಾರೀಸು ಸೊತ್ತಿನಲ್ಲಿ ನಿಕ ಸಂಬಂಧಿಕರಲ್ಲದ ಬಡವರಿಗೂ ಒಂದು ಪಾಲು ನಿಗದಿಪಡಿಸಿದೆ: "ಸೊತ್ತನ್ನು ಪಾ ಹಾಕುವ ಸಂದರ್ಭದಲ್ಲಿ (ಹಕ್ಕುದಾರರಲ್ಲದ) ಸಂಬಧಿಕರೂ ಅನಾಥರೂ ನಿರ್ಗತಿಕರು ಬಂದರೆ ಅವರಿಗೂ ಏನಾದರೂ ಕೊಡಿರಿ. ಅವರೊಡನೆ ಸೌಜನ್ಯದ ಮಾತುಗಳನ್ನಾಡಿರಿ. (ಅನ್ನಿಸಾ:8

ಸಂಪತ್ತಿನ ಕೇಂದ್ರೀಕರಣವನ್ನು ಇಸ್ಲಾಮ್ ಈ ರೀತಿಯಿಂದ ತಡೆಯುತ್ತದ ಶ್ರೀಮಂತರನ್ನು ವರ್ಗಗಳಾಗಿ ಮಾಡುವ ಬದಲಾಗಿ ವ್ಯಕ್ತಿಗಳಾಗಿ ನಿಲ್ಲಿಸುತ್ತದೆ. ಅವರ

ಕೇಂದ್ರೀಕೃತರಾಗುವಾಗ ಪುನಃ ಅವರನ್ನು ಸಣ್ಣ ಸಣ್ಣ ವಿಭಾಗಗಳಾಗಿ ವಿಂಗಡಿಸುತ್ತದೆ. ಪುನಃ ಸಂಪತ್ತು ಹೊಸ ನಿಷ್ಪತ್ತಿಯಲ್ಲಿ ಹಂಚಿ ಹೋಗುತ್ತದೆ. ಇಸ್ಲಾಮೀ ಸಮಾಜದಲ್ಲಿ ಸಂಪತ್ತು ಸದಾಕಾಲ ನಿರಂತರವಾಗಿ ಚಲಿಸುತ್ತಿತ್ತೆಂಬುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ. ಇಂದಿನ ಶ್ರೀಮಂತ ನಾಳೆಯ ಬಡವ, ಇಂದಿನ ಬಡವ ನಾಳೆಯ ಶ್ರೀಮಂತನಾಗುವ ಸ್ಥಿತ್ಯಂತರವು ಅಲ್ಲಿ ಸರ್ವಸಾಮಾನ್ಯವಾಗಿತ್ತು. ತನ್ನ ಪ್ರಯತ್ನ ಮತ್ತು ಜೀವನ ಪರಿಸ್ಥಿತಿಗನುಸಾರ ಬರುವ ಶ್ರೀಮಂತಿಕೆ ಮತ್ತು ಬಡತನದ ಮುಂದೆ ಯಾರಿಗೂ ಕೃತಕ ತಡೆಗಳನ್ನು ಎದುರಿಸಬೇಕಾಗುವುದಿಲ್ಲ.

ಕಳೆದ ಅಧ್ಯಾಯದಲ್ಲಿ ಸೂಚಿಸಲಾಗಿರುವಂತೆ ಇಸ್ಲಾಮಿನಲ್ಲಿ ಕಾನೂನು ನಿರ್ಮಾಣ ಹಕ್ಕು ಯಾವುದಾದರೊಂದು ವರ್ಗದ ಗುತ್ತಿಗೆಯಾಗಿರಲಿಲ್ಲವೆಂಬುದನ್ನಷ್ಟೇ ನಾವು ಇಲ್ಲಿ ಮುಖ್ಯವಾಗಿ ಒತ್ತಿ ಹೇಳ ಬಯಸುತ್ತೇವೆ. ಇಸ್ಲಾಮೀ ರಾಷ್ಟ್ರದಲ್ಲಿ ತಮ್ಮಿಚ್ಛೆಯಂತೆ ಕಾನೂನು ನಿರ್ಮಿಸುವ ಹಕ್ಕು ಯಾರಿಗೂ ಇಲ್ಲ. ಅಲ್ಲಿ ಯಾರೊಡನೆಯೂ ಪಕ್ಷಪಾತ ತೋರದ, ಯಾರಿಗೂ ಅನ್ಯಾಯ ವೆಸಗದ ದೇವ ಶರೀಅತ್ ಆಳುತ್ತದೆ. ಆದ್ದರಿಂದಲೇ ವಿಶಿಷ್ಟ ವರ್ಗಗಳಿಗೆ ಇಸ್ಲಾಮಿನಲ್ಲಿ ಯಾವೊಂದು ಸ್ಥಾನವೂ ಇಲ್ಲ. ಯಾಕೆಂದರೆ ವರ್ಗಗಳ ಅಸ್ತಿತ್ವ ಮತ್ತು ಕಾನೂನು ನಿರ್ಮಾಣಾಧಿಕಾರಗಳಿಗೆ ಪರಸ್ಪರ ಅಬೇಧ್ಯ ಸಂಬಂಧವಿದೆ. ಈ ವಿಶಿಷ್ಟ ಹಕ್ಕುಗಳು ನಿಷೇಧಿಸಲ್ಪಟ್ಟರೆ, ತರುವಾಯ ಇತರರ ಹಕ್ಕುಗಳನ್ನು ದಮನಿಸಿ ಸ್ವಾರ್ಥ ಹಿತಾಸಕ್ತಿ ಸಂರಕ್ಷಣೆಗಾಗಿ ಕಾನೂನು ನಿರ್ಮಿಸಲು ಯಾರಿಂದಲೂ ಸಾಧ್ಯವಾಗ ಲಾರದಷ್ಟೆ. ಹೀಗಿರುತ್ತಾ ಇಸ್ಲಾಮೀ ರಾಷ್ಟ್ರದಲ್ಲಿ ವರ್ಗ ಸಂಪ್ರದಾಯವಿರುವುದಾದರೂ ಹೇಗೆ?

ಹಾಗಿದ್ದರೆ, ಈ ಅಧ್ಯಾಯದ ಆರಂಭದಲ್ಲಿ ನಾವು ನೋಡಿದ ಕುರ್‌ಆನ್ ವಾಕ್ಯಗಳ ತಾತ್ಪರ್ಯವೇನಾಗಿರಬಹುದು?

ಪ್ರಸ್ತುತ ಕುರ್‌ಆನ್ ವಾಕ್ಯಗಳು ಸಾರ್ವತ್ರಿಕವಾದ ಬಹಿರಂಗ ಸತ್ಯವೊಂದನ್ನಷ್ಟೇ ಎತ್ತಿ ಹೇಳಿದೆ. ಇಸ್ಲಾಮೀ ಪದ್ಧತಿ ಮಾತ್ರವಲ್ಲ ಇಸ್ಲಾಮೇತರ ಪದ್ಧತಿಗಳಲ್ಲಿಯೂ ಎದಲಾಯಿಸ ಲಾಗದಂತಹ ವಾಸ್ತವಿಕತೆ, ಸ್ಥಾನಮಾನ ಮತ್ತು ಸೌಲಭ್ಯಗಳಲ್ಲಿ ಮಾನವರ ಮಧ್ಯೆ ಅಂತರವಿದೆ. ಸೋವಿಯಟ್ ರಶ್ಯದ ಸ್ಥಿತಿಯನ್ನೇ ನೋಡೋಣ. ಅಲ್ಲಿ ದೊರೆಯುವ ವೇತನವು ಎಲ್ಲರಿಗೂ ಸಮಾನವಾಗಿದೆಯೇ? ಅಥವಾ ಜೀವನ ಸೌಲಭ್ಯಗಳಲ್ಲಿ ಕೆಲವರಿಗೆ ಕೆಲವರಿಗಿಂತ ಮೇಲ್ಮೆಯಿದೆಯೇ? ಅಲ್ಲಿ ಜನರೆಲ್ಲರೂ ನಾಯಕರಾಗಿದ್ದಾರೆಯೇ? ಅಥವಾ ಎಲ್ಲರೂ ಸಾಮಾನ್ಯರಾಗಿದ್ದಾರೆಯೇ? ಸೇನೆಯಲ್ಲಿ ಎಲ್ಲರೂ ಫೀಲ್ಡ್ ಮಾರ್ಶಲ್ ಗಳಾಗಿದ್ದಾರೆಯೇ? ಅಥವಾ ಸಾಮಾನ್ಯ ಸೈನಿಕರೇ? ಅವರ ಸ್ಥಾನಮಾನಗಳಲ್ಲಿ ವ್ಯತ್ಯಾಸ

ವಿಲ್ಲವೇ? ಇದು ಅನುಲ್ಲಂಘನೀಯ ನಿಯಮ. ಸಾರ್ವತ್ರಿಕ ಸತ್ಯ. ಪ್ರಸ್ತುತ ಕುರ್‌ಆನ್ ವಾಕ್ಯಗಳು ಈ ಭಿನ್ನತೆಯ ನಿರ್ದಿಷ್ಟ ಕಾರಣವನ್ನು ವಿವರಿಸುವುದಿಲ್ಲ. ನಿರ್ದಿಷ್ಟ ಶರ್ತ ಗಳನ್ನು ಜನರ ಮೇಲೆ ಹೇರುವುದಿಲ್ಲ. ಈ ಭಿನ್ನತೆಗೆ ಕಮ್ಯೂನಿಝಮ್, ಭಂಡವಾಳಶಾಹಿತ್ವ ಅಥವಾ ಇಸ್ಲಾಮ್ ಪೂರಕವೆಂದೂ ಅದು ಹೇಳುವುದಿಲ್ಲ. ಐಹಿಕ ಮಾನದಂತೆ ಅದು ಸದಾಕಾಲವೂ ನ್ಯಾಯೋಚಿತ ಅಥವಾ ಅಕ್ರಮವಾಗಿರುವುದೆಂದೂ ಹೇಳುವುದಿಲ್ಲ.......... ಅದು ಸಾರ್ವತ್ರಿಕವಾಗಿ ಗೋಚರಿಸುವ ವಾಸ್ತವಿಕತೆಯೆಂದಷ್ಟೇ ಆ ವಾಕ್ಯಗಳು ಹೇಳುತ್ತವೆ ಲೋಕದ ಪ್ರತಿಯೊಂದು ಕಾರ್ಯವೂ ದೇವೇಚ್ಛೆಯಲ್ಲಿ ಅಡಕವಾಗಿವೆ ಅಥವಾ ಇಸ್ಲಾಮೀ ಲೋಕದಲ್ಲಿ ಮಾತ್ರ ಪರಿಶುದ್ಧನಾದ ಅಲ್ಲಾಹನ ಪ್ರಭಾವವು ನಡೆಯುವುದೆಂದು ಕಮ್ಯೂನಿಸ್ಟರು ಭಾವಿಸುತ್ತಾರೆಯೇ? ಅಲ್ಲಾಹನ ಪ್ರಭಾವವು ಕೇವಲ ಈಜಿಪ್ಟ್ ಮತ್ತು ಪೆಲೆಸ್ತೀನ್‌ಗಳಲ್ಲಿ ನಡೆಯುವುದು. ಉಳಿದುದೆಲ್ಲವೂ ಅಲ್ಲಾಹನ ಅಧಿಕಾರ ಸೀಮೆಯಿಂದ ಹೊರಗಿದೆಯೆಂದು ಇಸ್ರೇಲರು ಭಾವಿಸಿದ್ದರಷ್ಟೇ!

ವರ್ಗಪದ್ಧತಿಯಲ್ಲಿದ್ದ ಕೇವಲ ಗುಲಾಮ ಸಂಪ್ರದಾಯವೊಂದು ಇಸ್ಲಾಮಿನಲ್ಲಿದ್ದಿತು. ಕುರ್‌ಆನ್ ಅದನ್ನು ಬಹಿರಂಗವಾಗಿ ಹೇಳಿದೆ. ಆ ಕುರಿತು ನಾವು ಸಾಕಷ್ಟು ಹೇಳಿದ್ದೇವೆ. ಅದು ಪರಿಸ್ಥಿತಿಯ ಒತ್ತಡದಿಂದ ಅನಿವಾರ್ಯವಾದ ತಾತ್ಕಾಲಿಕ ಸಂಪ್ರದಾಯವೆಂದೂ ಅದರಿಂದ ವಿಮೋಚನೆ ಪಡೆಯಲು ಇಸ್ಲಾಮಿಗೆ ಒಂಟಿಯಾಗಿ ಸಾಧ್ಯವಿರಲಿಲ್ಲವೆಂದೂ ನಾವು ಸ್ಪಷ್ಟಗೊಳಿಸಿದೆವು. ಅದು ಇಸ್ಲಾಮೀ ಸಮಾಜದ ಮೂಲ ಸಿದ್ಧಾಂತವಲ್ಲ, ಬದಲಾಗಿ ತಾತ್ಕಾಲಿಕವಾದ ಅನಿವಾರ್ಯ ಸ್ಥಿತಿಯಾಗಿದ್ದಿತು.

ಹಾಗಿದ್ದರೂ, ಇಸ್ಲಾಮ್ ಗುಲಾಮರೊಡನೆ ಹೇಗೆ ವರ್ತಿಸಿತು? ಗುಲಾಮಗಿರಿ ಎಂಬ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವುದನ್ನು ನಾವಿಲ್ಲಿ ಪುನರಾವರ್ತಿಸ ಬಯಸುವುದಿಲ್ಲ. ಕೇವಲ ಒಂದು ಘಟನೆಯನ್ನು ಇಲ್ಲಿ ಜ್ಞಾಪಕಕ್ಕೆ ತರುತ್ತೇನೆ. ಉಮರ್‌ರವರು(ರ) 'ಇಸ್ಲಾಮಿನ ವರ್ಗಗಳ' ಬುನಾದಿಯನ್ನು ನಿರ್ಧರಿಸಿದ ಸುಪ್ರಸಿದ್ಧ ಘಟನೆ!

ಅದೊಂದು ದೊರೆಯ ಕಥೆ. ಅವರು ಹಜ್ಜ್ ಯಾತ್ರೆಗಾಗಿ ಹೊರಟಿದ್ದರು. ಅಹಂಕಾರ ಮದ ಮತ್ತು ದರ್ಪದಿಂದ ಅವರು ಹೊರಟಿದ್ದರು. ಅವರ ಇಸ್ಲಾಮ್ ಸ್ವೀಕಾರವು ಕೇವಲ ನಾಮಮಾತ್ರವಾಗಿತ್ತು. ಅವರ ಆತ್ಮ ಸಂಸ್ಕರಣೆಯಾಗಿರಲಿಲ್ಲ. ಕಲ್ಮಷ ಹೃದಯದಿಂದ ದೇವಭಕ್ತರನ್ನು ತಾತ್ಸಾರದಿಂದ ತುಳಿಯುತ್ತಾ, ಗರ್ವದಿಂದ ಅವರು ಮುಂದೆ ಸಾಗಿದರು. ಅವರ ಸ್ಥಿತಿಯು ಕುರ್‌ಆನ್ ವರ್ಣಿಸಿದ ಹಾಗೆಯೇ ಇತ್ತು "(ಪ್ರವಾದಿಯೇ) ಅವರಿಗೆ ಹೇಳಿರಿ, ನೀವು ವಿಶ್ವಾಸವಿರಿಸಿಲ್ಲ. ನಾವು ಮುಸ್ಲಿಮರಾದೆವು (ತೋರಿಕೆಗೆ) ಎಂದು ಹೇಳಿಕೊಳ್ಳಿರಿ. ವಿಶ್ವಾಸವು ನಿಮ್ಮ ಹೃದಯಗಳಲ್ಲಿ ಇನ್ನೂ ಪ್ರವೇಶಿಸಿಲ್ಲ." ಹಜ್ಜ್ ವೇಳೆಯಲ್ಲಿ ಕಅಬಾ ಪ್ರದಕ್ಷಿಣೆ ಮಾಡುತ್ತಿದ್ದ ಓರ್ವ ಗುಲಾಮನು

ಗರ್ವಿಷ್ಠನಾದ ಆ ದೊರೆಯ ಬಟ್ಟೆಯ ತುದಿಯನ್ನು ಪ್ರಮಾದವಶಾತ್ ತುಳಿದುಬಿಟ್ಟನು. ಗುಲಾಮನ ಈ ದರ್ಪಕ್ಕೆ ಮುಖಕ್ಕೆ ಹೊಡೆಯುವುದಕ್ಕಿಂತ ಕಡಿಮೆಯ ಶಿಕ್ಷೆ ಆ ಕುಲೀನ ನೀಡಿದರಾದೀತೇ? ದೊರೆಯ ಈ ಅತಿರೇಕದ ಬಗ್ಗೆ ಗುಲಾಮನು ಉಮರ್‌ರಲ್ಲಿ(ರ) ದೂರಿಕೊಂಡನು: ಆಗ ಉಮರ್‌ರು(ರ) "ಚಿಂತಿಲ್ಲ. ನೀನೋರ್ವ ಗುಲಾಮ. ಆತ ದೊರೆ. ನೀವೀರ್ವರೂ ಎರಡು ವರ್ಗದವರು. ನಿನಗಿಲ್ಲದ ಹಕ್ಕುಗಳು ಆತನಿಗಿದೆ......" ಎಂದು ಹೇಳಿದರೇ? ಅಥವಾ ದೊರೆವರ್ಗದ ವಸ್ತ್ರವನ್ನು ಗುಲಾಮರು ಮೆಟ್ಟಬಾರದೆಂಬ ಕಾನೂನು ನಿರ್ಮಿಸಿದರೇ? ಯಾ ಕುಲೀನರು ಗುಲಾಮತನವನ್ನು ಸ್ವೀಕರಿಸಬೇಕೆಂಬ ಕಾನೂನು ನಿರ್ಮಿಸಿದರೇ?

ಇಲ್ಲ, ಅವರು ಹಾಗೆ ಮಾಡಲಿಲ್ಲ. ಅದು ಇತಿಹಾಸದಲ್ಲಿ ಸುಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವ ಘಟನೆಯಾಗಿದೆ. ಉಮರ್‌ರು (ರ) ಪ್ರತಿಕ್ರಮ ಕೈಗೊಂಡೇ ಸಿದ್ಧವೆಂದು ಪಣ ತೊಟ್ಟರು. ಕಾನೂನಿನ ದೃಷ್ಟಿಯಲ್ಲಿ ಮಾನವರೊಳಗೆ ಯಾವ ಪಕ್ಷಪಾತವನ್ನೂ ತೋರಿಸದ ಇಸ್ಲಾಮಿ ಶರೀಅತ್‌ನೆಡೆಗೆ ಆತನನ್ನು ಮರಳಿಸಬೇಕಾದರೆ, ಆ ದೊರೆಯ ಮುಖಕ್ಕೆ ಈ ಗುಲಾಮನು ಹೊಡೆಯಲೇಬೇಕೆಂದು ಅವರು ನಿರ್ಧರಿಸಿದರು. ಜೀವನದ ಸವಲತ್ತುಗಳಲ್ಲಿ ಅಥವಾ ಸಾಮಾಜಿಕ ಸ್ಥಾನಮಾನಗಳಲ್ಲಿ ಅವರ ಮಧ್ಯೆ ಏನಾದರೂ ಅಂತರವಿದ್ದರೆ ಅದು ಬೇರೆ ವಿಷಯ. ವಿಷಯ ತಿಳಿದ ದೊರೆಯ ದುರಭಿಮಾನ ಹೊತ್ತಿ ಉರಿಯಿತು. ಆತ ಓರ್ವ ಧಿಕ್ಕಾರಿಯಾಗಿ ಮಾರ್ಪಟ್ಟ. ತನ್ನನ್ನೂ ಇತರ ಮಾನವರನ್ನೂ ಸಮಾನರಾಗಿಸುವ ಹರಿತವಾದ ಕಾನೂನಿನ ಅಲಗಿನಿಂದ ತಪ್ಪಿಸಿಕೊಳ್ಳಲು ಆತ ಪ್ರಯತ್ನಿಸಿದ. ಗತ್ಯಂತರವಿಲ್ಲವೆಂದು ಮನಗಂಡ ಆ ದೊರೆಯು ಉಮರ್‌ರ (ರ) ಕಣ್ಣಿಗೆ ಬೀಳದೆ ಅಲ್ಲಿಂದ ಪರಾರಿಯಾದ. ಕೊನೆಗೆ ಆತ ಇಸ್ಲಾಮಿನಿಂದಲೇ ಹೊರ ಹೋದನು.

ಇಸ್ಲಾಮೆಂದರೆ ಇದುವೇ. ವರ್ಗಗಳು ಅಥವಾ ವಿಶಿಷ್ಟ ವರ್ಗಹಕ್ಕುಗಳಿಲ್ಲದ ಇಸ್ಲಾಮ್!

ಜನರಲ್ಲಿರುವ ಆರ್ಥಿಕ ಅಂತರವನ್ನು ವರ್ಗಪದ್ಧತಿಯೊಂದಿಗೆ ಸೇರಿಸುವಂತಿಲ್ಲ. ಶ್ರೀಮಂತ ವರ್ಗಕ್ಕೆ ಸಮಾಜದ ಅನ್ಯ ಜನರಿಗಿಲ್ಲದ, ಕಾನೂನು ನಿರ್ಮಾಣ ಮತ್ತು ಇನ್ನಿತರ ವಿಶಿಷ್ಟ ಹಕ್ಕುಗಳನ್ನು ನೀಡದಿರುವ ತನಕ ಅದನ್ನು ವರ್ಗಪದ್ಧತಿಯೊಂದಿಗೆ ಬೆರೆಸಬಾರದು. ಕಾನೂನು ಕೇವಲ ತಾತ್ವಿಕವಾಗಿಯಲ್ಲ-ವಾಸ್ತವಿಕವಾಗಿ ಎಲ್ಲರಿಗೂ ಸಮಾನ ಅನ್ವಯಗೊಳಿಸುತ್ತಿರುವ ತನಕ ಅಲ್ಲಿ ವರ್ಗ ಸಮಸ್ಯೆಯೇ ಇರುವುದಿಲ್ಲ.

ಭೂಮಾಲಿಕರಿಗೆ ಕೃಷಿ ಒಡೆತನ ಹಕ್ಕಿನ ಹೆಸರಿನಲ್ಲಿ ಅನ್ಯರನ್ನು ಶೋಷಿಸುವ ಹಾಗೂ ಗುಲಾಮರಾಗಿಸುವ ಪರಿಸ್ಥಿತಿಯು ಇಸ್ಲಾಮಿ ರಾಷ್ಟ್ರದಲ್ಲಿ ಉದ್ಭವಿಸುವುದಿಲ್ಲ. ನೈಜ

ಇಸ್ಲಾಮಿ ಸಮಾಜದಲ್ಲಿ ಮೂಲ ಭಂಡವಾಳಿಗರ ಸ್ಥಿತಿಯೂ ಹಾಗೆಯೇ ಇರುವುದು. ಮಾಲಿಕರನ್ನು ಪ್ರಬಲಗೊಳಿಸಲಿಕ್ಕಾಗಿ ಆಡಳಿತಗಾರನು ತನ್ನ ಅಧಿಕಾರವನ್ನು ಸರ್ವಥಾ ದುರುಪಯೋಗ ಪಡಿಸಲಾರನು. ಯಾಕೆಂದರೆ ಸಮಾಜವು ಆತನನ್ನು ಆರಿಸುತ್ತದೆ. ಸರ್ವಶಕ್ತನಾದ ಅಲ್ಲಾಹನ ಕಾನೂನು ಪದ್ಧತಿಯನ್ನು ಜ್ಯಾರಿಗೊಳಿಸುವುದೇ ಆತನ ಕರ್ತವ್ಯ.

ಅದರೊಂದಿಗೆ ನಾವು ಇನ್ನೊಂದು ವಿಷಯವನ್ನು ಜ್ಞಾಪಿಸಿಕೊಳ್ಳಬೇಕಾಗಿದೆ. ನಾವು ಈ ಹಿಂದೆ ಹೇಳಿದಂತೆ ಸಂಪೂರ್ಣ ಆರ್ಥಿಕ ಸಮಾನತೆಯನ್ನು ಸಾಧಿಸಿದ ಯಾವೊಂದು ಸಮಾಜವೂ ಲೋಕದ ಯಾವೆಡೆಯೂ ಇರಲಾರದು. ಆಳುವ ಮತ್ತು ಆಜ್ಞಾಪಿಸುವ ವರ್ಗವೊಂದನ್ನುಳಿದು ಇತರೆಲ್ಲ ವರ್ಗಗಳನ್ನು ಅಳಿಸಿ ಬಿಡುವೆವೆಂದು ವಾದಿಸುವ-ಆ ವಾದವು ಸತ್ಯವಾಗಿರಲಿ ಯಾ ಮಿಥ್ಯವಾಗಿರಲಿ- ಕಮ್ಯೂನಿಸ್ಟ್ ಸಮಾಜದಲ್ಲಿಯೂ ಸಾಧ್ಯವಿಲ್ಲ.

# ಇಸ್ಲಾಮ್ ಮತ್ತು ದಾನಧರ್ಮಗಳು

**ಮಾ**ನಸಿಕವಾಗಿಯೂ ವೈಚಾರಿಕವಾಗಿಯೂ ಸಾಮ್ರಾಜ್ಯತ್ವದ ಗುಲಾಮರಾಗಿರುವವರ ುತ್ತು ಕಮ್ಯೂನಿಸ್ಟರ ತೀವ್ರ ಟೀಕೆಗೆ ಗುರಿಯಾಗಿರುವ ವಿಷಯಗಳಲ್ಲಿ ಇಸ್ಲಾಮಿನ ಾನಧರ್ಮ ನೀತಿಯೂ ಒಂದಾಗಿದೆ. ಇಸ್ಲಾಮ್ ಎತ್ತಿಹಿಡಿಯುವ ಉಜ್ವಲ ಸಾಮಾಜಿಕ ್ಯಾಯದ ಮಾದರಿಯೆಂದರೆ ಬಡವರು, ಔದಾರ್ಯವಂತ ಧನಿಕ ವರ್ಗದ ಚಿಲ್ಲರೆ ಾಣ್ಯಗಳನ್ನು ಅವಲಂಬಿಸಿ ಬಾಳುವುದೇ ಎಂದು ಅವರು ಪ್ರಶ್ನಿಸುತ್ತಾರೆ. ಇದು ್ಯಾಯವಲ್ಲ, ಬದಲಾಗಿ ಮಾನವೀಯ ಗೌರವದ ಅವಹೇಳನವಾಗಿದ್ದು ಬಡವರ ಂದನೆಯೆಂದೂ ಅವರು ವಾದಿಸುತ್ತಾರೆ.

'ಝಕಾತ್' ಎಂದರೆ ಶ್ರೀಮಂತ ವರ್ಗವು ಬಡವರಿಗೆ ಔದಾರ್ಯದಿಂದ ನೀಡುವ ಾನವೆಂಬ ತಪ್ಪು ತಿಳುವಳಿಕೆಯೇ ಈ ವಾದದ ಮೂಲ. ಅವರಿಗೆ ಕಿಂಚಿತ್ತಾದರೂ ಿವೇಕವಿರುತ್ತಿದ್ದರೆ, ಔದಾರ್ಯವು ಯಾರ ಕಾನೂನಿನ ನಿರ್ಮಾಣವೂ ಅಲ್ಲವೆಂಬುದನ್ನು ್ವಯಂ ತಿಳಿದುಕೊಳ್ಳಬಹುದಾಗಿತ್ತು. ಝಕಾತಾದರೋ, ಕಾನೂನಿನ ಮೂಲಕ ್ಯಾರಿಗೊಳಿಸುವ ಕಡ್ಡಾಯ ಕರ್ತವ್ಯವಾಗಿದೆ. ಅದನ್ನು ನೀಡಲು ನಿರಾಕರಿಸುವವರ ವಿರುದ್ಧ ಾಷ್ಟ್ರವು ಯುದ್ಧ ಸಾರುವುದು. ಅವರು ಅದರಲ್ಲಿಯೇ ಅಚಲರಾಗಿದ್ದರೆ ರಾಷ್ಟ್ರದ್ರೋಹ ಮತ್ತು ಧರ್ಮಭ್ರಷ್ಟತೆಯ ಆರೋಪ ಹೊರಿಸಿ ಅವರನ್ನು ಮರಣದಂಡನೆಗೆ ಗುರಿಪಡಿಸಬಹುದು. ಅದು ಕೇವಲ ಮಾನಸಿಕ ಪ್ರೇರಣೆಯನ್ನೇ ಅವಲಂಬಿಸಿದ ಔದಾರ್ಯವೆಂದಾದರೆ, ಹೀಗೆಲ್ಲಾ ಮಾಡುವ ಅಗತ್ಯವಿದೆಯೇ?

ಝಕಾತನ್ನು ಅದರ ಆರ್ಥಿಕ ದೃಷ್ಟಿಯಿಂದ ನೋಡಿದರೆ, ಅದು ಅರ್ಥಶಾಸ್ತ್ರದ ಇತಿಹಾಸದಲ್ಲಿ ಲೋಕದಲ್ಲಿ ಪ್ರಥಮವಾಗಿ ಜ್ಯಾರಿಗೊಂಡ ಸುವ್ಯವಸ್ಥಿತ ತೆರಿಗೆಯಾಗಿತ್ತು. ಂದಿನ ಕಾಲದಲ್ಲಿ ಆಡಳಿತಗಾರರು ತಮ್ಮಿಚ್ಛೆಯಂತೆ, ತಮ್ಮ ಸ್ವಾರ್ಥ ಹಿತಾಸಕ್ತಿಗಳಿಗೆ ಾಕಾಗುವಷ್ಟು ಮೊತ್ತವನ್ನು ತೆರಿಗೆಯಾಗಿ ಹೊರಿಸುತ್ತಿದ್ದರು. ಆ ಭಾರೀ ಹೊರೆಯನ್ನು ಶ್ರೀಮಂತರಿಗಿಂತ ಹೆಚ್ಚಾಗಿ ಬಡವರೇ ಹೊರಬೇಕಾಗಿತ್ತು. ಹಲವೊಮ್ಮೆ ಕೇವಲ ಬಡವರೇ ವಹಿಸಬೇಕಾಗಿತ್ತು!

ಈ ಪರಿಸ್ಥಿತಿಯಲ್ಲಿ ಇಸ್ಲಾಮ್ ಆಗಮಿಸಿ ತೆರಿಗೆ ವ್ಯವಸ್ಥೆಯನ್ನು ಸರಿಪಡಿಸಿ, ಅವುಗಳಿಗೆ ನಿರ್ದಿಷ್ಟ ಪ್ರಮಾಣವನ್ನು ನಿಶ್ಚಯಿಸಿತು. ಬಡವರನ್ನು ತೆರಿಗೆ ಭಾರದಿಂದ ಸಂಪೂರ್ಣ ಮುಕ್ತಗೊಳಿಸಿ ಅದನ್ನು ಶ್ರೀಮಂತರಿಗೆ ಮತ್ತು ಮಧ್ಯಮ ವರ್ಗದವರಿಗೆ ಸೀಮಿತಗೊಳಿಸಿತು. ಝಕಾತ್‌ನ ಬಗ್ಗೆ ಈ ವಾಸ್ತವಿಕಾಂಶವನ್ನು ನಾವು ಪ್ರಥಮತಃ

ತಿಳಿದಿರಬೇಕು. ಅದು ಯಾವ ಅಭಿಪ್ರಾಯ ಭಿನ್ನತೆಗೂ ಅವಕಾಶವಿಲ್ಲದಷ್ಟು ಸುಸ್ಪಷ್ಟವಾಗಿ

ಈ ಬಗ್ಗೆ ನಾವು ತಿಳಿದಿರಬೇಕಾದ ಎರಡನೇಯ ಸಂಗತಿಯೆಂದರೆ, ಝಕಾತ ಶ್ರೀಮಂತರು ವೈಯಕ್ತಿಕವಾಗಿ ನೀಡುವ ಬದಲಾಗಿ, ಸರಕಾರವೇ ಅದನ್ನು ವಿತರ ಮಾಡುತ್ತದೆ. ರಾಷ್ಟ್ರವೇ ಸಂಗ್ರಹಿಸುತ್ತದೆ. ರಾಷ್ಟ್ರವೇ ವಿತರಣೆ ಮಾಡುತ್ತ 'ಬೈತುಲ್‌ಮಾಲ್' ಎಂದರೆ ಸಾರ್ವಜನಿಕ ಸಂಪತ್ತನ್ನು ಸಂಗ್ರಹಿಸಿ ರಾಷ್ಟ್ರದ ವಿ ವಿಭಾಗಗಳಿಗೆ ವಿತರಣೆ ಮಾಡುವ ವಿತ್ತಖಾತೆಯೇ ಆಗಿದೆ. ದುಡಿಯುವ ಶಕ್ತಿಯಿಲ್ಲ ಹಾಗೂ ಸಭ್ಯ ಜೀವನ ಮಾರ್ಗದಿಂದ ವಂಚಿತರಾದ ಜನರಿಗೆ ಸರಕಾರವು ನೀಡು ಭದ್ರತೆಯು ಔದಾರ್ಯ ಅಥವಾ ದಾನವಲ್ಲ. ಬಡವರ ಗೌರವಕ್ಕೆ ಧಕ್ಕೆಯೊದಗಿಸುವಂತ ಯಾವ ಅಂಶವೂ ಅದರಲ್ಲಿಲ್ಲ. ಸರಕಾರದಿಂದ ಸಂಬಳ ಪಡೆಯುವ ನೌಕರನಾಗಲಿ ಇನ್ಶೂರೆನ್ಸ್ ಸಂಸ್ಥೆಗಳಿಂದ ಸೌಲಭ್ಯಗಳನ್ನು ಸ್ವೀಕರಿಸುವ ಜನರಾಗಲೀ, ತಾವು ಶ್ರೀಮಂ ಔದಾರ್ಯದಿಂದ ಜೀವಿಸುತ್ತಿದ್ದೇವೆಂದು ಭಾವಿಸುತ್ತಾರೆಯೇ? ಮಕ್ಕಳಿಗೂ ಅಶಕ್ತರಿ ವೃದ್ಧರಿಗೂ ಮಾನವೀಯ ದೃಷ್ಟಿಯಿಂದ ಸಂರಕ್ಷಣೆ ನೀಡುವ ಹೊಣೆಹೊತ್ತ ಸರಕಾರ ಅವರಿಗೆ ಜೀವನ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ ಅವರ ಗೌರವಕ್ಕೆ ಕಳಂಕವಾದೀತೆ

ಸಾಮಾಜಿಕ ಭದ್ರತಾ ಹೊಣೆಗಾರಿಕೆಯು, ಸುದೀರ್ಘಕಾಲ ಮಾನವಕುಲವು ಸಾಮಾ ಅನ್ಯಾಯಗಳಿಂದ ತೊಳಲಾಡಿ ಹತ್ತುಹಲವು ಸಂದಿಗ್ಧ ಪರೀಕ್ಷೆಗಳ ಬಳಿಕ ಅಂಗೀಕರಿ ಆಧುನಿಕ ನೀತಿಯಾಗಿದೆ. ಯೂರೋಪು ಗಾಢಾಂಧಕಾರದಲ್ಲಿ ಮುಳುಗಿದ್ದ ಕಾಲದಲ್ಲಿಯ ಇಸ್ಲಾಮ್ ಪ್ರಸ್ತುತ ಪದ್ಧತಿಯನ್ನು ಜ್ಯಾರಿಗೊಳಿಸಿರುವುದು ಅದರ ಅತಿದೊಡ್ಡ ಹೆಗ್ಗಳಿಕೆಯಾಗಿ ವಸ್ತುತಃ ಯಾವುದಾದರೊಂದು ಪದ್ಧತಿಯು ಪೂರ್ವ ಅಥವಾ ಪಶ್ಚಿಮದಿಂದ ಬಂ ಅದು ಸುಂದರ ಮತ್ತು ಮೋಹಕ. ಆದರೆ ಅದೇ ವಿಷಯವನ್ನು ಇಸ್ಲಾಮ್ ಪ್ರತಿಪಾದಿಸಿ ಅದು ಪ್ರಾಚೀನ ಮತ್ತು ಪ್ರತಿಗಾಮಿಯಾಗುವುದೇ?

ಈ ಬಗ್ಗೆ ನಾವು ತಿಳಿದಿರಬೇಕಾದ ಮೂರನೇ ವಾಸ್ತವಿಕಾಂಶವು ಇಸ್ಲಾಮಿನ ಆರಂ ಹಂತದಲ್ಲಿ ಝಕಾತನ್ನು ಹಣ ಅಥವಾ ಸರಕುಗಳ ರೂಪದಲ್ಲಿ ಸಂಗ್ರಹಿಸು ಪರಿಸ್ಥಿತಿಯಿದ್ದರೂ, ಇಸ್ಲಾಮಿನಲ್ಲಿ ಝಕಾತ್ ವಿತರಣೆಗೆ ಅದೊಂದೇ ಮಾರ್ಗವಿರುವುದೆಂ ಅದು ಪ್ರತಿಪಾದಿಸುವುದಿಲ್ಲ. ಮಕ್ಕಳಿಗೆ ಉಚಿತ ಶಿಕ್ಷಣ ನೀಡುವ ವಿದ್ಯಾಲಯ ರೋಗಿಗಳಿಗೆ ಧರ್ಮಾರ್ಥ ಚಿಕಿತ್ಸೆ ನೀಡುವ ವೈದ್ಯಾಲಯ, ಜನರಿಗೆ ಜೀ ಸೌಲಭ್ಯಗಳನ್ನು ಒದಗಿಸುವ ಸೇವಾಸಂಸ್ಥೆ ಮುಂತಾದುವುಗಳ ಮೂಲಕ ಝಕಾತ ವಿತರಣೆ ಮಾಡಬಹುದು. ಫ್ಯಾಕ್ಟರಿ ಅಥವಾ ಜನರಿಗೆ ಉದ್ಯೋಗ ಒದಗಿಸುವ ಇ ಸಂಸ್ಥೆಗಳನ್ನು ಅದರಿಂದ ಸ್ಥಾಪಿಸಬಹುದು. ಮಾತ್ರವಲ್ಲ, ಸಮಾಜ ಸೇವೆಗೆ ಸೂಕ್ತವಾ ಎಲ್ಲ ನವೀನ ಮಾರ್ಗಗಳನ್ನು ಅದಕ್ಕಾಗಿ ಬಳಸಬಹುದು. ಜೀವನೋಪಾಯ ತಡೆಯಲ್ಪ ವೃದ್ಧರು, ರೋಗಿಗಳು ಮತ್ತು ಮಕ್ಕಳಿಗಷ್ಟೇ ಹಣದ ರೂಪದಲ್ಲಿ ನೀಡಬೇಕಾಗುತ್ತ

ತರರಿಗೆ ಉದ್ಯೋಗ ಅಥವಾ ಸೇವೆಯ ರೂಪದಲ್ಲಿ ನೀಡಬಹುದಾಗಿದೆ.

ನಾಲ್ಕನೇಯದಾಗಿ, ಝಕಾತ್‌ನಿಂದ ಜೀವನ ಸಾಗಿಸುವ ಕೆಲವಾರು ಬಡವರು ರಲೇಬೇಕೆಂಬುದು ಇಸ್ಲಾಮಿ ಸಮಾಜದ ಮೂಲಭೂತ ತತ್ವವಲ್ಲ. ಉಮರ್ ಬಿನ್ ಬ್ದುಲ್ ಅಝೀಝ್‌ರ(ರ) ಕಾಲದಲ್ಲಿ ಇಸ್ಲಾಮಿ ಸಮಾಜವು ಝಕಾತ್ ಸ್ವೀಕರಿಸುವ ನರಿಲ್ಲದಷ್ಟು ಸಮೃದ್ಧವಾಗಿತ್ತು. ಈ ಬಗ್ಗೆ ಯಹ್ಯಾಬಿನ್ ಸಈದ್ ಹೇಳಿರುವುದನ್ನು ೋಡಿರಿ: "ಆಫ್ರಿಕಾದಲ್ಲಿ ಝಕಾತ್ ಸಂಗ್ರಹಣೆಗಾಗಿ ಉಮರ್‌ರು (ರ) ನನ್ನನ್ನು ನೇಮಿಸಿದರು. ಾನು ಅದನ್ನು ಸಂಗ್ರಹಿಸಿದ ಬಳಿಕ, ವಿತರಣೆ ಮಾಡಲು ನೋಡುವಾಗ ಅದನ್ನು ್ವೀಕರಿಸುವಂತಹ ಯಾವೊಬ್ಬ ಬಡವನೂ ಇರಲಿಲ್ಲ. ಉಮರ್ ಬಿನ್ ಅಬ್ದುಲ್ ಅಝೀಝ್‌ರು(ರ) ಜನರನ್ನು ಅಷ್ಟೊಂದು ಶ್ರೀಮಂತಗೊಳಿಸಿದ್ದರು."

ಹಸಿವು ಮತ್ತು ಬಡತನವು ಪ್ರತಿಯೊಂದು ಸಮಾಜವೂ ಎದುರಿಸುವ ಸಮಸ್ಯೆಗಳಾಗಿವೆ. ಅವುಗಳ ನಿವಾರಣೆಗೆ ಸೂಕ್ತ ಕಾನೂನು ನಿರ್ಮಾಣ ಅಗತ್ಯವಾಗಿದೆ. ಆರ್ಥಿಕ ಸಮತೋಲನವಿಲ್ಲದ ನಾಂಗಗಳು ಮುಸ್ಲಿಮ್ ಸಮಾಜದೊಂದಿಗೆ ನಿರಂತರ ಸೇರಿಕೊಳ್ಳುತ್ತಿದ್ದುವು. ಆದ್ದರಿಂದ ್ರಸ್ತುತ ಸಮಾಜಗಳನ್ನು ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದ ಮಾದರೀ ೋಗ್ಯ ಸ್ಥಿತಿಗೆ ಸಾವಧಾನವಾಗಿ ತಲಪಿಸಲು ಪ್ರಸ್ತುತ ಕಾನೂನು ನಿರ್ಮಾಣ ಅನಿವಾರ್ಯವಾಗಿತ್ತು.

ಇದುವೇ ಝಕಾತ್ ಪದ್ದತಿಯ ಹಿನ್ನೆಲೆ. ಇನ್ನು ಶ್ರೀಮಂತರು ಸ್ವಯಂ ್ರೇರಣೆಯಿಂದ ನೀಡುವ ನೈಜ 'ದಾನಧರ್ಮಗಳ' ಬಗ್ಗೆ ಹೇಳುವುದಿದ್ದರೆ, ಇಸ್ಲಾಮ್ ದನ್ನು ಅಂಗೀಕರಿಸಿ ಪ್ರೋತ್ಸಾಹಿಸಿದೆಯಲ್ಲದೇ, ಕಾರ್ಯರೂಪದಲ್ಲಿ ಅದರ ವಿವಿಧ ಧಾನಗಳನ್ನು ತೋರಿಸಿಕೊಟ್ಟಿದೆ. ಮಾತಾಪಿತರಿಂದ ಮೊದಲ್ಗೊಂಡು ಬಡ ನಸಾಮಾನ್ಯರಿಗಾಗಿ ವ್ಯಯಿಸುವ ಹಣವೂ ಈ ವರ್ಗಕ್ಕೆ ಸೇರಿದೆ. ಯಾವುದೇ ಸತ್ಕರ್ಮ, ಚ್ಚೇಕೆ ಪ್ರತಿಯೊಂದು ಸವಿ ನುಡಿಯೂ ಇಸ್ಲಾಮಿ ದೃಷ್ಟಿಯಲ್ಲಿ ದಾನವೇ ಆಗಿದೆ.

ಓರ್ವರು ತನ್ನ ಬಂಧು ಮಿತ್ರಾದಿಗಳನ್ನು ಸತ್ಕರಿಸುವುದನ್ನು, ಅದು ಅವರ ಮನ ೋಯಿಸುವುದು ಅಥವಾ ಹೀನೈಸುವುದೆಂದು ಯಾರೂ ಹೇಳಲಾರರು. ಅದು ಸ್ನೇಹಾನುಕಂಪ ುತ್ತು ಪ್ರೀತಿ ವಾತ್ಸಲ್ಯಗಳ ಬಹಿರಂಗ ಪ್ರದರ್ಶನ ಮಾತ್ರವಾಗಿರುವುದು. ನೀನು ನಿನ್ನ ಹೋದರನಿಗೊಂದು ಬಹುಮಾನ ನೀಡಿದರೆ ಅಥವಾ ನೆಂಟರಿಷ್ಟರಿಗೆ ಔತಣ ನೀಡಿದರೆ, ದು ಅವರ ದ್ವೇಷ ಭಾವನೆಗಳನ್ನು ಕೆರಳಿಸಲು ಪ್ರೇರಕವಾಗುವುದಿಲ್ಲ. ಅದು ಅವರ ಮನಸ್ಸನ್ನು ಘಾಸಿ ಗೊಳಿಸುವುದಿಲ್ಲ ಅಥವಾ ಅವರ ಗೌರವಕ್ಕೆ ಧಕ್ಕೆಯುಂಟು ಮಾಡುವುದಿಲ್ಲ.

ಇಸ್ಲಾಮಿನ ಆರಂಭ ಹಂತದಲ್ಲಿ ದಾನಧರ್ಮಗಳಿಗೆ ಝಕಾತಿನ ಸ್ಥಾನವೇ ಇತ್ತು. ದು ದೀನರಿಗೆ ಮತ್ತು ಸಂತ್ರಸ್ತರಿಗೆ ನೆರವು ನೀಡುವ ಗೌರವಾರ್ಹ ಮಾರ್ಗವಾಗಿತ್ತು. ಆದರೆ ಅದಕ್ಕೆ ತಿದ್ದುಪಡಿ ಅಥವಾ ಬದಲಾವಣೆ ಮಾಡಲಾಗದ ಏಕೈಕ ಮಾರ್ಗವೆಂಬ

ಸ್ಥಾನವಿರಲಿಲ್ಲ. ಪ್ರಸ್ತುತ ಧ್ಯೇಯ ಸಾಧನೆಗೆ ಅನೇಕಾರು ಮಾರ್ಗಗಳಿವೆ. ಅದನ್ನು ಸಮಾಜಸೇವೆ ಸಲ್ಲಿಸುತ್ತಿರುವ ಸಂಘ ಸಂಸ್ಥೆಗಳಿಗೆ ಸಹಾಯಧನವಾಗಿ ಸ್ವೀಕರಿಸಬಹುದು. ಅದರ ಕಾರ್ಯಕ್ರಮಗಳ ಜ್ಯಾರಿಗೆ ಅಗತ್ಯವಿರುವ ಆರ್ಥಿಕ ನೆರವು ಮತ್ತು ಒತ್ತಾಸೆಗಳನ್ನು ಇಸ್ಲಾಮಿ ರಾಷ್ಟ್ರವು ಒದಗಿಸುವುದು.

ಇನ್ನೊಂದು ದೃಷ್ಟಿಯಿಂದ ನೋಡಿದರೂ ಇದಕ್ಕೆ ಝಕಾತಿನ ಸ್ವರೂಪವೇ ಕಂಡುಬರುತ್ತದೆ. ಸಮಾಜದಲ್ಲಿ ದರಿದ್ರರಿರುವ ತನಕ ಅವರ ಕ್ಷೇಮಾಭಿವೃದ್ಧಿಗಳಿಗಾಗಿ ಸರಕಾರವು ಗರಿಷ್ಠವಾಗಿ ಪ್ರಯತ್ನಿಸಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಆದರೆ ಸಮಾಜದಲ್ಲಿ ಬಡವರಿರಲೇಬೇಕೆಂಬ ನಿಬಂಧನೆ ಇಸ್ಲಾಮಿನಲ್ಲಿಲ್ಲ. ಇಸ್ಲಾಮಿ ರಾಷ್ಟ್ರವು ಈ ಹಿಂದೆ ಸಂಭವಿಸಿದಂತೆ, ಉಚ್ಛ್ರಾಯ ಸ್ಥಿತಿಗೆ ತಲಪುವುದರೊಂದಿಗೆ ಝಕಾತ್ ಮತ್ತು ದಾನಧರ್ಮಗಳ ಅವಶ್ಯಕತೆಯಿರುವುದಿಲ್ಲ. ಆದರೂ ಝಕಾತ್ ಮತ್ತು ದಾನಧರ್ಮಗಳನ್ನು ವಿನಿಯೋಗಿಸುವ ಕೆಲವಾರು ಮಾರ್ಗಗಳಾದರೂ ಉಳಿಯದಿರಲಾರದು. ಅಂತಹ ಸಂದರ್ಭಗಳು ಎಲ್ಲ ಸಮಾಜಗಳಲ್ಲಿಯೂ ಸದಾಕಾಲ ಇರುವುದು. ವಿವಿಧ ಕಾರಣಗಳಿಂದಾಗಿ ದುಡಿಯಲಶಕ್ತರಾದವರ ಸಂರಕ್ಷಣೆಯು ಅದಕ್ಕೆ ನಿದರ್ಶನವಾಗಿದೆ.

******

ಇಸ್ಲಾಮ್ ಜನಜೀವನವನ್ನು ಅನ್ಯರ ಔದಾರ್ಯಕ್ಕೆ ಸರ್ವಥಾ ಬಿಡುವುದಿಲ್ಲವೆಂಬ ಸತ್ಯವನ್ನು ನಾವು ಮರೆಯಬಾರದು. ನಿರ್ಗತಿಕರ ಸಂರಕ್ಷಣೆಯು ಇಸ್ಲಾಮಿ ರಾಷ್ಟ್ರದ ಕರ್ತವ್ಯವೆಂದು ನಾವು ಹೇಳಿದೆವು. ಅದು ಔದಾರ್ಯ ಮತ್ತು ದಾನಧರ್ಮಗಳಿಗಿಂತ ಉನ್ನತವಾದುದೆಂದೂ ಎತ್ತಿತೋರಿಸಿದೆವು. ಹಾಗೆಯೇ ದುಡಿಮೆಯ ಸಾಮರ್ಥ್ಯವುಳ್ಳ ಪ್ರತೀಯೊಬ್ಬ ಪೌರರಿಗೆ ಉದ್ಯೋಗಾವಕಾಶ ಒದಗಿಸಬೇಕಾದುದೂ ಇಸ್ಲಾಮಿ ಸರಕಾರದ ಕರ್ತವ್ಯವಾಗಿದೆ. ಒಮ್ಮೆ ಓರ್ವರು ಪ್ರವಾದಿಯ ಬಳಿಗೆ ಬಂದು ತನಗೆ ಜೀವಿಸಲಿಕೆ ಏನಾದರೂ ನೀಡಬೇಕೆಂದು ವಿನಂತಿಸಿದರು. ಪ್ರವಾದಿವರ್ಯರು(ಸ) ಅವರಿಗೆ ಒಂದ ಕೊಡಲಿ ಮತ್ತು ಹಗ್ಗವನ್ನು ನೀಡಿದ ಬಳಿಕ, ಸೌದೆ ಕಡಿದು ಜೀವನ ಸಾಗಿಸುವಂತೆ ತಿಳಿಸಿದರು. ತರುವಾಯ ಇನ್ನೊಮ್ಮೆ ಬಂದು ತನ್ನ ಉದ್ಯೋಗದ ವರದಿ ನೀಡಬೇಕೆಂದು ಪ್ರವಾದಿ(ಸ) ಆದೇಶಿಸಿದರು. 20 ನೇ ಶತಮಾನದ ದೃಷ್ಟಿಯಿಂದ ವಿಷಯಗಳನ್ನು ವೀಕ್ಷಿಸಲು ಕಲಿತವರು ಪ್ರಾಯಶಃ ಹೀಗೆ ಹೇಳಬಹುದು: ಇದೊಂದು ವೈಯಕ್ತಿಕ ವಿಷಯ ಇದು ಸಮರ್ಥನೆಯಲ್ಲ. ಇಲ್ಲಿ ಕೇವಲ ಓರ್ವ ವ್ಯಕ್ತಿ, ಒಂದು ಕೊಡಲಿ ಮತ್ತು ಒಂದ ತುಂಡು ಹಗ್ಗ ಮಾತ್ರವಿರುವುದು. ಇಂದಿನ ಜೀವನವಾದರೋ, ಬೃಹತ್ ಕಾರ್ಖಾನೆಗಳು ಲಕ್ಷಗಟ್ಟಲೆ ಕಾರ್ಮಿಕರು ಮತ್ತು ಅನೇಕ ಖಾತೆಗಳಿರುವ ಸರಕಾರಗಳನ್ನು ಒಳಗೊಂಡಿದೆ

ಆದರೆ, ಇದು ತೀರಾ ಬಾಲಿಶವಾದ ವಿಚಾರಧಾರೆಯಾಗಿದೆ. ಫ್ಯಾಕ್ಟರಿಗಳ

ಆರಂಭವಾಗುವುದಕ್ಕಿಂತ ಸಾವಿರಾರು ವರ್ಷಗಳ ಹಿಂದೆಯೇ ಆ ಕುರಿತು ಪ್ರಸ್ತಾಪಿಸಿ ಅದಕ್ಕೆ ಬೇಕಾದ ಕಾನೂನುಗಳನ್ನು ಪ್ರವಾದಿಯು ರಚಿಸಬೇಕಾಗಿಲ್ಲ. ಒಂದು ವೇಳೆ ಅವರು ಹಾಗೆ ಮಾಡಿದರೂ ಅದು ಯಾರಿಗೂ ಅರ್ಥವಾಗಲಾರದು. ಕಾನೂನು ನಿರ್ಮಾಣಕ್ಕೆ ಅಗತ್ಯವಿರುವ ಸಾರ್ವತ್ರಿಕ ಬುನಾದಿಯನ್ನು ನಿರ್ಣಯಿಸುವುದಷ್ಟೇ ಅವರ ಕೆಲಸ. ಆ ಮೂಲ ಬುನಾದಿಗಳಿಗೆ ಬದ್ಧವಾಗಿದ್ದು, ಅಧ್ಯಯನ ನಡೆಸಿ ಕಾಲೋಚಿತವಾದ ರಚನಾತ್ಮಕ ರೂಪಗಳನ್ನು ಆವಿಷ್ಕರಿಸುವ ಸ್ವಾತಂತ್ರ್ಯವನ್ನು ಪ್ರತಿಯೊಂದು ತಲೆಮಾರಿಗೆ ನೀಡಲಾಯಿತು. ನಾವು ಎತ್ತಿಹೇಳಿದ ಉದಾಹರಣೆಯಲ್ಲಿ ಸ್ಪಷ್ಟವಾದ ಕೆಲವು ಮೂಲಭೂತ ತತ್ವಗಳಿವೆ.

1. ಉದ್ಯೋಗವನ್ನರಸಿ ಬರುವವರಿಗೆ ಉದ್ಯೋಗ ನೀಡಬೇಕಾದುದು ತನ್ನ ಕರ್ತವ್ಯವೆಂದು ಪ್ರವಾದಿ(ಸ) - ರಾಷ್ಟ್ರನಾಯಕ-ಭಾವಿಸಿದ್ದರು.

2. ಅಂದಿನ ಪರಿಸ್ಥಿತಿಗನುಸಾರವಾದ ಒಂದು ಕೆಲಸವನ್ನು ಅವರು ಮಾಡಿಕೊಟ್ಟರು.

3. ಆ ವ್ಯಕ್ತಿಯು ಮರಳಿ ಬಂದು ವರದಿ ಸಮರ್ಪಿಸಬೇಕೆಂದು ವಿನಂತಿಸುವ ಮೂಲಕ ತನ್ನ ಹೊಣೆಗಾರಿಕೆಯನ್ನು ಸ್ಪಷ್ಟೀಕರಿಸಿದರು. ಅತ್ಯಾಧುನಿಕ ರಾಜಕೀಯ ಮತ್ತು ಸಾಮಾಜಿಕ ಸಿದ್ಧಾಂತಗಳೆಲ್ಲವೂ ಆ ಬುನಾದಿಯನ್ನೇ ಹಮ್ಮಿಕೊಂಡಿವೆ. ಕಾರಣವಶಾತ್ ಯಾರಿಗಾದರೂ ಉದ್ಯೋಗ ಒದಗಿಸಲು ಸರಕಾರಕ್ಕೆ ಸಾಧ್ಯವಾಗದಿದ್ದರೆ, ಇಸ್ಲಾಮಿ ಪದ್ಧತಿಯಂತೆ ಅವರ ಜೀವನ ನಿರ್ವಹಣೆಗೆ 'ಬೈತುಲ್‌ಮಾಲ್' (ರಾಜ್ಯ ಬೊಕ್ಕಸ) ನಿಂದ ಸಹಾಯ ನೀಡಲಾಗುವುದು. ಹಾಗಿದ್ದರೂ ಅವರು ರಾಷ್ಟ್ರದ, ಪ್ರಜೆಗಳ ಹಾಗೂ ಸ್ವಂತ ದೃಷ್ಟಿಯಲ್ಲಿಯೂ ಗೌರವಾರ್ಹರೇ ಆಗಿರುತ್ತಾರೆ.

*

# ಇಸ್ಲಾಮ್ ಮತ್ತು ಮಹಿಳೆಯರು

ಸ್ತ್ರೀ ಸ್ವಾತಂತ್ರ್ಯ ಮತ್ತು ಸ್ತ್ರೀ-ಪುರುಷ ಸಮಾನತೆಯು ಪೌರ್ವಾತ್ಯ ಲೋಕದಲ
ಕೋಲಾಹಲವೆಬ್ಬಿಸುತ್ತಲಿರುವ ಸಮಸ್ಯೆಗಳಾಗಿವೆ.

ಸ್ತ್ರೀ-ಪುರುಷರಿಗೆ ಇಸ್ಲಾಮ್ ಸಂಪೂರ್ಣ ಸಮಾನತೆ ನೀಡಿದೆಯೆಂದು ಕೆಲವರ
ಸಾರುತ್ತಾರೆ. ಆದರೆ, ತಮ್ಮ ಅಜ್ಞಾನ ಅಥವಾ ತಾತ್ಸಾರದಿಂದ, ಇಸ್ಲಾಮನ್ನು ಸ್ತ್ರೀಯ
ಬದ್ಧವೈರಿಯೆಂದು ಅವರು ಚಿತ್ರೀಕರಿಸುತ್ತಾರೆ. ಇಸ್ಲಾಮ್ ಸ್ತ್ರೀಯರ ಗೌರವಾಭಿಮಾನಗಳನ
ತುಚ್ಛೀಕರಿಸುತ್ತದೆ. ಅವಳ ಆತ್ಮಪ್ರಜ್ಞೆಯನ್ನು ದಮನಿಸುತ್ತದೆ. ಅವಳೊಂದಿಗೆ ಮೃ
ಸಮಾನವಾಗಿ ವರ್ತಿಸುತ್ತದೆ. ಆಕೆಯನ್ನು ಪುರುಷನ ಭೋಗವಸ್ತು ಮತ
ಸಂತಾನೋತ್ಪತ್ತಿಯ ಯಂತ್ರವೆಂದು ಕಡೆಗಣಿಸಿದೆ. ಪುರುಷನು ಆಕೆಯನ್ನು ಗುಲಾಮಳನ್ನಾಗಿ
ಆಕೆಯ ಮೇಲೆ ತನ್ನ ಹಿರಿತನವನ್ನು ಮೆರೆಯುತ್ತಾನೆ ಎಂದು ಅವರು ಹೇಳುತ್ತಾರೆ

ಈ ಉಭಯ ವಿಭಾಗಗಳಿಗೂ ಇಸ್ಲಾಮಿನ ವಾಸ್ತವಿಕತೆಯ ಅರಿವಿಲ್ಲ. ಒಂದ
ವೇಳೆ ಇದ್ದರೂ ಸತ್ಯ ಮತ್ತು ಅಸತ್ಯಗಳನ್ನು ಅವರು ಕಲಬೆರಕೆ ಮಾಡುತ್ತಿದ್ದಾರೆ.

ಇಸ್ಲಾಮಿನಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಪರಿಶೀಲಿಸುವುದಕ್ಕಿಂತ ಮುಂಚಿತವಾ
ಯುರೋಪಿನಲ್ಲಿ ಆಕೆಯ ಸ್ಥಿತಿ ಹೇಗಿತ್ತೆಂಬುದರ ಬಗ್ಗೆ ನಾವೊಮ್ಮೆ ಸಿಂಹಾವಲೋಕ
ನಡೆಸೋಣ. ಅಲ್ಲಿಂದಲೇ ಈ ಗೊಂದಲ ಹುಟ್ಟಿಕೊಂಡಿದೆ. ಪೌರ್ವಾತ್ಯ ಲೋಕ
ಅವರನ್ನು ಕೇವಲ ಅಂಧವಾಗಿ ಅನುಕರಿಸಿತು.

******

ಯೂರೋಪಿನಲ್ಲಿ ಮಾತ್ರವಲ್ಲ ಇಡೀ ಜಗತ್ತಿನಲ್ಲಿಯೇ ಸ್ತ್ರೀಯು ಯಾವುದ
ಸ್ಥಾನಮಾನವಿಲ್ಲದ ಕಾಲ ಕಸವಾಗಿದ್ದಳು. ವಿದ್ವಾಂಸರು ಮತ್ತು ತತ್ವಜ್ಞಾನಿಗಳ
ಆಕೆಗೆ ಆತ್ಮವಿದೆಯೇ ಇಲ್ಲವೇ? ಒಂದು ವೇಳೆ ಇದೆಯೆಂದಾದರೆ ಅದು ಮಾನ
ಆತ್ಮವೋ ಅಥವಾ ಪಶುವಿನ ಆತ್ಮವೋ? ಇನ್ನು ಒಂದು ವೇಳೆ ಮಾನವ ಆತ್ಮ
ಇದೆಯೆಂದಾದರೆ ಪುರುಷನ ಮಟ್ಟಿಗೆ ಆಕೆಯ 'ಸಾಮಾಜಿಕ' ಮತ್ತು ಮಾನವೀಂ
ಸ್ಥಾನವೇನು? ಗುಲಾಮರ ಸ್ಥಾನವೋ? ಅಥವಾ ಅದಕ್ಕಿಂತ ಹೆಚ್ಚಿಗೇನಾದರೂ ಇದೆಯೆ
ಎಂದು ತರ್ಕಿಸುತ್ತಿದ್ದರು.

ಗ್ರೀಕ್ ಮತ್ತು ರೋಮ್ ಸಾಮ್ರಾಜ್ಯಗಳಲ್ಲಿ ಸ್ತ್ರೀಗೆ ಉನ್ನತ ಪದವಿ ನೀಡಿದ್ದ ಪೂರ್ವ ಸಂದರ್ಭಗಳಲ್ಲಿಯೂ, ಅದು ಸ್ತ್ರೀಯರಿಗೆ ಸಾರ್ವತ್ರಿಕವಾಗಿ ನೀಡಲ್ಪಟ್ಟ ೌರವವಾಗಿರಲಿಲ್ಲ. ಬದಲಾಗಿ ಕೆಲವೊಂದು ಸ್ತ್ರೀಯರಿಗೆ ಅವರ ವೈಯಕ್ತಿಕ ಪ್ರತಿಭೆಯನ್ನು ುರುತಿಸಿ ನೀಡಲ್ಪಟ್ಟ ಗೌರವವಾಗಿತ್ತು ಅಥವಾ ರಾಜ ದರ್ಬಾರುಗಳಿಗೆ ಅಲಂಕಾರವಾಗಿ ರ್ತಿಸುತ್ತಿದ್ದ ಅಂತಃಪುರದ ಕೆಲವು ಸ್ತ್ರೀಯರನ್ನು ಮಾತ್ರ ಗೌರವಿಸಲಾಗುತ್ತಿತ್ತು. ಅದು ಡಂಬರಪ್ರಿಯ ಮತ್ತು ಸುಖಲೋಲುಪ ಶ್ರೀಮಂತ ವರ್ಗದ ಆಡಂಬರ ವಸ್ತುವೆಂಬ ಲೆಯಲ್ಲಿ ದೊರೆತ ಗೌರವವಾಗಿತ್ತು. ಪುರುಷರ ಮನಸ್ಸನ್ನು ರಂಜಿಸುವ ಭೋಗ ಸ್ತುವೆಂಬುದರ ಹೊರತು ಮಾನವೀಯ ನೆಲೆಯಲ್ಲಿ ಆಕೆಗೆ ಯಾವ ಗೌರವವೂ ೊರೆತಿರಲಿಲ್ಲ.

ಯೂರೋಪಿನ ಗುಲಾಮ ಸಂಪ್ರದಾಯ ಮತ್ತು 'ಫ್ಯೂಡಲಿಝುಮ್'ನ ಕಾಲಗಳಲ್ಲಿಯೂ ್ತ್ರೀಯರ ಪರಿಸ್ಥಿತಿ ಹಾಗೆಯೇ ಇತ್ತು. ಸ್ತ್ರೀಯು ಅಜ್ಞಾನಕೂಪದಲ್ಲಿ ಬಿದ್ದು ನರಳುತ್ತಿದ್ದಳು. ಲವೊಮ್ಮೆ ಆಕೆಯನ್ನು ಆಡಂಬರ ಮತ್ತು ಲೈಂಗಿಕ ಸಂತೃಪ್ತಿಗಾಗಿ ಲಾಲಿಸುವರು. ಇನ್ನು ಲವೊಮ್ಮೆ ತಿನ್ನುವ, ಕುಡಿಯುವ, ಹೆರುವ ಮತ್ತು ಅಹೋರಾತ್ರಿ ದುಡಿಯುವ ್ಯಗವೆಂಬಂತೆ ಕಡೆಗಣಿಸುತ್ತಿದ್ದರು.

ಹೀಗಿರುತ್ತಾ, ಕೈಗಾರಿಕಾ ಕ್ರಾಂತಿಯು ಭುಗಿಲೆದ್ದಿತು. ಅದು ಆಕೆಯನ್ನು ಮಾನವ ತಿಹಾಸದಲ್ಲಿಯೇ ಅತ್ಯಂತ ಭೀಕರ ದುರಂತ ಮತ್ತು ಸಂಕಷ್ಟಗಳಿಗೆ ಗುರಿಪಡಿಸಿತು.

ಯೂರೋಪಿನ ಸ್ವಭಾವವು ಸದಾ ಸಂಕುಚಿತ ಮತ್ತು ಸ್ವಾರ್ಥಲಂಪಟವಾಗಿತ್ತು. ುನ್ನತ ಔದಾರ್ಯ ಮನೋಭಾವ ಮತ್ತು ನಿಸ್ವಾರ್ಥ ಸೇವೆಯ ಉತ್ತುಂಗಕ್ಕೇರಲು ದರಿಂದಾಗುವುದಿಲ್ಲ. ಆದರೆ ಗುಲಾಮಗಿರಿ ಮತ್ತು ಜಾಗೀರುದಾರೀ ಪದ್ಧತಿಯ ಕಾಲದ ರ್ಥಿಕ ವ್ಯವಸ್ಥೆ ಮತ್ತು ಬೇಸಾಯ ಪರಿಸ್ಥಿತಿಯು ಸ್ತ್ರೀಯರ ಸಂರಕ್ಷಣೆಯನ್ನು ವಹಿಸಲು ುರುಷನನ್ನು ನಿರ್ಬಂಧಿಸಿತು. ಮಾತ್ರವಲ್ಲದೇ, ಆಕೆಯು ಬೇಸಾಯದ ಪರಿಸರಗಳಲ್ಲಿ ುಟುಂಬದಲ್ಲಿದ್ದ ಕೈಕಸುಬುಗಳನ್ನು ಮಾಡಿ, ತನ್ನನ್ನು ಸಂರಕ್ಷಿಸುವ ಪುರುಷನಿಗೆ ೆರವಾಗುತ್ತಿದ್ದಳು.

ಆದರೆ, ಕೈಗಾರಿಕಾ ಕ್ರಾಂತಿಯು ನಗರ ಮತ್ತು ಗ್ರಾಮ ಪ್ರದೇಶಗಳ ಜೀವನ ್ಯವಸ್ಥೆಯನ್ನು ಸಂಪೂರ್ಣ ಬದಲಾಯಿಸಿತು. ಕುಟುಂಬದ ಬುನಾದಿಯು ಅಲುಗಾಡಿತು. ್ತ್ರೀಯರು ಮತ್ತು ಮಕ್ಕಳು ಫ್ಯಾಕ್ಟರಿಗಳಲ್ಲಿ ನೇಮಕಗೊಂಡು ಕುಟುಂಬ ಸಂಬಂಧಗಳು ಥಿಲವಾದುವು. ಎಲ್ಲಕ್ಕಿಂತ ಹೆಚ್ಚಾಗಿ, ಪರಸ್ಪರ ಸಹಾಯ ಸಂರಕ್ಷಣೆಯ ಹಳ್ಳಿ ಜೀವನವು

ಮಾಯವಾಗಿ, ಅನ್ಯೋನ್ಯ ಪರಿಚಯವಿಲ್ಲದ, ಪರಸ್ಪರ ಸಂರಕ್ಷಣೆಗೆ ಸಿದ್ಧರಿಲ್ಲದ ಪ್ರತಿಯೊಬ್ಬನೂ 'ತಾನಾಯಿತು, ತನ್ನ ಕೆಲಸವಾಯಿತು'- ಎಂಬಂತೆ ಒಂಟಿಯಾ ಬಾಳುವ ಹೃದಯಹೀನವಾದ ನಗರ ವಾತಾವರಣಕ್ಕೆ ಆತನು ಎಸೆಯಲ್ಪಟ್ಟನು. ಅಲ್ಲಿ ಬೆಲೆ ತೆತ್ತು ದೊರೆಯುವ ಅಕ್ರಮ ಲೈಂಗಿಕ ಸುಖವು ಆತನನ್ನು ವಿವಾಹ ಚಿಂತೆಗಳಿಂ ಮುಕ್ತಗೊಳಿಸಿತು ಮತ್ತು ಕುಟುಂಬ ಪಾಲನೆಯ ಹೊಣೆಯಿಂದ ದೂರವಿರಲ ಪ್ರೇರಕವಾಯಿತು. ಕನಿಷ್ಠಪಕ್ಷ ಆ ಹೊಣೆಯನ್ನು ಕೆಲವಾರು ವರುಷಗಳ ಬಳಿಕ ವಹಿಸಿದ ಸಾಕೆಂಬ ಭಾವನೆ ಬೆಳೆಯಿತು.[1]

ಇಲ್ಲಿ ಯೂರೋಪಿನ ಇತಿಹಾಸವನ್ನು ಪರಿಶೀಲಿಸುವುದು ನಮ್ಮ ಉದ್ದೇಶವಲ್ಲ ಬದಲಾಗಿ ಸ್ತ್ರೀಯರ ಜೀವನದ ಮೇಲೆ ಪ್ರಭಾವ ಬೀರಿದ ವಿವಿಧ ಅಂಶಗಳನ ತಿಳಿಯುವುದಾಗಿದೆ.

ಕೈಗಾರಿಕಾ ಕ್ರಾಂತಿಯು ಸ್ತ್ರೀಯರನ್ನು ಮತ್ತು ಮಕ್ಕಳನ್ನು ಫ್ಯಾಕ್ಟರಿಗಳಿಗೆ ಸಾಗಿಸಿತೆಂದ ನಾವು ಹೇಳಿದೆವು. ಕುಟುಂಬ ಸಂಬಂಧಗಳ ಶಿಥಿಲತೆ ಮತ್ತು ಅವನತಿಗೆ ಅದ ಪ್ರೇರಕವಾಯಿತು. ಆದರೆ ಸ್ತ್ರೀಯರೇ ಅದಕ್ಕೆ ಭಾರೀ ಬೆಲೆ ತೆರಬೇಕಾಯಿತು. ಹಿಂದಿಗಿಂ ಹೆಚ್ಚು ಶ್ರಮಪಟ್ಟು ದುಡಿಯಲು ಆಕೆ ನಿರ್ಬಂಧಿತಳಾದಳು. ಆಕೆಯು ಪಾವಿತ್ರ್ಯತೆಯನ ಕಳೆದುಕೊಳ್ಳಬೇಕಾಯಿತು. ಆದರೂ ಲೌಕಿಕ ಮತ್ತು ಮಾನಸಿಕ ಸಂತೃಪ್ತಿಯು ಆಕೆ ಗಗನಕುಸುಮವಾಯಿತು. ತನ್ಮಧ್ಯೆ ಪುರುಷನು ಆಕೆಯ ಸಂರಕ್ಷಣೆಯ ನೊಗವನ್ನು ತನ ಭುಜದಿಂದ ಜಾರಿಸಿ, ಆ ಕರ್ತವ್ಯವನ್ನು ಆಕೆಯ ಹೆಗಲಿಗೇರಿಸಿದನು- ಆಕೆ ಪತ್ನಿಯೊ ಮಾತೆಯೋ ಎಂಬುದನ್ನು ಆತ ಗಮನಿಸಲಿಲ್ಲ. ಇನ್ನೊಂದೆಡೆ, ಫ್ಯಾಕ್ಟರಿಗಳಲ್ಲಿ ಆಕೆಯ ನಿರ್ದಾಕ್ಷಿಣ್ಯವಾಗಿ ಶೋಷಿಸಲ್ಪಟ್ಟಳು. ಸುದೀರ್ಘ ಸಮಯ ಆಕೆಯನ್ನು ದುಡಿಸಲಾಯಿತು

---

1. ಈ ಕುರಿತು ಲೌಕಿಕವಾದಿಗಳು ಮತ್ತು ಇತಿಹಾಸದ ಆರ್ಥಿಕ ವ್ಯಾಖ್ಯಾನಗಾರರು, ಲೌ ಪರಿಸ್ಥಿತಿಗಳೇ ಸಾಮಾಜಿಕ ಪದ್ಧತಿ ಮತ್ತು ಮಾನವೀಯ ಸಂಬಂಧಗಳಿಗೆ ಪ್ರೇರಕವೆಂದು ಹೇಳುತ್ತಾ ಮಾನವ ಜೀವನದಲ್ಲಿ ಸಂಪತ್ತಿನ ಪ್ರಭಾವವನ್ನು ನಿಷೇಧಿಸುವಂತಿಲ್ಲ. ಆದರೆ, ಇಲ್ಲಿ ಅದೊಂದೇ ಪ್ರಬ ಏಕಮೇವ ಘಟಕದ ಹಾಗೂ ಮಾನವನ ಭಾವ, ವಿಚಾರ ವರ್ತನೆಗಳೆಲ್ಲವೂ ಸಂಪೂರ್ಣವಾಗಿ ಅದ ನಿಯಂತ್ರಣದಲ್ಲಿದೆಯೆಂಬ ವಾದವನ್ನು ನಾವು ಸಂಪೂರ್ಣವಾಗಿ ನಿರಾಕರಿಸುತ್ತೇವೆ. ಐರೋಪ್ಯ ಜೀವನ ಮೇಲೆ ಅದಕ್ಕೆ ಅಂತಹ ಪ್ರಭಾವವಿತ್ತೆಂಬುದು ನಿಜ. ಮಾನವೀಯ ನೆಲೆಯಲ್ಲಿ ಆರ್ಥಿಕ ಸಂಬಂಧಗಳನ ಬೆಳೆಸಿ, ಆತ್ಮ ಸಂಸ್ಕರಣೆಯ ಭಾವನೆಗಳನ್ನು ಉದ್ದೀಪನಗೊಳಿಸುವಂತಹ ಉನ್ನತ ಆದರ್ಶದ ಅಭಾವ ಅದಕ್ಕೆ ಕಾರಣವಾಗಿದೆ. ಅಲ್ಲಿ ಮುಸ್ಲಿಮ್ ಲೋಕದಲ್ಲಿದ್ದಂಥ ಒಂದು ಆದರ್ಶವಿರುತ್ತಿದ್ದರೆ, ಕನಿಷ್ಠಪ ಆರ್ಥಿಕ ಒತ್ತಡಗಳನ್ನು ಎದುರಿಸಿ ಅದರ ಬಂಧನದಿಂದ ಮಾನವನನ್ನು ವಿಮೋಚನೆಗೊಳಿಸ ಸಾಧ್ಯವಿತ್ತು.

ಆದರೂ ಆಕೆಗೆ ಅದೇ ಫ್ಯಾಕ್ಟರಿಯಲ್ಲಿ ಅದೇ ಕೆಲಸವನ್ನು ಮಾಡುತ್ತಿದ್ದ ಪುರುಷನಿಗಿಂತ ಕಡಿಮೆ ವೇತನ ದೊರೆಯುತ್ತಿತ್ತು!

ಯಾಕೆ ಹೀಗಾಯಿತೆಂದು ಪ್ರಶ್ನಿಸಬೇಕಾಗಿಲ್ಲ. ಅದುವೇ ಯೂರೋಪು. ಅದರ ಆತ್ಮವು ಸಂಕುಚಿತ, ಕ್ರೂರ ಮತ್ತು ಸ್ವಾರ್ಥಲಂಪಟವಾಗಿದೆ. ಅದು ಮಾನವನನ್ನು ಮಾನವೀಯ ದೃಷ್ಟಿಯಿಂದ ವೀಕ್ಷಿಸಲು ಎಂದೂ ಸಿದ್ಧವಿಲ್ಲ. ದುಷ್ಟತೆಯ ಬಾಗಿಲು ತೆರೆದಿರುವಾಗ ಶಿಷ್ಟತೆಯೆಡೆಗೆ ಅದು ಇಣಿಕಿಯೂ ನೋಡಲಾರದು.

ಇದು ಇತಿಹಾಸದಾದ್ಯಂತ ಯುರೋಪಿನ ಸ್ವಭಾವ; ನಿನ್ನೆ ಮಾತ್ರವಲ್ಲ ಇಂದು ಕೂಡಾ. ದೇವನು ಅದಕ್ಕೆ ಸನ್ಮಾರ್ಗ ತೋರಿಸಿ, ಉನ್ನತಿಗೇರಿಸದಿದ್ದರೆ ನಾಳೆಯೂ ಅದು ಹಾಗೆಯೇ ಇರುವುದು! ಸ್ತ್ರೀಯರನ್ನೂ ಮಕ್ಕಳನ್ನೂ ಶೋಷಿಸದೆ, ಅವರೊಂದಿಗೆ ಕ್ರೂರವಾಗಿ ವರ್ತಿಸದಿರಲು ಪ್ರೇರೇಪಿಸುವ ವಾಸ್ತವಿಕತೆಯೇನು? ಕೇವಲ ಆತ್ಮಸಾಕ್ಷಿಯೊಂದೇ ಅದಕ್ಕೆ ಪ್ರೇರಕ! ಆದರೆ, ಯೂರೋಪಿಗೆ ಎಂದಾದರೂ ಆತ್ಮಸಾಕ್ಷಿಯೆಂಬುದಿತ್ತೇ?

ಹೀಗಿದ್ದರೂ, ಅಕ್ರಮವನ್ನು ಸಹಿಸಲಾಗದ ಮತ್ತು ಅನುಕಂಪ ಮಿಡಿಯುವ ಹೃದಯಗಳೂ ಅಲ್ಲಿದ್ದುವು. ಅಸಹಾಯಕ ಮಕ್ಕಳಿಗಾಗಿ ಹೋರಾಡಲು ಅವರು ಸಿದ್ಧರಾದರು. ಹೌದು, ಕೇವಲ ಮಕ್ಕಳಿಗಾಗಿ. ಎಳೆ ಪ್ರಾಯದ ಮಕ್ಕಳನ್ನು ಫ್ಯಾಕ್ಟರಿಗಳಲ್ಲಿ ದುಡಿಸುವುದರ ವಿರುದ್ಧ ಆ ಸಮಾಜ ಸುಧಾರಕರು ಧ್ವನಿಯೆತ್ತಿದರು. ತಮ್ಮ ಎಳೆಸ್ವಭಾವಕ್ಕೆ ಹೊರಲಾಗದ ಹಾಗೂ ಬೆಳವಣಿಗೆಯನ್ನು ಪ್ರತಿಕೂಲವಾಗಿ ಬಾಧಿಸುವ ಕಠಿಣ ದುಡಿಮೆಗಳಿಗೆ ಮಕ್ಕಳನ್ನು ನೇಮಿಸುವುದನ್ನು ಅವರು ಪ್ರಬಲವಾಗಿ ಖಂಡಿಸಿದರು. ಕಠಿಣ ಕೆಲಸಗಳನ್ನು ಮಾಡಿಸಿ ತುಚ್ಛ ಸಂಬಳ ನೀಡುವುದನ್ನು ಅವರು ಕಟುವಾಗಿ ಟೀಕಿಸಿದರು. ಆ ಚಳವಳಿಗಳು ಯಶಸ್ವಿಯಾದುವು. ಕ್ರಮೇಣ ಕೆಲಸದ ಪ್ರಾಯವನ್ನು ಹೆಚ್ಚಿಸಲಾಯಿತು. ದುಡಿಮೆಯ ಅವಧಿಯು ಕಡಿಮೆಯಾಗಿ, ವೇತನ ಮಟ್ಟವು ಏರಿತು.

ಆದರೆ ಸ್ತ್ರೀಯ ಪರವಾಗಿ ವಾದಿಸಲು ಯಾರೂ ಇರಲಿಲ್ಲ. ಸ್ತ್ರೀಯರಿಗೆ ನೆರವಾಗಲು ಮನಸ್ಸು ಮತ್ತು ಭಾವನೆಗಳು ಉನ್ನತವಾಗಿರಬೇಕು. ಅದು ಯೂರೋಪಿನ ಸಾಮರ್ಥ್ಯಕ್ಕೆ ಮೀರಿದ ವಿಷಯವಾಗಿದೆ. ತನ್ನಿಮಿತ್ತ ಆಕೆಯು ಸದಾ ಪರೀಕ್ಷೆಗಳ ಅಗ್ನಿಕುಂಡದಲ್ಲಿ ಬಿದ್ದು ನರಳಿದಳು. ತನಗಾರೂ ಗತಿಯಿಲ್ಲವೆಂದು ಮನಗಂಡಾಗ ಅಹೋರಾತ್ರಿ ದುಡಿಯಲು ನಿರ್ಬಂಧಿತಳಾದಳು. ದುಡಿಮೆ ಮತ್ತು ಅದರ ಉತ್ಪಾದನೆ ಸಮಾನವಾಗಿದ್ದರೂ ಪುರುಷನಿಗಿಂತ ಕಡಿಮೆ ಸಂಬಳದಲ್ಲಿ ಆಕೆಯು ತೃಪ್ತಿ ಪಡೆಯಬೇಕಾಯಿತು.

ಪ್ರಥಮ ಜಾಗತಿಕ ಯುದ್ಧವು ಭುಗಿಲೆದ್ದಿತು. ಯೂರೋಪು ಮತ್ತು ಅಮೇರಿಕದ ಲಕ್ಷೋಪಲಕ್ಷ ಯುವಕರು ವಧಿಸಲ್ಪಟ್ಟರು. ಅದರೊಂದಿಗೆ ಸ್ತ್ರೀಯು ಇತಿಹಾಸದಲ್ಲಿ ಅತ್ಯಂತ ಕಠಿಣ ಪರೀಕ್ಷೆಗಳಿಗೆ ಕ್ರೂರ ರೀತಿಯಲ್ಲಿ ಗುರಿಯಾದಳು. ಲಕ್ಷಗಟ್ಟಲೆ ಮಂದಿ

ನಿರ್ಗತಿಕರು ಮತ್ತು ವಿಧವೆಯರಾದರು. ಇದಕ್ಕೆ ಹಲವು ಕಾರಣಗಳಿದ್ದುವು. ಒಂದೆಡೆ ಪತಿಯರನ್ನು ಕಳೆದುಕೊಂಡ ವಿಭಾಗ. ಇನ್ನೊಂದೆಡೆ ಅಂಗವಿಕಲರ ಹಾಗೂ ಯುದ್ಧದ ಕ್ರೌರ್ಯ ಮತ್ತು ಮಾರಕ ವಿಷ ಬಾಂಬುಗಳ ಆಘಾತದಿಂದ ಮಾನಸಿಕ ರೋಗಿಗಳಾದ ವಿಭಾಗ. ವರ್ಷಗಟ್ಟಲೆ ಕುಟುಂಬ ಸಂಬಂಧವನ್ನು ಕಳೆದುಕೊಂಡವರು... ಅವರಿಗೆ ವಿವಾಹ ಅಥವಾ ಕುಟುಂಬದ ಹೊಣೆಗಾರಿಕೆಯಿಲ್ಲದೇ ಕೇವಲ ಸುಖಸವಿಯುವುದಷ್ಟೇ ಬೇಕಾಗಿತ್ತು.

ಮತ್ತೊಂದೆಡೆ, ಯುದ್ಧದಿಂದಾದ ಪ್ರಾಣಹಾನಿಯಿಂದಾಗಿ ಕಾರ್ಖಾನೆಗಳಲ್ಲಿ ದುಡಿಯುವ ಪುರುಷರ ಕೊರತೆಯುಂಟಾಯಿತು. ಇದರಿಂದಾಗಿ ಸ್ತ್ರೀಯು ತನ್ನ ಹಾಗೂ ತನ್ನ ಆಶ್ರಯದಲ್ಲಿರುವ ವೃದ್ಧರ ಹಾಗೂ ಮಕ್ಕಳ ಪೋಷಣೆಗಾಗಿ ಕಾರ್ಖಾನೆಗಳಲ್ಲಿ ದುಡಿಯಬೇಕಾಯಿತು. ತತ್ಪರಿಣಾಮವಾಗಿ ಆಕೆಯು ತನ್ನ ನೈತಿಕಮಟ್ಟದಿಂದ ಕೆಳಗಿಳಿಯಬೇಕಾಯಿತು. ವಸ್ತುತಃ ಆಕೆಯ ಚಾರಿತ್ರ್ಯವು ಆಹಾರ ಸಂಪಾದನೆಗೆ ದೊಡ್ಡ ತೊಡಕಾಗಿತ್ತು! ಫ್ಯಾಕ್ಟರಿಯ ಮಾಲಿಕನಿಗೂ ನಿರ್ವಾಹಕನಿಗೂ ಕೇವಲ ದುಡಿಯುವ ಹಸ್ತಗಳಷ್ಟೇ ಅಗತ್ಯವಿದ್ದುದಲ್ಲ. ಅವರಿಗೆ ಅಮೂಲ್ಯ ಅವಕಾಶ ದೊರೆಯಿತು. ಹಸಿದ ಹಕ್ಕಿಯು ಆಹಾರಕ್ಕಾಗಿ ಸ್ವಯಂ ಕೆಳಗಿಳಿದು ಬಂದರೆ ಬೇಟೆಗಾರನೇಕೆ ಸಂಕೋಚ ಪಡಬೇಕು? ಪರಿಸ್ಥಿತಿಯ ಒತ್ತಡದಿಂದ ಆಕೆ ದುಡಿಮೆಗಿಳಿದಾಗ ಅಮೂಲ್ಯವಾದ ಇತರ ಹಲವನ್ನೂ ಆಕೆ ಕಳಕೊಳ್ಳಬೇಕಾಯಿತು; ಕೆಲಸ ಬೇಕಿದ್ದರೆ ಆಕೆ ಅದಕ್ಕೆ ಸಿದ್ಧಳಾಗಲೇಬೇಕಿತ್ತು.

ಅಲ್ಲಿ ಕೇವಲ ಹಸಿವು ಮತ್ತು ಅನ್ನದ ಪ್ರಶ್ನೆಯಿದ್ದುದಲ್ಲ. ಲೈಂಗಿಕಾಸಕ್ತಿಯು ನೈಜ ಕಾಮನೆಯಾಗಿದೆ. ಅದನ್ನು ಶಮನಿಸಲೇಬೇಕು. ಉಳಿದಿದ್ದ ಪುರುಷರೆಲ್ಲರೂ ವಿವಾಹವಾದರೂ ಅಂದು ಜೀವಿಸಿದ್ದ ಸ್ತ್ರೀಯರ ಲೈಂಗಿಕ ತೃಷೆಯನ್ನು ತಣಿಸಲು ಸಾಧ್ಯವಿರಲಿಲ್ಲ. ಯುದ್ಧನಿಮಿತ್ತ ಉದ್ಭವಿಸಿದ ಪುರುಷರ ಅಭಾವವು ಅಷ್ಟೊಂದು ತೀವ್ರವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಗಳಲ್ಲಿ ಸಮಸ್ಯೆಯ ಪರಿಹಾರಕ್ಕಾಗಿ ಇಸ್ಲಾಮ್ ಅಂಗೀಕರಿಸಿದಂತಹ ಪರಿಹಾರವನ್ನು ಒದಗಿಸಲು ಯೂರೋಪಿನ ಮತ ನಂಬಿಕೆಗಳು ಒಪ್ಪಿಗೆ ನೀಡಲಿಲ್ಲ. ಅದರಿಂದಾಗಿ ಸ್ತ್ರೀಯು ತನಗಿಷ್ಟವಿದ್ದರೂ ಇಲ್ಲದಿದ್ದರೂ ಜೀವನಾವಶ್ಯಕತೆಗಳಾದ ಆಹಾರ, ವಸ್ತ್ರ ಮತ್ತು ಲೈಂಗಿಕ ಕಾಮನೆಗಳ ಪೂರೈಕೆಗೆ ಚಾರಿತ್ರ್ಯ ಮತ್ತು ಸದಾಚಾರವನ್ನು ನಿರ್ಲಕ್ಷಿಸಬೇಕಾಯಿತು.

ಸ್ತ್ರೀಯು ತನ್ನ ದೌರ್ಭಾಗ್ಯವನ್ನು ಅಪ್ಪಿಕೊಂಡಳು. ಅವಳು ತನ್ನ ದೇಹವನ್ನು ಮಾನವ ರಣಹದ್ದುಗಳಿಗೆ ಸಮರ್ಪಿಸಿ ವ್ಯಾಪಾರ ಮತ್ತು ಕೈಗಾರಿಕಾ ಕೇಂದ್ರಗಳಲ್ಲಿ

ಮಡಿದಳು. ಹೀಗೆ ತನ್ನ ಭಾವನೆಗಳ ಶಮನಕ್ಕೆ ದಾರಿ ಮಾಡಿಕೊಂಡಳು. ಆದರೆ ಅಷ್ಟ ರಿಂದಲೇ ಆಕೆಯ ಸಮಸ್ಯೆಗಳು ಕೊನೆಗೊಂಡುವೇ? ಇಲ್ಲ, ಅವು ಇನ್ನಷ್ಟು ಹೆಚ್ಚಾದುವು. ಫ್ಯಾಕ್ಟರಿಗಳು ಸ್ತ್ರೀಯರ ಸಂದಿಗ್ಧತೆಯನ್ನು ಶೋಷಿಸಿದುವು. ಫ್ಯಾಕ್ಟರಿ ಮಾಲಿಕರು ಅವರೊಂದಿಗೆ ಬುದ್ಧಿ ಮತ್ತು ಆತ್ಮಸಾಕ್ಷಿಯು ಕ್ಷಮಿಸದಂತಹ ಘೋರ ಪಾತಕವೆಸಗಿದರು. ಪುರುಷರೊಂದಿಗೆ ಅದೇ ಕೆಲಸವನ್ನು ಮಾಡುವ ಸ್ತ್ರೀಯರಿಗೆ ತುಚ್ಛ ಸಂಬಳ ನೀಡಿದರು.

ಈಗ ಒಂದು ಕ್ರಾಂತಿ ಅನಿವಾರ್ಯವಾಗಿತ್ತು. ಶತಮಾನಗಳಿಂದ ತಾಂಡವವಾಡುತ್ತಿರುವ ಅಕ್ರಮ ಮರ್ದನಗಳನ್ನು ಕಿತ್ತೆಸೆಯುವಂತಹ ಕ್ರಾಂತಿ. ಸ್ತ್ರೀಗೆ ಆಕೆಯದೆಂದು ಏನೂ ಉಳಿದಿರಲಿಲ್ಲ? ಆಕೆ ತನ್ನ ದೇಹ, ಸೌಂದರ್ಯ, ಅಭಿಮಾನ ಮತ್ತು ಸಾರಿತ್ವವನ್ನು ಗಿರವಿ ಯಿಟ್ಟಿದ್ದಳು. ತನ್ನ ಜೀವನಕ್ಕೆ ಭದ್ರತೆ ನೀಡುವ ಹಾಗೂ ಸುಖ ಸೌಭಾಗ್ಯಗಳಿಗೆ ಅರ್ಹ ವಾದ ಕುಟುಂಬ ಮತ್ತು ಮಕ್ಕಳ ಸಹಜೀವನವು ಆಕೆಗೆ ನಷ್ಟಗೊಂಡಿತ್ತು. ಅವೆಲ್ಲವೂ ಹಾಗಿರಲಿ, ಕನಿಷ್ಟ ಪಕ್ಷ ಆಕೆಗೆ ಪುರುಷನಿಗೆ ಸಮಾನವಾದ ವೇತನವಾದರೂ ದೊರೆಯ ಬೇಕಿತ್ತಲ್ಲವೇ? ಅದು ಯಾವ ಸಾಮಾನ್ಯ ಬುದ್ಧಿಗೂ ಅರ್ಥವಾಗುವ ನ್ಯಾಯೋಚಿತ ಹಕ್ಕು.

ಆದರೆ ತನ್ನ ಅಧಿಕಾರ ಗೋಪುರದಿಂದ ಕೆಳಗಿಳಿಯಲು ಐರೋಪ್ಯನು ಒಪ್ಪಲಿಲ್ಲ. ಮಾತ್ರವಲ್ಲ ತನ್ನ ಸ್ವಾಭಾವಿಕ ಅಹಂಭಾವವನ್ನು ತೊರೆಯಲು ಆತ ಸಿದ್ಧನಿರಲಿಲ್ಲ. ಅದರಿಂದಾಗಿ ಸಂಘರ್ಷ ಅನಿವಾರ್ಯವಾಯಿತು. ಸರ್ವ ರೀತಿಯ ಶಸ್ತ್ರಸಜ್ಜಿತ ಸಂಘರ್ಷ!

ಸ್ತ್ರೀಯರು ಮತ ಪ್ರದರ್ಶನ ಮತ್ತು ಮುಷ್ಕರಗಳ ಹಾದಿ ಹಿಡಿದರು. ಸಾರ್ವಜನಿಕ ವೇದಿಕೆಗಳೇರಿ ಭಾಷಣ ಮಾಡಿದರು. ಪತ್ರಿಕೆ ಮತ್ತು ಪ್ರಕಾಶನಗಳ ಮೂಲಕ ತಮ್ಮ ಬೇಡಿಕೆಗಳನ್ನು ಸಮರ್ಥವಾಗಿ ಮುಂದಿಟ್ಟರು. ದೌರ್ಜನ್ಯಗಳ ಮೂಲೋತ್ಪಾಟನೆಗೆ ಕಾನೂನು ನಿರ್ಮಾಣದಲ್ಲಿ ಭಾಗಿಯಾಗಬೇಕೆಂದು ಸ್ತ್ರೀಯರು ಮನಗಂಡರು. ತರುವಾಯ ಮತದಾನದ ಹಕ್ಕಿಗಾಗಿ ಕೂಗೆಬ್ಬಿಸಿದರು. ಅದು ಸ್ವಾಭಾವಿಕವಾಗಿ ಅದರ ಮುಂದಿನ ಹಂತಕ್ಕೆ ವ್ಯಾಪಿಸಿತು. ಪಾರ್ಲಿಮೆಂಟಿನಲ್ಲಿ ಪ್ರಾತಿನಿಧ್ಯ ಸಿಗಬೇಕೆಂಬ ಗದ್ದಲ ಆರಂಭಿಸಿದರು. ಪುರುಷ ಕಲಿತ ಹಾದಿಯನ್ನೇ ಅವಳೂ ಕಲಿತಳು. ಆತ ಮಾಡುತ್ತಿದ್ದ ಕೆಲಸವನ್ನೇ ಆಕೆ ಮಾಡುತ್ತಿದ್ದಳು. ಸ್ವಾಭಾವಿಕವಾಗಿ ಉದ್ಯೋಗ ರಂಗಗಳಲ್ಲಿಯೂ ಪ್ರಾತಿನಿಧ್ಯದ ಹೋರಾಟ ಆರಂಭಿಸಿದರು.

ಇದು ಐರೋಪ್ಯ ಮಹಿಳೆಯ 'ಹಕ್ಕು ಹೋರಾಟ'ಗಳ ಕಥೆ. ಪರಸ್ಪರ ಹೆಣೆದು ಕೊಂಡಿರುವ ಸುದೀರ್ಘವಾದ ಹೋರಾಟ ಪರಂಪರೆಯ ಇತಿಹಾಸ. ಅದರ ಪ್ರತಿಯೊಂದು ಕೊಂಡಿಯೂ ಇನ್ನೊಂದರ ಅನಿವಾರ್ಯ ಮತ್ತು ಸ್ವಯಂಚಾಲಿತ ಆರಂಭವಾಗಿತ್ತು.

ಪುರುಷನನ್ನು ನಾಯಕತ್ವದಿಂದಲೂ ಅಧಿಕಾರದಿಂದಲೂ ಉಚ್ಚಾಟಿಸಿದ ಸ್ತ್ರೀಯು, ಆ ದುರ್ಬಲ ಸಮಾಜದಲ್ಲಿ ತಾನು ಅಸಹಾಯಕಳೆಂಬುದನ್ನು ಬೇಗನೆ ಮನಗಂಡಳು.[1]

ಸ್ತ್ರೀಯು ಮಾನವ ಜೀವಿಯೆಂಬುದು ಇಸ್ಲಾಮಿನಲ್ಲಿ ಒಂದು ಮೂಲಭೂತ ವಾಸ್ತವಿಕತೆಯಾಗಿದೆ. ಪುರುಷನಲ್ಲಿರುವಂತಹ ಮಾನವ ಆತ್ಮವೇ ಸ್ತ್ರೀಯಲ್ಲಿಯೂ ಇರುವುದು. "ಮನುಷ್ಯರೇ! ನಿಮ್ಮ ಪ್ರಭುವಿನ ಭಯವಿರಿಸಿಕೊಳ್ಳಿರಿ. ಆತನು ನಿಮ್ಮನ್ನು ಒಂದೇ ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಸಂಗಾತಿಯನ್ನು ಸೃಷ್ಟಿಸಿದನು. ಅನಂತರ ಅವರೆಡರಿಂದ ಅನೇಕ ಸ್ತ್ರೀ-ಪುರುಷರನ್ನು (ಭೂಮುಖದ ಮೇಲೆ) ಹರಡಿದವನೂ ಆಗಿರುತ್ತಾನೆ." (ಅನ್ನಿಸಾ: 1)

ಹೌದು, ಮೂಲ ಸಾರ, ಆದಿ ಮತ್ತು ಅಂತ್ಯಗಳಲ್ಲಿ ಸ್ತ್ರೀ-ಪುರುಷರು ಸಂಪೂರ್ಣ ಸಾಮ್ಯತೆ ಹೊಂದಿದ್ದಾರೆ. ಮಾನವ ಜೀವಿಯೆಂಬ ನೆಲೆಯಲ್ಲಿ ಅವರು ಸಂಪೂರ್ಣ ಸಮಾನರಾಗಿದ್ದಾರೆ. ಆದ್ದರಿಂದಲೇ ಮಾನವೀಯತೆಗೆ ಸಂಬಂಧಿಸಿದ ಎಲ್ಲ ಹಕ್ಕುಗಳ ಅರ್ಹತೆಯೂ ಸಮಾನವಾಗಿದೆ. ರಕ್ತ, ಮಾನ, ಸಂಪತ್ತು, ಪಾವಿತ್ರ್ಯ ಹಾಗೂ ಅವುಗಳಿಗೆ ಸಂಬಂಧಿಸಿದ ಹಕ್ಕುಗಳಲ್ಲಿಯೂ ಅವರು ವರ್ಗ ಭೇದವಿಲ್ಲದೇ ಸಮಾನರಾಗಿದ್ದಾರೆ:

"ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಪರಿಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನೂ ಪರಿಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಪರಸ್ಪರರನ್ನು ನಿಂದಿಸಬೇಡಿರಿ ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ." (ಅಲ್ ಹುಜುರಾತ್:11)

"(ಪರಸ್ಪರ) ದೋಷಾನ್ವೇಷಣೆ ಮಾಡದಿರಿ. ನಿಮ್ಮಲ್ಲಿಯೂ ಯಾರ ಬಗ್ಗೆಯೂ ಪರದೂಷಣೆ ಮಾಡಬಾರದು." (ಅಲ್ ಹುಜುರಾತ್: 12)

"ಓ ಸತ್ಯವಿಶ್ವಾಸಿಗಳೇ! ನಿಮ್ಮ ಮನೆಗಳ ಹೊರತು ಇತರರ ಮನೆಯೊಳಗೆ (ಅವರ) ಸಮ್ಮತಿ ಪಡೆಯದೆ ಹಾಗೂ ಮನೆಯವರಿಗೆ ಸಲಾಮ್ ಹೇಳದೆ ಪ್ರವೇಶಿಸಬೇಡಿ" (ಅನ್ನೂರ್: 27)

---

1. ಇದು ಇತಿಹಾಸದ ಲೌಕಿಕ ವಿಮರ್ಶಕರ ಇನ್ನೊಂದು ವಾದವಾಗಿದೆ. ಆರ್ಥಿಕ ಅಂಶವೇ ಜೀವನದ ನಿಯಾಮಕ ಶಕ್ತಿ. ಕೇವಲ ಅದರಿಂದಲೇ ಸ್ತ್ರೀ ಸ್ವಾತಂತ್ರ್ಯ ಸಮಸ್ಯೆಯು ಈ ಮಟ್ಟಕ್ಕೆ ತಲಪಿದೆ. ಆರ್ಥಿಕತೆಯ ಪ್ರಾಮುಖ್ಯವನ್ನು ನಾವಿಲ್ಲಿ ಅಲ್ಲಗಳೆಯುವುದಿಲ್ಲ. ಆದರೆ ಹೀಗೆ ಸಂಭವಿಸುವುದು ಅನಿವಾರ್ಯವಾಗಿರಲಿಲ್ಲವೆಂದಷ್ಟೆ ನಾವು ಹೇಳುವುದು. ಇಸ್ಲಾಮಿನಂತೆಯೇ, ಎಲ್ಲ ಪರಿಸ್ಥಿತಿಯಲ್ಲಿಯೂ ಸ್ತ್ರೀಯರ ಸಂರಕ್ಷಣೆಯನ್ನು ಪುರುಷನ ಕರ್ತವ್ಯವಾಗಿ ನಿರ್ಣಯಿಸುವ, ಸಮಾನ ಕೆಲಸಕ್ಕೆ ಸಮಾನ ವೇತನ ನೀಡುವ, ವಿಶಿಷ್ಟ ಸಂದರ್ಭಗಳಲ್ಲಿ ಬಹುಪತ್ನಿತ್ವಕ್ಕೆ ಮನ್ನಣೆ ನೀಡುವ ಹಾಗೂ ಲೈಂಗಿಕ ಸಮಸ್ಯೆಗಳಿಗೆ ಸೂಕ್ತ ಪರಿಹಾರ ನೀಡುವಂತಹ ಆದರ್ಶವು ಅಲ್ಲಿರುತ್ತಿದ್ದರೆ ಹೀಗಾಗುತ್ತಿರಲಿಲ್ಲ. ಹಾಗಿದ್ದರೆ ಸ್ತ್ರೀಯು ತನ್ನ ಬೇಡಿಕೆಗಳ ಈಡೇರಿಕೆಗಾಗಿ ಹೋರಾಟ ನಡೆಸುವ ಅಗತ್ಯವಿರುತ್ತಿರಲಿಲ್ಲ. ಸರ್ವಸ್ವವನ್ನೂ ಆಕೆ ಬಲಿಯರ್ಪಿಸಬೇಕಾಗಿರಲಿಲ್ಲ.

"ಓರ್ವ ಮುಸ್ಲಿಮನು ಇನ್ನೋರ್ವ ಮುಸ್ಲಿಮನ ಸರ್ವಸ್ವವನ್ನೂ ಗೌರವಿಸಬೇಕು. ಧನ, ಮಾನ, ಸಂಪತ್ತು ಹೀಗೆ ಎಲ್ಲವನ್ನೂ" (ಬುಖಾರಿ, ಮುಸ್ಲಿಮ್)

ಉಭಯ ವಿಭಾಗಗಳಿಗೂ ಪರಲೋಕದಲ್ಲಿ ದೊರೆಯುವ ಪ್ರತಿಫಲವು ಸಮಾನವಾಗಿರುವುದು.

"...ಅವರ ಪ್ರಭು ಹೇಳಿದನು: "ನಾನು ನಿಮ್ಮಲ್ಲಿ ಯಾರೊಬ್ಬನ ಕರ್ಮವನ್ನೂ ನಿಷ್ಫಲಗೊಳಿಸುವವನಲ್ಲ. ಪುರುಷನಾಗಲಿ ಸ್ತ್ರೀಯರಾಗಿರಲಿ ನೀವೆಲ್ಲ ಒಂದೇ ವರ್ಗದವರು..." (ಆಲಿ ಇಮ್ರಾನ್: 195)

ಉಭಯ ವರ್ಗಗಳಿಗೂ ಭೂಮಿಯಲ್ಲಿ ಅವರ ಮಾನವೀಯ ಅಸ್ತಿತ್ವಕ್ಕೆ ಮನ್ನಣೆ ನೀಡಲಾಗಿದೆ. ಒಡೆತನ ಹಕ್ಕು, ಸಾಲ, ಅಡವು, ಬಾಡಿಗೆ, ವಕ್ಫ್, ವ್ಯಾಪಾರ, ಮಾರಾಟ, ಮುಂತಾದ ವ್ಯಾವಹಾರಿಕ ರಂಗಗಳು ಸಮಾನವಾಗಿ ಅನುಮತಿಸಲ್ಪಟ್ಟಿವೆ. "ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಪುರುಷರಿಗೆ ಪಾಲಿದೆ. ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋದ ಸಂಪತ್ತಿನಲ್ಲಿ ಸ್ತ್ರೀಯರಿಗೂ ಪಾಲಿದೆ." (ಅನ್ನಿಸಾ:7)

"ಪುರುಷರು ಗಳಿಸಿದುದಕ್ಕನುಸಾರವಾದ ಪಾಲು ಅವರಿಗಿದೆ. ಸ್ತ್ರೀಯರು ಗಳಿಸಿದುದಕ್ಕನುಸಾರವಾದ ಪಾಲು ಅವರಿಗಿದೆ." (ಅನ್ನಿಸಾ: 32)

ಇತ್ತೀಚೆಗಿನವರೆಗೆ 'ನಾಗರಿಕ' ಯುರೋಪು ಇಂತಹ ಯಾವೊಂದು ಹಕ್ಕನ್ನೂ ಸ್ತ್ರೀಯರಿಗೆ ನೀಡಿರಲಿಲ್ಲ. ಪತಿ, ಪುತ್ರ ಅಥವಾ ಓರ್ವ ಸಂರಕ್ಷಕ ಪುರುಷನ ಮೂಲಕವಲ್ಲದೆ ಅದು ಆಕೆಗೆ ಸಾಧ್ಯವಿರಲಿಲ್ಲ. ಅರ್ಥಾತ್, ಇಸ್ಲಾಮ್ ಆಗಮಿಸಿ 13 ಶತಮಾನಗಳು ಕಳೆದಿದ್ದರೂ, ಇಸ್ಲಾಮ್ ನೀಡಿದ ಹಕ್ಕುಗಳು ಐರೋಪ್ಯ ಮಹಿಳೆಗೆ ಲಭ್ಯವಾಗಿರಲಿಲ್ಲ. ತರುವಾಯ ಆಕೆಯು ಅದನ್ನು ಸುಲಭದಲ್ಲಿ ಗಳಿಸಲಿಲ್ಲ. ಅದಕ್ಕಾಗಿ ಆಕೆಯು ತನ್ನ ಚಾರಿತ್ರ್ಯ, ಅಭಿಮಾನ ಮತ್ತು ಸೌಂದರ್ಯವನ್ನು ಕಾಪಾಡಲಾಗಲಿಲ್ಲ ಮಾತ್ರವಲ್ಲ, ಅವೆಲ್ಲವನ್ನೂ ಆಕೆ ಪಣವಿಡಬೇಕಾಯಿತು. ಯಾತಕ್ಕಾಗಿ? ಇತರೆಲ್ಲಾ ವ್ಯವಹಾರಗಳಂತೆಯೇ ಸ್ವಯಂಪ್ರೇರಿತರಾಗಿ ಹಾಗೆ ಮಾಡಬೇಕಾಯಿತು. ಆರ್ಥಿಕ ಪರಿಸ್ಥಿತಿಯ ಸಂಘರ್ಷದ ಒತ್ತಡವು ಅದಕ್ಕೆ ಪ್ರೇರಕವಾಗಿರಲಿಲ್ಲ. ಬದಲಾಗಿ ಚಿರಂತನ ಸತ್ಯ ಮತ್ತು ಶಾಶ್ವತ ನ್ಯಾಯಪ್ರಜ್ಞೆಯನ್ನು ಸಾಕ್ಷಾತ್ಕರಿಸುವ ಆಕಾಂಕ್ಷೆಯಿಂದ ಅರ್ಥಾತ್ ಇಸ್ಲಾಮ್ ಸಾಕ್ಷಾತ್ಕರಿಸಿದ ಸತ್ಯವನ್ನು ಸಾಧಿಸುವ ಸಹಜ ಹಂಬಲದಿಂದ!

ಸಾಮಾನ್ಯವಾಗಿ ಪಾಶ್ಚಾತ್ಯ ಲೋಕವು, ವಿಶೇಷತಃ ಕಮ್ಯೂನಿಝಮ್ ಮಾನವೀಯ ಅಸ್ತಿತ್ವವನ್ನು ಆರ್ಥಿಕ ಅಸ್ತಿತ್ವವೆಂದು ಪರಿಗಣಿಸುತ್ತದೆ. ಸ್ತ್ರೀಗೆ ಅಸ್ತಿತ್ವವೇ ಇರಲಿಲ್ಲವೆಂದು ಅವರು ಹೇಳುತ್ತಾರೆ ಅಥವಾ ತನ್ನ ಸ್ವಾಮ್ಯದಲ್ಲಿರುವುದನ್ನು ವ್ಯವಹರಿಸುವ ಅಧಿಕಾರವೂ ಇರಲಿಲ್ಲ. ಆರ್ಥಿಕ ಸ್ವಾತಂತ್ರ್ಯ ಲಭ್ಯವಾದಾಗ ಅರ್ಥಾತ್, ಪುರುಷನಿಂದ ಪ್ರತ್ಯೇಕವಾಗಿ,

ಸ್ವಯಂ ವ್ಯವಹರಿಸುವ ಮತ್ತು ಸ್ವತಂತ್ರವಾಗಿ ಜೀವನ ನಿರ್ವಹಿಸುವ ಒಡೆತನದ ಹಕ್ಕು ಲಭ್ಯವಾದಾಗ ಮಾತ್ರ, ಆಕೆಯು ಮಾನವ ಜೀವಿಯೆಂದು ಪರಿಗಣಿಸಲ್ಪಟ್ಟಳು.

ಮಾನವ ಜೀವನವನ್ನು ಈ ಸಂಕುಚಿತ ವಲಯದಲ್ಲಿ ಬಂಧಿಸುವ ಮತ್ತು ಅದನ್ನು ಕೇವಲವೊಂದು ಆರ್ಥಿಕ ಘಟಕವೆಂದು ಪರಿಗಣಿಸುವುದನ್ನು ನಾವು ವಿರೋಧಿಸುತ್ತೇವಾದರೂ-ತಾತ್ವಿಕವಾಗಿ ಆತ್ಮಪ್ರಜ್ಞೆ ಮತ್ತು ಭಾವನೆಗಳನ್ನು ಮೂಡಿಸುವ ನಿಟ್ಟಿನಲ್ಲಿ ಆರ್ಥಿಕ ಸ್ವಾತಂತ್ರ್ಯದ ಪಾತ್ರದ ಬಗ್ಗೆ ನಾವು ಅವರೊಂದಿಗೆ ಸಹಮತ ಹೊಂದಿದ್ದೇವೆ.

ಸ್ತ್ರೀಗೆ ಸ್ವತಂತ್ರ ಆರ್ಥಿಕ ಅಸ್ತಿತ್ವವನ್ನು ನೀಡಿರುವ ಇಸ್ಲಾಮಿಗೆ, ಆ ಬಗ್ಗೆ ಹೆಮ್ಮೆಪಡುವ ಸಂಪೂರ್ಣ ಹಕ್ಕಿದೆ. ಯಾರ ಮಧ್ಯಸ್ಥಿಕೆ ಅಥವಾ ಹಸ್ತಕ್ಷೇಪವಿಲ್ಲದೆಯೇ ಸ್ವಯಂ ಸಂಪಾದಿಸುವ, ವ್ಯವಹರಿಸುವ ಮತ್ತು ನೇರವಾಗಿ ಸಮಾಜದಲ್ಲಿ ವಹಿವಾಟು ನಡೆಸುವ ಹಕ್ಕನ್ನು ಇಸ್ಲಾಮ್ ಆಕೆಗೆ ನೀಡುತ್ತದೆ.

ಇಸ್ಲಾಮ್ ಸ್ತ್ರೀಯ ಅಸ್ತಿತ್ವವನ್ನು ಕೇವಲ ಒಡೆತನದ ಹಕ್ಕಿನ ವಿಷಯದಲ್ಲಿ ಮಾತ್ರ ಅಂಗೀಕರಿಸಿದ್ದಲ್ಲ. ಅವಳ ಜೀವನಕ್ಕೆ ಸಂಬಂಧಿಸಿದ ಸುಪ್ರಧಾನವಾದ ವೈವಾಹಿಕ ಸಮಸ್ಯೆಗಳಲ್ಲಿಯೂ ಇಸ್ಲಾಮ್ ಆಕೆಯ ಅಸ್ತಿತ್ವವನ್ನು ಅಂಗೀಕರಿಸಿತು. ಇಸ್ಲಾಮೀ ನೀತಿಯಂತೆ, ಸ್ತ್ರೀಯ ಒಪ್ಪಿಗೆಯಿಲ್ಲದೇ ಆಕೆಯ ವಿವಾಹ ಮಾಡಿಸಬಾರದು. ಆಕೆ ಒಪ್ಪದಿದ್ದರೆ ಆ ವಿವಾಹವು ಸಿಂಧುವಾಗಲಾರದು. "ವಿಧವೆಯನ್ನು, ಆಕೆಯ ಒಪ್ಪಿಗೆಯಿಲ್ಲದೇ ವಿವಾಹ ಮಾಡಿಸಬಾರದು, ಕನ್ಯೆಯನ್ನು ಆಕೆಯ ಒಪ್ಪಿಗೆಯಿಲ್ಲದೇ ವಿವಾಹ ಮಾಡಿಸಬಾರದು. ಆಕೆಯ ಮೌನವು ಸಮ್ಮತಿಯಾಗಿದೆ" (ಬುಖಾರಿ-ಮುಸ್ಲಿಮ್) ತಾನು ಒಪ್ಪಿಲ್ಲವೆಂದು ಆಕೆ ಬಹಿರಂಗಪಡಿಸಿದರೆ ಆ ಸಂಬಂಧವು ಅಸಿಂಧುವಾಗುವುದು.

ಇಸ್ಲಾಮೇತರ ಪದ್ಧತಿಗಳಲ್ಲಿ, ಸ್ತ್ರೀಯು ತನಗಿಷ್ಟವಿಲ್ಲದ ವಿವಾಹದಿಂದ ತಪ್ಪಿಸಿಕೊಳ್ಳಬೇಕಾದರೆ ವಕ್ರ ಮಾರ್ಗಗಳನ್ನು ಅವಲಂಬಿಸಬೇಕಾಗಿತ್ತು.

ಯಾಕೆಂದರೆ, ಕಾನೂನು ಅಥವಾ ನಾಡ ಸಂಪ್ರದಾಯವು ಅವಳಿಗೆ ಆ ಹಕ್ಕನ್ನು ನೀಡಿರಲಿಲ್ಲ. ಆದರೆ, ಇಸ್ಲಾಮ್ ಈ ಅನಿಷೇಧ್ಯ ಹಕ್ಕನ್ನು ಆಕೆಗೆ ನೀಡಿತು. ಅಗತ್ಯ ಕಂಡಾಗ ಆಕೆಯು ಪ್ರಸ್ತುತ ಹಕ್ಕನ್ನು ಚಲಾಯಿಸಬಹುದಾಗಿತ್ತು.[1] ಮಾತ್ರವಲ್ಲದೇ ಆಕೆಯೇ ಸ್ವತಃ ವಿವಾಹ ಪ್ರಸ್ತಾಪ ಮಾಡಬಹುದು. ಇಸ್ಲಾಮ್ ಮನ್ನಣೆ ನೀಡಿದ್ದ ಈ

---

1. ಪ್ರಾಯಶಃ ಇಂದಿನ ಸಾಮಾಜಿಕ-ಆರ್ಥಿಕ ಹಿನ್ನೆಲೆಯಲ್ಲಿ, ಪ್ರಚಲಿತ ಸಂಪ್ರದಾಯಗಳ ಮುಂದೆ ಮತ್ತು ಈ ಹಕ್ಕು ಕೇವಲ ಮಿಥ್ಯವೆಂದು ಭಾಸವಾಗಬಹುದು. ಆದರೆ ಇಸ್ಲಾಮೀ ಪದ್ಧತಿಗೆ ವಿರುದ್ಧವಾದ ಮತ್ತು ಅದರ ಕಾನೂನುಗಳನ್ನು ಅವ್ಯಾವಹಾರಿಕಗೊಳಿಸುವ ಪರಿಸ್ಥಿತಿಗಳಿಗೆ ಇಸ್ಲಾಮ್ ಹೊಣೆಯಲ್ಲ. ಇಸ್ಲಾಮಿನ ಆರಂಭ ಹಂತದಲ್ಲಿ ಸ್ತ್ರೀಯು ತನ್ನ ಈ ಹಕ್ಕನ್ನು ಚಲಾಯಿಸಿದ್ದಳು. ಪ್ರವಾದಿ(ಸ) ಮತ್ತು ಖಲೀಫರು(ರ) ಅದಕ್ಕೆ ಮನ್ನಣೆ ನೀಡಿದ್ದರು. ಅದರ ಮುಂದಿರುವ ಆತಂಕಗಳನ್ನು ನಿವಾರಿಸಬೇಕೆಂದು ನಾವು ವಾದಿಸುತ್ತಿದ್ದೇವೆ. ಆ ಆತಂಕಗಳು ಆರ್ಥಿಕ-ಸಾಮಾಜಿಕ ಪದ್ಧತಿಯಾಗಿದ್ದರೂ ಇಸ್ಲಾಮೇತರ ಸಂಪ್ರದಾಯಗಳಾಗಿದ್ದರೂ ಸರಿಯೆ.

ಕ್ಕಿಗೆ ಯುರೋಪಿನಲ್ಲಿ 20ನೇ ಶತಮಾನದಲ್ಲಷ್ಟೇ ಅಂಗೀಕಾರ ದೊರೆಯಿತು. ಆದರೂ ಯುಗಾಂತರಗಳಿಂದ ನಡೆದು ಬಂದ ಹೇಯ ಸಂಪ್ರದಾಯದ ಮೇಲೆ ನಾವು ಸಾಧಿಸಿದ ಮಹಾ ವಿಜಯವೆಂದು ಅದನ್ನು ಅವರು ಡಂಗುರ ಸಾರುತ್ತಿದ್ದಾರೆ!

ಲೋಕವು ಅಜ್ಞಾನಾಂಧಕಾರದಲ್ಲಿ ಪರದಾಡುತ್ತಿದ್ದ ಕಾಲದಲ್ಲಿಯೇ, ಇಸ್ಲಾಮ್ ಮಾನವ ಜೀವಕ್ಕೆ ನೀಡಿದ ಬೆಲೆಯು ಎಷ್ಟೊಂದು ಉನ್ನತವಾಗಿತ್ತು! ಜ್ಞಾನ ಮತ್ತು ಜ್ಞಾನ ಸಂಪಾದನೆಯು ಮಾನವನ ಅನಿವಾರ್ಯತೆಯಾಗಿ, ಪ್ರತಿಯೊಬ್ಬ ವ್ಯಕ್ತಿಯ ಕಡ್ಡಾಯ ಕರ್ತವ್ಯವಾಗಿ ಇಸ್ಲಾಮ್ ನಿರ್ಣಯಿಸಿತು. ವಿದ್ಯಾಭ್ಯಾಸವು ಮಾನವಕುಲದ ಕಡ್ಡಾಯ ಕರ್ತವ್ಯವಾಗಿ ಅಂಗೀಕರಿಸಲ್ಪಟ್ಟಿತು. ಮಾತ್ರವಲ್ಲ, ಇದು ದೇವವಿಶ್ವಾಸದ ಅಂಶ ಮತ್ತು ಉಪಾಧಿಯೆಂದು ಪರಿಗಣಿಸಲ್ಪಟ್ಟಿತು. ಇಲ್ಲಿ ಇತಿಹಾಸದಲ್ಲಿ ಪ್ರಥಮವಾಗಿ ಸ್ತ್ರೀಯನ್ನು ಮಾನವಜೀವಿಯಾಗಿ ಪರಿಗಣಿಸಿದ ಪದ್ಧತಿಯೆಂಬ ನೆಲೆಯಲ್ಲಿಯೂ ಇಸ್ಲಾಮ್ ಹೆಮ್ಮೆ ಪಡಬಹುದಾಗಿದೆ. ಜ್ಞಾನ ಸಂಪಾದಿಸದೆ ಆ ಮಾನವ ಜೀವವು ಸಂಪೂರ್ಣವಾಗದು. ಆ ವಿಷಯದಲ್ಲಿ ಸ್ತ್ರೀ-ಪುರುಷರು ಸಮಾನರು. ವಿದ್ಯಾಭ್ಯಾಸವು ಪುರುಷನಂತೆಯೇ ಸ್ತ್ರೀಗೂ ಕಡ್ಡಾಯವಾಗಿದೆ. ಬೌದ್ಧಿಕ ವಿಕಾಸದ ಆಹ್ವಾನವನ್ನು ಇಸ್ಲಾಮ್ ಆಕೆಗೂ ನೀಡಿತು. ಆದರೆ, ಯೂರೋಪಿನಲ್ಲಿ ಇತ್ತೀಚೆಗಿನ ತನಕ ಆಕೆಗೆ ಆ ಹಕ್ಕನ್ನು ನೀಡಿರಲಿಲ್ಲ. ಕಟ್ಟಕಡೆಗೆ ಅನಿವಾರ್ಯ ಪರಿಸ್ಥಿತಿಗಳ ಒತ್ತಡದಿಂದಾಗಿ ಅದನ್ನು ಅನುಮತಿಸಲಾಯಿತು.

******

ಇದರಿಂದ ಇಸ್ಲಾಮ್ ಸ್ತ್ರೀಗೆ ನೀಡಿರುವ ಗೌರವವನ್ನು ಗ್ರಹಿಸಬಹುದು. ಪೂರ್ವೋಕ್ತ ರಂಗಗಳಲ್ಲಿ ಇಸ್ಲಾಮ್ ಸ್ತ್ರೀಯನ್ನು ದ್ವಿತೀಯ ವರ್ಗದ ಸೃಷ್ಟಿ ಅಥವಾ ಪರಾವಲಂಬಿತ ಸೃಷ್ಟಿಯೆಂದು ಭಾವಿಸಿದೆಯೆಂದು ಯಾರೂ ವಾದಿಸಲಾರರು. ಜೀವನದಲ್ಲಿ ಆಕೆಯು ನಿರ್ವಹಿಸಬೇಕಾದ ಪಾತ್ರವನ್ನು ಅದು ಕಡೆಗಣಿಸುವುದಿಲ್ಲ. ಹಾಗಿರುತ್ತಿದ್ದರೆ ಅದು ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರಾಧಾನ್ಯ ನೀಡುತ್ತಿರಲಿಲ್ಲ. ವಿದ್ಯಾಭ್ಯಾಸವು ವೈಶಿಷ್ಟ್ಯಪೂರ್ಣ ಮಹತ್ವವನ್ನು ಹೊಂದಿದೆ. ಇಸ್ಲಾಮಿನಲ್ಲಿ ಸ್ತ್ರೀಯರ ಸ್ಥಾನಮಾನವೇನೆಂದು ತಿಳಿಯಲು, ಇತರೆಲ್ಲಾ ವಿಷಯಗಳಂತಿರಲಿ, ಕೇವಲ ಅದು ಸ್ತ್ರೀ ವಿದ್ಯಾಭ್ಯಾಸಕ್ಕೆ ನೀಡಿರುವ ಪ್ರಾಧಾನ್ಯವೇ ಧಾರಾಳ ಸಾಕು. ಅದು ದೇವ ಮತ್ತು ಮಾನವನ ಬಳಿ ಬಹಳ ಗೌರವಾರ್ಹ ಸ್ಥಾನವಷ್ಟೆ.

ಮಾನವೀಯ ಅಸ್ತಿತ್ವ ಮತ್ತು ಅದಕ್ಕೆ ಸಂಬಂಧಿಸಿದ ಹಕ್ಕುಗಳಲ್ಲಿಯೂ ಸ್ತ್ರೀ-ಪುರುಷರ ಸಮಾನತೆಯನ್ನು ಅಂಗೀಕರಿಸಿದ ಬಳಿಕ, ಕೆಲವು ವಿಶಿಷ್ಟ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ಅವರೀರ್ವರಲ್ಲಿಯೂ ಇಸ್ಲಾಮ್ ಅಂತರವನ್ನು ಕಲ್ಪಿಸಿದೆ. ಅದನ್ನು ಎತ್ತಿ ಹಿಡಿದು ಸ್ತ್ರೀ ಸ್ವಾತಂತ್ರ್ಯದ ಪ್ರಾಯೋಜಕರು ಕೂಗೆಬ್ಬಿಸುತ್ತಿದ್ದಾರೆ. ಕೆಲವು ಯುವಕರೂ ಬರೆಹಗಾರರೂ 'ಸುಧಾರಕರೂ' ಅವರನ್ನು ಬೆಂಬಲಿಸುತ್ತಿದ್ದಾರೆ.

ಸ್ತ್ರೀ-ಪುರುಷರ ಮಧ್ಯೆ ಇಸ್ಲಾಮ್ ತೋರುವ ವ್ಯತ್ಯಾಸವನ್ನು ಚರ್ಚಿಸುವುದಕ್ಕಿಂತ ಮುಂಚಿತವಾಗಿ ಈ ಬಗ್ಗೆ ದೇಹಶಾಸ್ತ್ರ, ಜೀವಶಾಸ್ತ್ರ ಮತ್ತು ಮನಃಶಾಸ್ತ್ರಗಳಲ್ಲಿರುವ ಮೂಲಭೂತ ಸಿದ್ಧಾಂತವನ್ನು ನಾವು ಪರಿಶೀಲಿಸೋಣ. ತರುವಾಯ ಇಸ್ಲಾಮೀ ದೃಷ್ಟಿಕೋನವನ್ನು ವಿಶ್ಲೇಷಿಸೋಣ.

ಸ್ತ್ರೀ-ಪುರುಷರು ಒಂದೇ ವರ್ಗವೇ ಅಥವಾ ಎರಡು ವರ್ಗಗಳೇ? ಈರ್ವರ ನೀತಿಯು ಒಂದೇ ಅಥವಾ ಎರಡೇ? ಎಂಬುದು ಪ್ರಶ್ನೆಯ ಸಾರ.

ಸ್ತ್ರೀ-ಪುರುಷರ ಮಧ್ಯೆ ದೇಹ ರಚನೆ, ಮಾನಸಿಕ ಸ್ಥಿತ್ಯಂತರ ಮತ್ತು ಜೈವಿಕ ನೀತಿಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲವೆಂದು 'ಸ್ತ್ರೀ ಸ್ವಾತಂತ್ರ್ಯ'ವಾದಿಗಳು ಹೇಳುವುದಿದ್ದರೆ, ನಮಗೇನೂ ಹೇಳಲಿಕ್ಕಿಲ್ಲ. ಹಾಗಲ್ಲವೆಂದಾದರೆ ಅಥವಾ ಆ ವ್ಯತ್ಯಾಸಗಳನ್ನು ಅಂಗೀಕರಿಸುವುದಿದ್ದರೆ ಆ ಬಗ್ಗೆ ಅವರೊಂದಿಗೆ ಚರ್ಚೆ ನಡೆಸುವುದಕ್ಕೆ ಅರ್ಥವಿದೆ.

ಸ್ತ್ರೀ-ಪುರುಷ ಸಮಾನತೆಯ ಕುರಿತು "ಮಾನವ: ಇಸ್ಲಾಮ್ ಮತ್ತು ಲೌಕಿಕತೆಯ ಮಧ್ಯೆ" ಎಂಬ ನನ್ನ ಕೃತಿಯ 'ಲೈಂಗಿಕ- ಸಮಸ್ಯೆ' ಎಂಬ ಸುದೀರ್ಘ ಅಧ್ಯಾಯದಲ್ಲಿ ನಾನು ಸವಿವರವಾಗಿ ಪ್ರತಿಪಾದಿಸಿದ್ದೇನೆ. ಅದರ ಕೆಲವು ವಾಕ್ಯಗಳನ್ನು ನಾನಿಲ್ಲಿ ಉಲ್ಲೇಖಿಸುತ್ತೇನೆ:

"…. ನೀತಿ ಮತ್ತು ಧ್ಯೇಯಗಳಲ್ಲಿರುವ ಈ ತೀವ್ರ ಅಂತರದಿಂದಾಗಿ ಸ್ತ್ರೀ-ಪುರುಷರ ನೈಸರ್ಗಿಕತೆಯೂ ವಿಭಿನ್ನವಾಗಿದೆ. ಇದು ನಿಸರ್ಗವು ಅವರಿಗಾಗಿ ನಿರ್ಣಯಿಸಿದ ಮೂಲ ಬೇಡಿಕೆಗಳ ನಿರ್ವಹಣೆಗಾಗಿದೆ. ಪ್ರತಿಯೋರ್ವರಿಗೂ ತಂತಮ್ಮ ನೀತಿ ನಿರ್ವಹಣೆಗೆ ಅನುಕೂಲವಾದ ರೂಪ, ವಿನ್ಯಾಸ ಮತ್ತು ಸಾಮರ್ಥ್ಯ ನೀಡಲ್ಪಟ್ಟಿದೆ."

"ಆದ್ದರಿಂದಲೇ, ಅವರ ಮಧ್ಯೆ ಯಾಂತ್ರಿಕ ಸಮಾನತೆಯನ್ನು ಅಪೇಕ್ಷಿಸುವ ಈ ಬೂಟಾಟಿಕೆಯ ಅರ್ಥವನ್ನು ನನ್ನಿಂದ ಗ್ರಹಿಸಲಾಗಿಲ್ಲ. ಮಾನವೀಯ ಸಮಾನತೆಯೆಂಬುದು ಸ್ವಾಭಾವಿಕವಾಗಿದ್ದು, ಸುಲಭ ಗ್ರಾಹ್ಯವಾದ ಬೇಡಿಕೆಯೂ ಆಗಿದೆ. ಸ್ತ್ರೀ-ಪುರುಷರು ಮಾನವ ವರ್ಗದ ಎರಡು ಅಂಗಗಳಾಗಿದ್ದಾರೆ. ಒಂದೇ ಆತ್ಮದ ಎರಡು ಅಂಶಗಳು. ಆದರೆ, ಜೀವನದ ಎಲ್ಲ ಕ್ರಿಯೆಗಳಲ್ಲಿಯೂ ಅವರ ಮಧ್ಯೆ ಸಮಾನತೆ ಪಾಲಿಸಬೇಕೆಂದು ಒತ್ತಾಯಿಸಿದರೆ, ಅದನ್ನು ಕಾರ್ಯಗತಗೊಳಿಸುವುದು ಹೇಗೆ? ಲೋಕದ ಸ್ತ್ರೀಯರೆಲ್ಲರೂ ಸರ್ವಾನುಮತದಿಂದ ಒಂದು ಠರಾವು ಅಂಗೀಕರಿಸಿದರೂ ಅದು ಕಾರ್ಯಗತವಾದೀತೇ? ಮಾನವನ ನೈಸರ್ಗಿಕತೆಯನ್ನು ಬದಲಾಯಿಸಲು ಸಮ್ಮೇಳನ ಮತ್ತು ಠರಾವುಗಳಿಂದ ಸಾಧ್ಯವಾದೀತೇ? ಗರ್ಭಧಾರಣೆ, ಪ್ರಸವ ಮತ್ತು ಮೊಲೆಯೂಡಿಸುವುದರಲ್ಲಿ ಪುರುಷನು ಸ್ತ್ರೀತ್ವದಲ್ಲಿ ಸಹಭಾಗಿಯಾಗಲು ಸಾಧ್ಯವಿದೆಯೇ?"

"ಮಾನಸಿಕ ಮತ್ತು ದೈಹಿಕವಾದ ವಿಶಿಷ್ಟ ವ್ಯವಸ್ಥೆಯ ಹೊರತು ಜೈವಿಕ ಪ್ರತಿಕ್ರಿಯೆ

ಗಳನ್ನು ನಿರ್ವಹಿಸಲಾದೀತೇ? ಗರ್ಭಧಾರಣೆ ಮತ್ತು ಸ್ತನ ಹಾಲಿಗೆ ಒಂದು ಪ್ರತ್ಯೇಕ ವರ್ಗವನ್ನು ನಿರ್ಧರಿಸುವಾಗ ಅವರ ಮನೋಭಾವನೆ ಮತ್ತು ಮಾನಸಿಕ ಸಾಮರ್ಥ್ಯಗಳನ್ನು ಆ ಘನ ಕರ್ತವ್ಯದ ಪೂರೈಕೆಗೆ ಅನುಗುಣವಾದ ರೀತಿಯಲ್ಲಿ ಸಿದ್ಧಪಡಿಸಬೇಕಾಗಿಲ್ಲವೇ?"

"ಮಾತೃತ್ವವು ಉದಾತ್ತ ಭಾವನೆ, ಉತ್ಕೃಷ್ಟ ವರ್ತನೆ, ನಿರಂತರ ಶ್ರಮಿಸುವ ತಾಳ್ಮೆ, ಪರಿಶೀಲನೆ ಮತ್ತು ನಡವಳಿಕೆಗಳಲ್ಲಿ ಅತಿ ಕೋಮಲ ಮನೋಭಾವವನ್ನು ಒಳಗೊಂಡದ್ದಾಗಿದೆ. ಮಾತೃತ್ವದಲ್ಲಿ ಗರ್ಭಧಾರಣೆ ಮತ್ತು ಮೊಲೆಯುಣ್ಣಿಸುವ ದೇಹ ರಚನೆಯಲ್ಲಿ, ಮಾನಸಿಕ, ಬೌದ್ಧಿಕ ಮತ್ತು ಭಾವನಾತ್ಮಕ ಸಂಬಂಧವೂ ಅಡಕವಾಗಿದೆ. ಈ ಎರಡೂ ಅಂಶಗಳು ಪರಸ್ಪರ ಪೂರಕ ಮತ್ತು ಸಮ್ಮಿಳಿತವಾಗಿವೆ. ಅದರಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಿ ತೆಗೆಯಲು ಸಾಧ್ಯವಿಲ್ಲ. ಅವು ಒಂಟಿಯಾಗಿರುವುದು ಅತ್ಯಪೂರ್ವ ಅದ್ಭುತವಾಗಿರಬಹುದು".

"ಕೋಮಲ ಭಾವನೆ, ಮೃದು ಮನಸ್ಸು, ಕರುಣಾಮಯ ಹೃದಯ, ಥಕ್ಕನೆ ಪ್ರತಿಕ್ರಯಿಸುವ ಸ್ವಭಾವ... ಇತ್ಯಾದಿ ವಿಶಿಷ್ಟತೆಗಳೆಲ್ಲವೂ ಆಕೆಯ ವಿಚಾರದ ಬದಲಾಗಿ ಭಾವನೆಯ ಮಟ್ಟವನ್ನು ಉನ್ನತಗೊಳಿಸುತ್ತದೆ. ನಿರಂತರ ಹೊರ ಚಿಮ್ಮುವ ಪ್ರೀತಿ ವಾತ್ಸಲ್ಯ, ಪ್ರಥಮ ಸ್ಪರ್ಶದಲ್ಲಿಯೇ ತುಂಬಿ ಹರಿಯುವ ಭಾವಪರವಶತೆ ಇತ್ಯಾದಿಗಳು ಮಾತೃತ್ವದ ಪ್ರಾಮುಖ್ಯ ಘಟಕಗಳಾಗಿವೆ. ಶೈಶವದ ಬೇಡಿಕೆಗಳಿಗೆ ಕ್ಷಿಪ್ರ ಅಥವಾ ತಡವಾಗಿ ಪ್ರತಿಕ್ರಯಿಸುವ ಅಥವಾ ಪ್ರತಿಕ್ರಯಿಸದಿರುವ ವಿಚಾರಗಳ ಬದಲಿಗೆ ಹೆಚ್ಚು ಆಲೋಚಿಸದೆ ತಕ್ಷಣ ಸ್ಪಂದಿಸುವ ಸುಕೋಮಲ ಭಾವನೆಗಳ ಅಗತ್ಯವಿದೆ."

ಇವೆಲ್ಲವೂ ಸ್ತ್ರೀ ಸಹಜ ಗುಣವಾಗಿದ್ದು ಆಕೆಯ ನೈಜ ನೀತಿ ನಿರ್ವಹಣೆಗೆ ಅತ್ಯಗತ್ಯವಾಗಿರುವ ಉತ್ತಮ ವ್ಯವಸ್ಥೆಯಾಗಿದೆ.

ಆದರೆ ಪುರುಷನು ಸ್ತ್ರೀಗಿಂತ ಭಿನ್ನವಾದ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿದೆ. ಆದ್ದರಿಂದಲೇ ಆತನು ಭಿನ್ನ ಸ್ವಭಾವವನ್ನು ಹೊಂದಿದ್ದಾನೆ. ಬಾಹ್ಯ ಜಗತ್ತಿನ ಜೀವನ ಹೋರಾಟವೇ ಆತನ ಕರ್ತವ್ಯ. ಪ್ರಸ್ತುತ ಹೋರಾಟವು ವನ್ಯಮೃಗಗಳೊಂದಿಗಿರಬಹುದು. ಭೂಮಿ-ಆಕಾಶಗಳ ನೈಸರ್ಗಿಕ ಶಕ್ತಿಗಳ ವಿರುದ್ಧವಾಗಿರಬಹುದು. ಆಡಳಿತ ವ್ಯವಸ್ಥೆ ಅಥವಾ ಆರ್ಥಿಕ ಪದ್ಧತಿಯ ಸ್ಥಾಪನೆಗಾಗಿರುವ ಹೋರಾಟವಾಗಿರಬಹುದು. ಇವೆಲ್ಲವೂ ಆತನ ಜೀವನ ನಿರ್ವಹಣೆಗೆ ಮತ್ತು ತನ್ನನ್ನೂ ತನ್ನ ಕುಟುಂಬವನ್ನೂ ವೈರಿಗಳಿಂದ ರಕ್ಷಿಸುವುದಕ್ಕೆ ಅನಿವಾರ್ಯವಾಗಿದೆ.

ಈ ಕರ್ತವ್ಯ ನಿರ್ವಹಣೆಗೆ ಉಕ್ಕೇರುವ ಭಾವಾವೇಶವು ಪ್ರೇರಕ ಶಕ್ತಿಯಾಗಬಾರದು. ಅದು ಹಿತಕ್ಕಿಂತ ಹೆಚ್ಚು ಹಾನಿಕರವಾದೀತು.

ಭಾವನೆಗಳು ವಿರುದ್ಧ ದಿಕ್ಕುಗಳಿಗೆ ಓಲಾಡುತ್ತಿರುತ್ತದೆ. ಒಂದೇ ಕಡೆ ಸ್ಥಿರವಾಗಿರಲು

ಆದಕ್ಕೆ ಸಾಧ್ಯವಿಲ್ಲ. ಅದು ಪದೇ ಪದೇ ಬದಲಾಗುತ್ತಿರುವ ಮಾತೃತ್ವದ ಹಿತಾಸಕ್ತಿಗಳಿಗೆ ಸರಿ ಹೊಂದುತ್ತದೆ. ಯೋಜನಾಬದ್ಧ ಕಾರ್ಯಕ್ರಮದಂತೆ ಹೆಚ್ಚು ಕಾಲ ಏಕಾಗ್ರತೆಯಿಂದ ನಿರ್ವಹಿಸಬೇಕಾದ ಕಾರ್ಯಗಳಿಗೆ ಅದು ಸಾಕಾಗುವುದಿಲ್ಲ. ಅದಕ್ಕೆ ಬುದ್ಧಿಶಕ್ತಿಯ ಅಗತ್ಯವಿದೆ. ಸ್ವಾಭಾವಿಕವಾಗಿಯೂ ಸಾವಧಾನದಿಂದ ವಿಷಯವನ್ನು ಗ್ರಹಿಸಿ, ಹೆಜ್ಜೆಯಿರಿಸುವುದಕ್ಕಿಂತ ಮುಂಚೆ ಅದರ ಪರಿಣಾಮದ ಕುರಿತು ದೀರ್ಘ ದೃಷ್ಟಿಯಿಂದ ಪರಿಶೀಲಿಸಲು ಆಲೋಚನೆಯ ಅಗತ್ಯವಿದೆ. ಅದರ ಪ್ರತಿಕ್ರಿಯೆಯು ಉಕ್ಕೇರುವ ಭಾವನೆಗಿಂತ ನಿಧಾನವಾಗಿರುವುದು. ಅದರ ಸ್ವಭಾವವು ಚಂಚಲವಲ್ಲ. ಸಾಮರ್ಥ್ಯ ಮತ್ತು ಸಂಭಾವ್ಯತೆಗಳ ಬಗ್ಗೆ ಗರಿಷ್ಠವಾಗಿ ಅಂದಾಜಿಸಿ ನಿರ್ದಿಷ್ಟ ಧ್ಯೇಯ ಸಾಧನೆಗೆ ಸೂಕ್ತವಾದ ಮಾರ್ಗೋಪಾಯಗಳ ಅವಲಂಬನೆಗೆ ಬುದ್ಧಿಶಕ್ತಿ, ವಿಚಾರವೇ ಪರ್ಯಾಪ್ತವಾಗಿದೆ. ವನ್ಯಮೃಗಗಳ ಬೇಟೆ, ಯಂತ್ರಗಳ ಸಂಶೋಧನೆ, ಹೊಸ ಆರ್ಥಿಕ ಪದ್ಧತಿಯ ರಚನೆ, ಸರಕಾರ ರಚನೆ, ಯುದ್ಧ ಸನ್ನಾಹ, ಶಾಂತಿ ಸ್ಥಾಪನೆ ಇತ್ಯಾದಿ ಯಾವುದೇ ಧ್ಯೇಯ ಸಾಧನೆಗೂ ವೈಚಾರಿಕ ಕ್ರಿಯೆಯ ಅಗತ್ಯವಿದೆ. ಭಾವನೆಗಳ ಚಂಚಲತೆಯು ಅವುಗಳನ್ನು ಕೆಡಿಸುವುದು.

"ಒಟ್ಟಿನಲ್ಲಿ, ಪುರುಷನು ಆತನ ನೈಸರ್ಗಿಕ ನೀತಿ ನಿರ್ವಹಣೆಗೆ ಪೂರಕವಾದ ರಚನೆಯನ್ನು ಹೊಂದಿದ್ದಾನೆ."

"ಸ್ತ್ರೀ-ಪುರುಷರಲ್ಲಿ ನೈಸರ್ಗಿಕವಾಗಿರುವ ಬಹುತೇಕ ಅಂತರಗಳ ವಿವರಣೆಗಳು ನಮಗೆ ಇದರಿಂದ ಲಭ್ಯವಾಗುತ್ತದೆ. ಭಾವನಾತ್ಮಕ ರಂಗದಲ್ಲಿ ಒಂದು ಮಗುವಿನಂತೆ ಓಲಾಡುವ ಪುರುಷನು, ಕರ್ತವ್ಯ ನಿರ್ವಹಣೆಯ ವೇಳೆ ತನ್ನ ದೈಹಿಕ-ವೈಚಾರಿಕ ಸಾಮರ್ಥ್ಯಗಳನ್ನು ಸಾವಧಾನವಾಗಿ ಬಳಸುವ ರಹಸ್ಯವು ಇದೇ ಆಗಿದೆ. ಅದೇ ಸಂದರ್ಭದಲ್ಲಿ ಸ್ತ್ರೀಗೆ ಪುರುಷನೊಂದಿಗಿರುವ ಭಾವನಾತ್ಮಕ ಸಂಬಂಧಗಳಲ್ಲಿ ಹೆಚ್ಚಿನ ಸ್ಥಿರತೆ ಪಾಲಿಸಲು ಸಾಧ್ಯವಾಗುತ್ತದೆ. ಭಾವನಾತ್ಮಕ ಸಂಬಂಧಗಳನ್ನು ಸ್ಥಾಪಿಸಲು ಮತ್ತು ನಿಯಂತ್ರಿಸಲು ಸ್ತ್ರೀಯು ವಿಶೇಷ ಸಾಮರ್ಥ್ಯವನ್ನು ಹೊಂದಿದ್ದಾಳೆ. ಅದಕ್ಕೆ ಬೇಕಾದ ಕಾರ್ಯಕ್ರಮಗಳನ್ನು ಸಂಯೋಜಿಸಿ, ಹಿನ್ನೆಲೆಗಳನ್ನು ಸಿದ್ಧಪಡಿಸಿ, ಅದರಿಂದ ಆನಂದ ಪಡೆಯುವುದೇ ಆಕೆಯ ವರ್ತನೆ! ಹಾಗಲ್ಲದೇ ಆಕೆಯ ಸ್ವಭಾವವನ್ನು ಆಂಶಿಕವಾಗಿಯಾದರೂ ಮೆಚ್ಚಿಸದ ಕೆಲಸದಿಂದ ಆಕೆಗೆ ನೆಮ್ಮದಿ ಪಡೆಯಲು ಸಾಧ್ಯವಿಲ್ಲ; ರೋಗಿಗಳ ಶುಶ್ರೂಷೆ, ಆರೈಕೆ ಮತ್ತು ಶಿಶುಪಾಲನೆಯಂತೆ, ವ್ಯಾಪಾರೀ ಸಂಸ್ಥೆಯಲ್ಲಿ ಕೆಲಸ ಮಾಡುವಾಗಲೂ ಆಕೆಯ ಭಾವನಾತ್ಮಕ ಸ್ವಭಾವವನ್ನು ಆಂಶಿಕವಾಗಿ ಸಂತೃಪ್ತಗೊಳಿಸುವ ಒಂದು ವಿಷಯವಿದೆ; ಓರ್ವ ಜತೆಗಾರನ ಅನ್ವೇಷಣೆ. ಆದರೆ ಈ ಕೆಲಸಗಳಾವುವೂ ಆಕೆಯ ಮೂಲಭೂತ ಕರ್ತವ್ಯಕ್ಕೆ ಪರ್ಯಾಯವಾಗುವುದಿಲ್ಲ. ಅರ್ಥಾತ್, ಓರ್ವ ಯಜಮಾನ, ಮನೆ, ಕುಟುಂಬ ಮತ್ತು ಸಂತಾನಗಳನ್ನು ಹೊಂದಿರುವ ಸ್ಥಿತಿಯನ್ನು ಸಾಧಿಸುವ ಮೂಲ ಧ್ಯೇಯಕ್ಕೆ ಅವು ಪರ್ಯಾಯವಾಗುವುದಿಲ್ಲ. ಅವಳ ಈ ಮೂಲ ಕರ್ತವ್ಯಕ್ಕೆ

ಸಂದರ್ಭವೊದಗಿದಾಗ ಆಕೆ ಇತರೆಲ್ಲಾ ಕೆಲಸಗಳನ್ನು ತೊರೆಯಲು ಸಿದ್ಧಳಾಗಬಹುದು. ಕೇವಲ ಆರ್ಥಿಕ ಸಂಕಷ್ಟಗಳಿಂದ ತೀವ್ರ ಆತಂಕಗಳಷ್ಟೇ ಆಕೆಯನ್ನು ಅದರಿಂದ ತಡೆಯಬಹುದು."

"ಅಂದರೆ ಈ ಎರಡೂ ವರ್ಗಗಳಿಗೆ ಪರಸ್ಪರ ಯಾವುದೇ ಸಂಬಂಧವಿಲ್ಲವೆಂದರ್ಥವಲ್ಲ. ಹಾಗೆಯೇ ಇವರಲ್ಲಿ ಒಂದು ವರ್ಗವು ಇನ್ನೊಂದು ವರ್ಗದ ಕೆಲಸಕ್ಕೆ ಸದಾ ಯೋಗ್ಯವಲ್ಲವೆಂದೂ ಇದರರ್ಥವಲ್ಲ..."

"ಆದ್ದರಿಂದ ಉಭಯ ವರ್ಗಗಳೂ ವಿಭಿನ್ನ ನಿಷ್ಪತ್ತಿಗಳಲ್ಲಿ ಸಮಾನವಾಗಿದೆ. ಆಡಳಿತ, ನ್ಯಾಯ ತೀರ್ಮಾನ, ಹೊರೆ ಹೊರುವುದು, ಯುದ್ಧ, ಹೋರಾಟ ಇತ್ಯಾದಿಗಳ ಯೋಗ್ಯತೆಯಿರುವ ಹೆಣ್ಣಿರಬಹುದು.....ಹಾಗೆಯೇ ಅಡಿಗೆ ಕೆಲಸ, ಕುಟುಂಬ ನಿರ್ವಹಣೆ, ಸ್ತ್ರೀ ಸಹಜ ಮಾತೃ ವಾತ್ಸಲ್ಯದಿಂದ ಮಕ್ಕಳ ಪಾಲನೆ ಪೋಷಣೆ ಅಥವಾ ಪ್ರತಿಕ್ಷಣವೂ ಚಂಚಲವಾಗುವ ವಿರುದ್ಧ ಭಾವನೆಗಳಿಗನುಗುಣವಾಗಿ ಡೋಲಾಯಮಾನವಾಗುವ ಕೋಮಲ ಹೃದಯ ಹೊಂದಿರುವ ಪುರುಷರಿರಬಹುದು.... ಅದರಲ್ಲಿ ಏನೂ ಅಸಹಜತೆಯಿಲ್ಲ. ಅದು ಉಭಯ ವರ್ಗಗಳೂ ಒಂದೇ ಅಸ್ತಿತ್ವದ ಎರಡು ಅಂಶಗಳೆನ್ನುವುದರ ಪರಿಣಾಮ ಮಾತ್ರವಾಗಿದೆ. ಆದರೆ, ಇದು ಕುಲಗೆಟ್ಟ ಪಾಶ್ಚಾತ್ಯ ಲೋಕದ ಹಾಗೂ ವಿಚ್ಛಿದ್ರವಾಗಿರುವ ಪೌರ್ವಾತ್ಯ ಲೋಕದ ದಿಗಂತದಲ್ಲಿ ಮೊಳಗುತ್ತಿರುವ ಪೊಳ್ಳುವಾದದ ಕೋಲಾಹಲಗಳಿಗೆ ಸಮರ್ಥನೆಯಾಗುವುದಿಲ್ಲ. ಪ್ರಸ್ತುತ ಸಮಸ್ಯೆಯನ್ನು ನೈಜ ರೂಪದಲ್ಲಿ ಹೀಗೆ ಪ್ರಸ್ತುತ ಪಡಿಸಬೇಕು: ಮೂಲಭೂತ ಕರ್ತವ್ಯಗಳಿಗೆ ಮಿೀರಿ, ಸ್ತ್ರೀಯು ಮಾಡುವ ಇಂತಹ ಕೆಲಸಗಳು ಆಕೆಯ ಮೂಲಭೂತ ಕರ್ತವ್ಯಕ್ಕೆ ಪರ್ಯಾಯವಾದೀತೇ? ಅದರಿಂದ ಆಕೆಗೆ ಮನೆ, ಕುಟುಂಬ, ಸಂತಾನಗಳ ನೈಸರ್ಗಿಕ ಹಂಬಲದಿಂದ ವಿಮೋಚನೆ ನೀಡೀತೇ? ಲೈಂಗಿಕಾಸಕ್ತಿ ಮತ್ತು ದೇಹೇಚ್ಛೆಯ ಮಾತಂತಿರಲಿ, ತನ್ನ ಕುಟುಂಬಕ್ಕೋರ್ವ ಯಜಮಾನನಿಗಾಗಿ, ಓರ್ವ ಜೀವನ ಸಂಗಾತಿಗಾಗಿರುವ ಆಕೆಯ ಪಯಣವು ಎಂದಾದರೂ ಕೊನೆಗೊಂಡೀತೇ?"

ನೈಸರ್ಗಿಕವಾಗಿ ಸ್ತ್ರೀ-ಪುರುಷರಲ್ಲಿರುವ ಭಿನ್ನತೆಯ ವಾಸ್ತವಿಕತೆಯನ್ನು ನಾವು ಮನಗಂಡೆವು. ಇನ್ನು ಇಸ್ಲಾಮ್ ಅವರ ಮಧ್ಯೆ ಇರಿಸಿರುವ ವ್ಯತ್ಯಾಸವೇನೆಂದು ನೋಡೋಣ.

ಇಸ್ಲಾಮ್ ಒಂದು ವ್ಯಾವಹಾರಿಕ ಪದ್ಧತಿಯೆಂಬುದೇ ಅದರ ಮಹಾ ವೈಶಿಷ್ಟ್ಯವಾಗಿದೆ. ಅದು ಸದಾ ಮಾನವ ಗುಣದೊಂದಿಗೆ ಸಾಮರಸ್ಯದಿಂದ ಸಾಗಲು ಪ್ರಯತ್ನಿಸುತ್ತದೆ. ಅದು ನಿಸರ್ಗದೊಂದಿಗೆ ಸಂಘರ್ಷಿಸುವುದಿಲ್ಲ ಅಥವಾ ಅದರ ಹಾದಿಯಿಂದ ವಿಮುಖವಾಗುವುದಿಲ್ಲ. ಅದು ಮಾನವರಿಂದ ಮಾನವೀಯ ಗುಣದ ಸಂಸ್ಕರಣೆ ಮತ್ತು ಉನ್ನತಿಯನ್ನು ಅಪೇಕ್ಷಿಸುತ್ತದೆ. ಅದು ಪ್ರಸ್ತುತ ರಂಗದಲ್ಲಿ ಕಾಲ್ಪನಿಕ ಮತ್ತು

ಅಸಂಭವವೆಂಬಷ್ಟರ ಮಟ್ಟಿಗೆ ಅತ್ಯದ್ಭುತ ಮಾದರಿಯನ್ನು ಕೊಡುಗೆಯಿತ್ತಿದೆ. ಆದರೂ ಸಂಸ್ಕರಣೆಗಾಗಿ ನೈಸರ್ಗಿಕತೆಯನ್ನೇ ಬದಲಾಯಿಸಬೇಕೆಂದು ಅದು ಒತ್ತಾಯಿಸುವುದಿಲ್ಲ. ಅಥವಾ ಒಂದು ವೇಳೆ ಬದಲಾಯಿಸಲು ಸಾಧ್ಯವಾದರೂ ಅದರಿಂದ ಮಾನವ ಜೀವನಕ್ಕೆ ಪ್ರಯೋಜನವಾದೀತೆಂದು ಅದು ನಂಬುವುದಿಲ್ಲ. ನೈಸರ್ಗಿಕ ಸಾಮರಸ್ಯದಿಂದ ಅದನ್ನು ಸಂಸ್ಕರಿಸಿ, ಲೌಕಿಕ ಹಿತಾಸಕ್ತಿಗಳಿಗತೀತವಾಗಿ, ನಿಷ್ಕಾಮ ಕರ್ಮಗಳ ಉದಾತ್ತ ಸುಂದರವಾದ ದಿಗಂತಕ್ಕೇರುವುದೇ ಮಾನವನು ಸಾಧಿಸಬಹುದಾದ ಉನ್ನತಿಯೆಂದು ಅದು ಭಾವಿಸುತ್ತದೆ.

ಅದು ಸ್ತ್ರೀ-ಪುರುಷ ಸಮಸ್ಯೆಯಲ್ಲಿ ಮಾನವನಿಗೆ ನೈಸರ್ಗಿಕವಾಗಿ ಯೋಗ್ಯವಾದ ವ್ಯಾವಹಾರಿಕ ಮಾರ್ಗವನ್ನೇ ಅವಲಂಬಿಸಿದೆ. ನೈಜ ಗುಣದ ಆಗ್ರಹವೆಂಬ ನೆಲೆಯಲ್ಲಿ ಅದು ಉಭಯತ್ರರಲ್ಲಿ ಸಮಾನತೆಯನ್ನು ಸ್ಥಾಪಿಸುತ್ತದೆ; ನೈಸರ್ಗಿಕ ಆಗ್ರಹವೆಂಬ ನೆಲೆಯಲ್ಲಿಯೇ ಅವರೀರ್ವರಲ್ಲಿ ಭಿನ್ನತೆಯನ್ನು ಕಲ್ಪಿಸುತ್ತದೆ. ವಿಭಿನ್ನತೆಗೆ ಸಂಬಂಧಿಸಿದ ಮುಖ್ಯ ವಿಚಾರಗಳಲ್ಲಿ ವಾರಸುಸೊತ್ತಿನ ಹಂಚಿಕೆ ಮತ್ತು ಕುಟುಂಬ ನಾಯಕತ್ವಗಳು ಉದಾಹರಣೆಯಾಗಿವೆ.

ವಾರಸು ಸೊತ್ತಿನ ಕುರಿತು ಇಸ್ಲಾಮ್ ಹೇಳುತ್ತದೆ: "ಪುರುಷನಿಗೆ ಈರ್ವರು ಸ್ತ್ರೀಯರಿಗೆ ಸಮಾನವಾದ ಪಾಲಿದೆ. "ಅದು ನಿಜ. ಆದರೆ ಅದರೊಂದಿಗೆ ಸ್ತ್ರೀಯ ಸಂರಕ್ಷಣೆಯ ಹೊಣೆಯೂ ಪುರುಷನಿಗಿದೆಯೆಂದು ಇಸ್ಲಾಮ್ ಹೇಳುತ್ತದೆ. ಸ್ತ್ರೀಗೆ ತನ್ನ ಸಂಪತ್ತಿನಿಂದ ಖಾಸಗೀ ಕಾರ್ಯಗಳಿಗೆ ಹೊರತು ಖರ್ಚು ಮಾಡಬೇಕಾಗುವುದಿಲ್ಲ.(ಆಕೆ ಕುಟುಂಬ ನಾಯಕಿಯಾಗುವ ಸನ್ನಿವೇಶಗಳು ಮಾತ್ರ ಇದಕ್ಕೆ ಅಪವಾದವಾಗಿದೆ. ಆದರೆ ಇಸ್ಲಾಮೀ ಪದ್ಧತಿಯಲ್ಲಿ ಅಂತಹ ಸ್ಥಿತಿ ತೀರಾ ಅಪರೂಪವಾಗಿರುವುದು. ಯಾಕೆಂದರೆ ಅಂತಹ ಸಂದರ್ಭಗಳಲ್ಲಿ ಸಂರಕ್ಷಣೆಯ ಹೊಣೆಯು ಆಕೆಯ ಹತ್ತಿರದ ಸಂಬಂಧಿಕರ ಮೇಲಿರುವುದು) ಹಾಗಿದ್ದರೆ ಸಂಪೂರ್ಣ ಸಮಾನತೆಯ ತುತ್ತೂರಿಗಾರರು ಹೇಳುವ ಹಕ್ಕು ಉಲ್ಲಂಘನೆ ಎಲ್ಲಿದೆ? ಆದರೆ ಇಲ್ಲಿ ವಿಚಾರಾರ್ಹವಾದ ಇನ್ನೊಂದು ಪ್ರಶ್ನೆಯಿದೆ. ಸ್ತ್ರೀಯು ಸಾಮಾನ್ಯವಾಗಿ ವಾರಸು ಸೊತ್ತಿನ $1/3$ ಅಂಶವನ್ನು ತನ್ನ ಸ್ವಂತ ಅವಶ್ಯಕತೆಗಳಿಗಾಗಿ ಪಡೆಯುತ್ತಾಳೆ. ಪುರುಷನು ಪ್ರಥಮವಾಗಿ ಪತ್ನಿಗೆ ಅರ್ಥಾತ್ ಸ್ತ್ರೀಗೆ-ಎರಡನೇಯದಾಗಿ ಕುಟುಂಬ ಮತ್ತು ಸಂತಾನಗಳಿಗೆ ವ್ಯಯಿಸಲಿಕ್ಕಾಗಿ ಅದರ $2/3$ ಪಾಲನ್ನು ಪಡೆಯುತ್ತಾನೆ. ಹಾಗಾದರೆ ಲಾಭ ಯಾರಿಗೆ? ಹೆಚ್ಚು ಗಮನ ಮತ್ತು ಗಳಿಕೆ ಯಾರಿಗೆ?

ವಿವಾಹವಾಗದೆ, ಕುಟುಂಬ ಪೋಷಣೆ ಮಾಡದೆ, ಸ್ವಂತಕ್ಕಾಗಿ ಎಲ್ಲವನ್ನೂ ಖರ್ಚು ಮಾಡುವ ಪುರುಷರು ಅಪರೂಪಕ್ಕೊಬ್ಬರಿರಬಹುದು. ಸಾಮಾನ್ಯವಾಗಿ ಪುರುಷನು ಪತ್ನಿಯನ್ನೊಳಗೊಂಡ ಸಂಪೂರ್ಣ ಕುಟುಂಬದ ಸಂರಕ್ಷಣೆಗಾಗಿ ವ್ಯಯಿಸುತ್ತಾನೆ. ಈ ವ್ಯಯವನ್ನು ಆತನು ತನ್ನ ಸ್ವೇಚ್ಛೆಯಂತೆ ಮಾಡುವುದಲ್ಲ, ಅದು ತನ್ನ ಕರ್ತವ್ಯವೆಂಬ

ನೆಲೆಯಲ್ಲಿ ಮಾಡುತ್ತಾನೆ. ಆಕೆಗೆ ಎಷ್ಟೇ ಸಂಪತ್ತಿದ್ದರೂ ಆಕೆಯ ಸಂಪೂರ್ಣ ಸಮ್ಮತಿಯಿಲ್ಲದೇ ಅದರಲ್ಲಿ ಹಸ್ತಕ್ಷೇಪಿಸುವ ಹಕ್ಕು ಆತನಿಗಿಲ್ಲ. ಆಕೆಯಲ್ಲಿ ಸ್ವಂತವಾಗಿ ಏನೂ ಸಂಪತ್ತಿಲ್ಲವೆಂಬಂತೆ ಆಕೆಗಾಗಿ ಖರ್ಚು ಮಾಡುವುದು ಆತನಿಗೆ ನಿರ್ಬಂಧವಾಗಿದೆ. ಆತನು ಅದಕ್ಕೆ ಅಸಮ್ಮತಿಸಿದರೆ ಆತನ ವಿರುದ್ಧ ಆ ಬಗ್ಗೆ ದೂರು ನೀಡಲೂ ಆಕೆಗೆ ಹಕ್ಕಿದೆ. ಇನ್ನು, ಆತ ತನ್ನ ಸಾಮರ್ಥ್ಯಕ್ಕಿಂತ ಕಡಿಮೆ ಖರ್ಚು ಮಾಡಿದರೂ ಆಕೆ ದೂರು ಸಲ್ಲಿಸಬಹುದು. ಕಾನೂನಿನ ನ್ಯಾಯವು ಆಕೆಯ ಪರವಾಗಿರುವುದು. ಕೆಲವೊಮ್ಮೆ ಸಂಬಂಧವನ್ನು ವಿಚ್ಛೇದಿಸಬೇಕೆಂಬ ತೀರ್ಪು ದೊರೆಯಬಹುದು. ಒಟ್ಟಿನಲ್ಲಿ, ಸ್ತ್ರೀಗೆ ಸೊತ್ತಿನಲ್ಲಿ ದೊರೆಯುವ ಪಾಲಿನ ಕುರಿತು ಇನ್ನಾವ ಸಂದೇಹ ಬಾಕಿಯಿದೆ? ಸ್ತ್ರೀಗಿಲ್ಲದ ಕರ್ತವ್ಯಗಳನ್ನು ಪುರುಷನ ಮೇಲೆ ಹೊರಿಸಿ, ಆಕೆಯ ಇಮ್ಮಡಿ ಪಾಲು ಆತನಿಗೆ ನೀಡಬೇಕೆಂಬ ನೀತಿಯಲ್ಲಿ ವಾಸ್ತವಿಕವಾಗಿ ಆರ್ಥಿಕ ದೃಷ್ಟಿಕೋನದಲ್ಲಿ ಏನಾದರೂ ಪಕ್ಷಪಾತವಿದೆಯೇ?

ಸ್ತ್ರೀ-ಪುರುಷರ ಈ ಪರಸ್ಪರ ನಿಷ್ಪತ್ತಿಯು ಪರಿಶ್ರಮವಿಲ್ಲದೇ ಲಭ್ಯವಾಗುವ ವಾರಸು ಸೊತ್ತಿನಲ್ಲಿ ಮಾತ್ರವಾಗಿದೆ. ಅದನ್ನು ಇತಿಹಾಸದ ಅತ್ಯಂತ ನ್ಯಾಯೋಚಿತ ಕಾನೂನಿನಂತೆ ವಿತರಣೆ ಮಾಡಲಾಗುತ್ತದೆ. ಅರ್ಥಾತ್ ಪ್ರತಿಯೊಬ್ಬರಿಗೂ ತಂತಮ್ಮ ಅವಶ್ಯಕತೆಗಳಿಗೆ ತಕ್ಕಂತೆ ಇರುವುದು. ಅವಶ್ಯಕತೆಯ ಮಾಪಕವು ಅವರ ಮೇಲೆ ಹೊರಿಸಲ್ಪಟ್ಟ ಜವಾಬ್ದಾರಿಕೆಗಳಾಗಿವೆ. ಸ್ವಸಂಪಾದನೆಯ ಮಟ್ಟಿಗೆ ಸ್ತ್ರೀ-ಪುರುಷರ ಮಧ್ಯೆ ಯಾವ ಪಕ್ಷಪಾತವೂ ಇಲ್ಲ. ಅದು ಕೆಲಸದ ಸಂಬಳವಾಗಿರಲಿ, ವ್ಯಾಪಾರವಾಗಿರಲಿ ಅಥವಾ ಭೂ-ಆದಾಯಗಳಾಗಿರಲಿ. ಯಾಕೆಂದರೆ ಅದರ ಮಾಪಕವೇ ಬೇರೆ. 'ಸಮಾನ ಕೆಲಸಕ್ಕೆ ಸಮಾನ ವೇತನ' ವೆಂಬ ನೀತಿ. ಹಾಗಿದ್ದರೆ ಅನ್ಯಾಯವೂ ಇಲ್ಲ. ಅನ್ಯಾಯದ ಭೀತಿಯೂ ಇಲ್ಲ. ಪಾಮರ ಮುಸ್ಲಿಮರು ಭಾವಿಸಿರುವಂತೆ ಅಥವಾ ಇಸ್ಲಾಮಿನ ವೈರಿಗಳು ಡಂಗುರ ಸಾರುತ್ತಿರುವಂತೆ ಸ್ತ್ರೀಗೆ ಪುರುಷನ ಅರ್ಧ ಸ್ಥಾನವೇ ಇರುವುದೆಂಬುದು ಸಮಸ್ಯೆಯ ನಿಜಸ್ಥಿತಿಯಲ್ಲ. ಅದು ಸರಿಯಲ್ಲವೆಂದು ನಮಗೆ ತಿಳಿಯಿತು.

ಈರ್ವರು ಸ್ತ್ರೀಯರ ಸಾಕ್ಷ್ಯವು ಓರ್ವ ಪುರುಷನ ಸಾಕ್ಷ್ಯಕ್ಕೆ ಸಮಾನವೆಂಬ ನೀತಿಯೂ ಸ್ತ್ರೀಗೆ ಪುರುಷನ ಅರ್ಧಾಂಶ ಸ್ಥಾನವೆಂಬುದಕ್ಕೆ ಸಮರ್ಥನೆಯಾಗುವುದಿಲ್ಲ. ಸಾಕ್ಷ್ಯದಲ್ಲಿ- ಅದು ಆರೋಪಿಗೆ ಅನುಕೂಲವಾಗಿರಲಿ-ಪ್ರತಿಕೂಲವಾಗಿರಲಿ-ಅತ್ಯಂತ ನಿಷ್ಪಕ್ಷತೆ ಪಾಲಿಸುವ ವಿವೇಕಪೂರ್ಣ ಹೆಜ್ಜೆಯಾಗಿದೆ. ಸ್ತ್ರೀಯು ಸುಲಭದಲ್ಲಿ ಭಾವಾವೇಶಕ್ಕೊಳಗಾಗುವುದೇ ಅದಕ್ಕೆ ಕಾರಣ. ಮೊಕದ್ದಮೆಗೆ ಆಧಾರವಾಗಿರುವ ಯಾವುದಾದರೊಂದು ವಿಷಯದಲ್ಲಿ ಚಂಚಲ ಭಾವನೆಯಿಂದ ಪ್ರಭಾವಿತಳಾಗಿ ಸತ್ಯದಿಂದ ಹಿಮ್ಮೆಟ್ಟಬಹುದು. ಅದ್ದರಿಂದ ಆಕೆಯೊಂದಿಗೆ ಇನ್ನೋರ್ವಳೂ ಅಗತ್ಯವೆಂದು ಇಸ್ಲಾಮ್ ನಿರ್ಣಯಿಸಿದೆ. "ಒಬ್ಬಳು ತಪ್ಪಿದರೆ ಇನ್ನೊಬ್ಬಳು ಆಕೆಗೆ ಜ್ಞಾಪಿಸಿ ಕೊಡಲಿಕ್ಕಾಗಿ". ಪ್ರಾಯಶಃ ಆರೋಪಿಗಳ

ಸೌಂದರ್ಯವು ಸಾಕ್ಷಿದಾರಳಲ್ಲಿ ಅಸೂಯೆ ಹುಟ್ಟಿಸುವಂಥದ್ದಾಗಿರಬಹುದು. ಅಥವಾ ಆಕೆಯ ಕೋಮಲ ಭಾವನೆಗಳನ್ನು ಉದ್ರೇಕಿಸುವಂತಹ ಯುವಕನಾಗಿರಬಹುದು. ಆಕೆಯ ಮಾತೃ ವಾತ್ಸಲ್ಯವನ್ನು ಜಾಗೃತಗೊಳಿಸುವ ಸನ್ನಿವೇಶವಾಗಿರಬಹುದು. ಉದ್ದೇಶಪೂರ್ವಕವಾಗಿ ಅಥವಾ ಅನುದ್ದೇಶಿತವಾಗಿ ಪ್ರಭಾವ ಬೀರುವ ಬೇರೇನಾದರೂ ಹಿನ್ನೆಲೆಯಿರಬಹುದು. ಆದರೆ ಈರ್ವರು ಸ್ತ್ರೀಯರು ಒಟ್ಟು ಸೇರುವಲ್ಲಿ ಒಂದು ಸುಳ್ಳಾರೋಪದ ಬಗ್ಗೆ ಅವರೀರ್ವರೂ ಸಹಮತ ಹೊಂದುವುದು ಕಷ್ಟ ಸಾಧ್ಯ. ಸಾಮಾನ್ಯವಾಗಿ ಒಬ್ಬಾಕೆಯು ಇನ್ನೊಬ್ಬಳ ಗುಟ್ಟನ್ನು ರಟ್ಟು ಮಾಡಿ, ಸತ್ಯವನ್ನು ಹೊರಗೆಡಹುವ ಸಾಧ್ಯತೆಯೇ ಅಧಿಕವಾಗಿರುವುದು. ಹಾಗೆಯೇ ಸ್ತ್ರೀಯ ಮಾಹಿತಿಯು ನಿಖರವೆಂದು ಮನಗಂಡ ಸಂದರ್ಭದಲ್ಲಿ, ಸ್ತ್ರೀಯರಿಗೆ ಸಂಬಂಧಿಸಿದ ವಿವಾದಗಳಲ್ಲಿ ಒಬ್ಬಳೇ ಸ್ತ್ರೀಯ ಸಾಕ್ಷ್ಯವನ್ನೂ ಪರಿಗಣಿಸಲಾಗುವುದು. ಇನ್ನು ಕುಟುಂಬ ನಾಯಕತ್ವದ ಸಮಸ್ಯೆಯನ್ನು ನೋಡೋಣ. ಸ್ತ್ರೀ-ಪುರುಷರ ಸಮ್ಮಿಲನದ ಈ ಜಂಟಿ ಸಂಸ್ಥೆಯ ಮತ್ತು ಅದರಲ್ಲಿ ಬೆಳೆಯುವ ಸಂತಾನಗಳ ಹಾಗೂ ಅವುಗಳಿಗೆ ಸಂಬಂಧಿಸಿದ ಹೊಣೆಗಾರಿಕೆಗಳ ನಿರ್ವಹಣೆಗೆ ಓರ್ವ ಮೇಲ್ವಿಚಾರಕನ ಅಗತ್ಯವಿದೆ. ನಮ್ಮ ಪ್ರತಿಯೊಂದು ಸಾಮಾಜಿಕ ಸಂಸ್ಥೆಯ ನಿರ್ವಹಣೆಗೆ ಓರ್ವ ಕರ್ತವ್ಯಬದ್ಧನಾದ ನಿರ್ವಾಹಕನಿರಬೇಕೆಂಬುದನ್ನು ಮಾನವನು ಹಿಂದಿನ ಕಾಲದಿಂದಲೇ ಅರಿತುಕೊಂಡಿದ್ದಾನೆ. ಹಾಗಲ್ಲದಿದ್ದರೆ ಅರಾಜಕತೆ ಮತ್ತು ಸಾರ್ವತ್ರಿಕ ವಿನಾಶವುಂಟಾಗ ಬಹುದು. ನಾವು ಕುಟುಂಬ ನಾಯಕತ್ವದ ಮೂರು ರೂಪಗಳನ್ನು ನೋಡೋಣ. ಪುರುಷನು ಕುಟುಂಬದ ನಾಯಕತ್ವ ವಹಿಸುವುದು. ಅಥವಾ ಸ್ತ್ರೀ ಆ ನಾಯಕತ್ವವನ್ನು ವಹಿಸುವುದು. ಅದಲ್ಲದಿದ್ದರೆ ಸ್ತ್ರೀ-ಪುರುಷರಿಬ್ಬರೂ ಜಂಟಿಯಾಗಿ ವಹಿಸಿಕೊಳ್ಳುವುದು.

ಕೊನೆಗೆ ಹೇಳಿದ ಕಲ್ಪನೆಯ ಬಗ್ಗೆ ಮೊದಲು ಆಲೋಚಿಸೋಣ. ಯಾವುದೇ ಕೆಲಸಕ್ಕೆ ನಾಯಕನಿಲ್ಲದೆ ಅರಾಜಕಗೊಳಿಸುವುದಕ್ಕಿಂತ, ಅದಕ್ಕೆ ಈರ್ವರು ನಾಯಕರನ್ನು ನೇಮಿಸುವುದು ಗಂಡಾಂತರಕಾರಿಯೆಂದು ಅನುಭವದಿಂದ ವ್ಯಕ್ತವಾಗಿದೆ. ಭೂಮಿ-ಆಕಾಶಗಳ ಕುರಿತು ಕುರ್‌ಆನ್ ಹೇಳುತ್ತದೆ: "ಭೂಮಿ-ಆಕಾಶಗಳಲ್ಲಿ ಅಲ್ಲಾಹನ ಹೊರತು ಇನ್ನೂ ಕೆಲವು ದೇವರಿರುತ್ತಿದ್ದರೆ ಅವರೆಡೂ ನಾಶವಾಗುತ್ತಿದ್ದುವು".

"ಪ್ರತಿಯೊಬ್ಬ ದೇವನೂ ತಾನು ಸೃಷ್ಟಿಸಿದವುಗಳೊಂದಿಗೆ ಬೇರೆಯಾಗಿ, ಪರಸ್ಪರ ಅಕ್ರಮವೆಸಗುತ್ತಿದ್ದರು".

ಕಾಲ್ಪನಿಕ ದೇವಂದಿರ ಸ್ಥಿತಿಯೇ ಹೀಗಿದ್ದರೆ, ಸಾಮಾನ್ಯ ಮಾನವನ ಅವಸ್ಥೆಯನ್ನು ಹೇಳುವುದೇನು? ನಾಯಕತ್ವಕ್ಕಾಗಿ ಪರಸ್ಪರ ಕಚ್ಚಾಡುವ ಮಾತಾಪಿತರ ಆಶ್ರಯದಲ್ಲಿ ಬೆಳೆಯುವ ಮಕ್ಕಳು ಭಾವನಾತ್ಮಕ ಅಸಮತೋಲನ ಮತ್ತು ಮಾನಸಿಕ ಸಂಘರ್ಷಕ್ಕೆ ಗುರಿಯಾಗುವರೆಂದು ಆಧುನಿಕ ಮನಃಶಾಸ್ತ್ರವು ಅಭಿಪ್ರಾಯಪಡುತ್ತದೆ.

ಇನ್ನು ಮೊದಲಿನ ಎರಡು ಕಲ್ಪನೆಗಳು ಬಾಕಿಯಿವೆ. ಆ ಬಗ್ಗೆ ಚರ್ಚಿಸುವುದಕ್ಕಿಂತ ಮುಂಚಿತವಾಗಿ ಒಂದು ಪ್ರಶ್ನೆ. ಅವರೀರ್ವರಲ್ಲಿ ಹಿರಿತನಕ್ಕೆ ಹೆಚ್ಚು ಯೋಗ್ಯರು ಯಾರು? ಆ ಕರ್ತವ್ಯ ನಿರ್ವಹಣೆಗೆ ಅಗತ್ಯವಾಗಿರುವುದು ವಿಚಾರವೋ ಅಥವಾ ಭಾವನೆಯೋ? ವಿಚಾರವೆಂಬುದೇ ಸ್ಪಷ್ಟ ಉತ್ತರ. ಯಾಕೆಂದರೆ ಸರಿಯಾದ ಹಾದಿಯಿಂದ ಚಿಂತನೆಯನ್ನು ಹೊಡೆದೋಡಿಸುವ ತೀಕ್ಷ್ಣ ಭಾವನಾತ್ಮಕತೆಯಿಂದ ದೂರವಿದ್ದು ವ್ಯವಹಾರಗಳನ್ನು ನಿಯಂತ್ರಿಸಲು ವಿಚಾರವು ಶಕ್ತವಾಗಿದೆ. ಹಾಗಿದ್ದರೆ ಈ ಬಗ್ಗೆ ವಿಶೇಷವಾಗಿ ಚರ್ಚಿಸಬೇಕಾಗಿಲ್ಲ. ಕುಟುಂಬ ನಾಯಕತ್ವಕ್ಕೆ ವೈಚಾರಿಕ ಪ್ರಧಾನ ಗುಣ ಮತ್ತು ಜೀವನ ಹೋರಾಟ ನಡೆಸುವ ಹಾಗೂ ಅದರ ಹೊರೆ ಮತ್ತು ಅಡ್ಡಿ ಆತಂಕಗಳನ್ನು ನಿಭಾಯಿಸುವ ಸಾಮರ್ಥ್ಯವನ್ನು ಹೊಂದಿರುವ ಪುರುಷನೇ ಸ್ತ್ರೀಗಿಂತ ಹೆಚ್ಚು ಅರ್ಹನೆಂಬುದು ವ್ಯಕ್ತ. ವಾಸ್ತವದಲ್ಲಿ ದುರ್ಬಲ ಹಾಗೂ ತನ್ನ ಅಭಿಲಾಷೆಗಳಿಗೆ ಮಣಿಯುವ ಪುರುಷನನ್ನು ಸ್ತ್ರೀಯು ತಾತ್ಸಾರದಿಂದ ನೋಡುತ್ತಾಳೆ. ಆತನಿಗೆ ಆಕೆ ಯಾವ ಬೆಲೆಯನ್ನೂ ನೀಡುವುದಿಲ್ಲ. ಇದು ಸುಪ್ತಪ್ರಜ್ಞೆಯಲ್ಲಿ ಕೀಳರಿಮೆಯನ್ನು ಬೆಳೆಸುವ ಹಳೆಯ ಶಿಕ್ಷಣ ಸಂಪ್ರದಾಯದ ಪ್ರಭಾವವೆಂದು ಕೆಲವರು ಆರೋಪಿಸಬಹುದು. ಸ್ತ್ರೀಯ ಮನಸ್ಸು ಆಕೆಯ ಸಾಮರ್ಥ್ಯದ ಬಗ್ಗೆ ಅಜ್ಞವಾಗಿ ಬೆಳೆಯುತ್ತದೆಂದು ವಾದಿಸಲಾಗುತ್ತದೆ. ಆದರೆ ಸಂಪೂರ್ಣ ಸಮಾನತೆಯನ್ನು ಪಡೆದಿರುವ, ಸ್ವತಂತ್ರ ವ್ಯಕ್ತಿತ್ವವನ್ನು ಸಾಧಿಸಿರುವ ಅಮೇರಿಕನ್ ಮಹಿಳೆಯು ಕೊನೆಗೆ, ತನ್ನನ್ನೇ ಪುರುಷನಿಗೆ ಅರ್ಪಿಸಿಕೊಂಡಿದ್ದಾಳೆ. ಆತನ ಪ್ರೀತಿ ಸಂಪಾದನೆಗಾಗಿ ಪ್ರೇಮಭಿಕ್ಷೆ ಮತ್ತು ಒನಪು ವಯ್ಯಾರಗಳಿಂದ ಆಕೆಯೇ ನಡೆಯುತ್ತಾಳೆ. ಆತನ ವಿಶಾಲವಾದ ಎದೆ, ಬಲಿಷ್ಠ ಮಾಂಸ ಪೇಶಿಗಳ ಸ್ಪರ್ಶದಿಂದ ಆಕೆ ಮೈಮರೆಯುತ್ತಾಳೆ. ತನ್ನ ಅಸಾಮರ್ಥ್ಯವನ್ನು ಮನಗಂಡ ಆಕೆಯು, ಆತನ ಶಕ್ತಿಯ ಮುಂದೆ ಸರ್ವಸ್ವವನ್ನೂ ಅರ್ಪಿಸುತ್ತಾಳೆ. ಆತನಲ್ಲಿ ಸಂತೃಪ್ತಿಯನ್ನು ಅರಸುತ್ತಾಳೆ.

ವೈವಾಹಿಕ ಜೀವನದ ಆರಂಭ ಕಾಲಗಳಲ್ಲಿ ಸಂತಾನ ಪಾಲನೆ ಮತ್ತು ಕುಟುಂಬ ಸಂರಕ್ಷಣೆಯ ಘನ ಕರ್ತವ್ಯಗಳ ಗೋಜಿಲ್ಲದ ವೇಳೆ ಸ್ತ್ರೀಗೆ ಪ್ರಾಯಶಃ ನಾಯಕತ್ವ ವಹಿಸಲು ಸಾಧ್ಯವಾಗಬಹುದು. ಆದರೆ ಆ ಕರ್ತವ್ಯಗಳು ಹೆಚ್ಚಿದಂತೆ ಆ ಸ್ಥಾನವನ್ನು ಆಕೆ ಅನಿವಾರ್ಯವಾಗಿ ತೊರೆಯಬೇಕಾಗುವುದು. ಸ್ವಾಭಾವಿಕವಾಗಿ ಹೆಚ್ಚೆಚ್ಚು ಹೊಣೆಗಾರಿಕೆಗಳು ಬಂದೆರಗುತ್ತವೆ. ಆಗ ಹೆಚ್ಚುತ್ತಿರುವ ಭಾರವನ್ನು ನಿಭಾಯಿಸುವ ವೈಚಾರಿಕ ಹಾಗೂ ಮಾನಸಿಕ ಸ್ಥಿರತೆ ಆಕೆಯಲ್ಲಿರಲಾರದು.

ಹೀಗೆ ಪ್ರಸ್ತಾಪಿಸಿದ ಮಾತ್ರಕ್ಕೆ ಗೃಹಾಡಳಿತದಲ್ಲಿಯೂ ಪುರುಷನು ಸ್ತ್ರೀಯ ಮೇಲೆ ಓರ್ವ ಸರ್ವಾಧಿಕಾರಿಯೆಂದು ಅರ್ಥೈಸಬಾರದು. ನಾಯಕತ್ವವೆಂದರೆ ಸಮಾಲೋಚನೆ ಅಥವಾ ಪರಸ್ಪರ ಸಹಕಾರದ ನಿರಾಕರಣೆಯಲ್ಲ. ವಸ್ತುತಃ ಪರಸ್ಪರ ಹೊಂದಾಣಿಕೆ ಮತ್ತು ಶಾಶ್ವತ ಪ್ರೇಮ ಸಂಬಂಧದ ಬುನಾದಿಯಲ್ಲಿ ಇರುವ ನಾಯಕತ್ವವೇ ಯಶಸ್ವಿಯಾಗುತ್ತದೆ.

ಇಸ್ಲಾಮಿನ ನಿಯಮ ನಿರ್ದೇಶನಗಳೆಲ್ಲವೂ ಕುಟುಂಬದ ಆಂತರಿಕ ರಂಗದಲ್ಲಿ ಪ್ರಸ್ತುತ ಸ್ಫೂರ್ತಿಯನ್ನು ಪ್ರಸಾರಗೊಳಿಸುವಂಥದ್ದಾಗಿದೆ. ಅದು ವಿರಸ ಮತ್ತು ಪೈಪೋಟಿಯ ಬದಲಾಗಿ ಪ್ರೇಮ ಮತ್ತು ಪರಸ್ಪರ ಸಾಮರಸ್ಯವನ್ನು ಬೆಳೆಸ ಬಯಸುತ್ತದೆ. ಕುರ್‌ಆನ್ ಹೀಗೆ ಬೋಧಿಸಿದೆ:

"ಅವರೊಂದಿಗೆ ಒಳ್ಳೆಯ ರೀತಿಯಲ್ಲಿ ವರ್ತಿಸಿರಿ." (ಅನ್ನಿಸಾ:19)

ಪ್ರವಾದಿ(ಸ) ಹೀಗೆಂದಿದ್ದಾರೆ:

"ಮನೆಯವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸುವವನೇ ನಿಮ್ಮಲ್ಲಿ ಅತ್ಯುತ್ತಮನು." (ತಿರ್ಮಿದಿ) ಅದು ಪತ್ನಿಯೊಂದಿಗಿನ ವರ್ತನೆಯನ್ನು ಶ್ರೇಷ್ಠತೆಯ ಮಾಪಕವಾಗಿ ಅಂಗೀಕರಿಸಿದೆ. ಅದುವೇ ವಸ್ತುನಿಷ್ಠ ಮಾಪಕ. ಒಳಿತಿನ ಮೂಲವನ್ನು ಕೆಡಿಸಿ, ಅದರ ಶುಭ್ರ ಪ್ರವಾಹವನ್ನು ತಡೆಯುವ ಹಾಗೂ ಮಾನಸಿಕ ದೌರ್ಬಲ್ಯಗಳಿರುವ ವ್ಯಕ್ತಿಗೆ ಮಾತ್ರ ತನ್ನ ಜೀವನ ಸಂಗಾತಿಯೊಂದಿಗೆ ಕೆಟ್ಟ ರೀತಿಯಲ್ಲಿ ವರ್ತಿಸಲು ಸಾಧ್ಯ.

ಆದರೆ ಕುಟುಂಬ ರಂಗದ 'ಅಧಿಕೃತ' ಸಂಬಂಧಗಳ ಕುರಿತು ಹಲವಾರು ತಪ್ಪು ತಿಳುವಳಿಕೆಗಳಿವೆ. ಆ ಕುರಿತು ಸ್ವಲ್ಪ ವಿವರಿಸಬೇಕಾಗಿದೆ. ಈ ತಪ್ಪು ತಿಳುವಳಿಕೆಗಳಲ್ಲಿ ಒಂದಂಶವು ಸ್ತ್ರೀಯರಿಗೆ ಪುರುಷರೊಂದಿಗಿರುವ ಕರ್ತವ್ಯಗಳ ಕುರಿತಾಗಿದೆ. ಇನ್ನೊಂದಂಶವು ವಿವಾಹ ವಿಚ್ಛೇದನ ಮತ್ತು ಬಹುಪತ್ನಿತ್ವಕ್ಕೆ ಸಂಬಂಧಿಸಿದೆ.

ವಿವಾಹವೆಂಬುದು ಬಹುವಂಶ ವೈಯಕ್ತಿಕ ವಿಷಯವೆಂದೇ ನಾನು ನಂಬುತ್ತೇನೆ. ಅದು ಇರ್ವರು ವ್ಯಕ್ತಿಗಳ ಇತರೆಲ್ಲಾ ಪರಸ್ಪರ ವ್ಯವಹಾರಗಳಂತೆಯೇ ಇದೆ. ವಿವಾಹದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಉಭಯ ಪಕ್ಷಗಳ ವೈಯಕ್ತಿಕ ಭಿನ್ನತೆ ಮತ್ತು ಮಾನಸಿಕ, ಶಾರೀರಿಕ ಮತ್ತು ವೈಚಾರಿಕ ವೈಶಿಷ್ಟ್ಯಗಳನ್ನು ಪರಿಗಣಿಸಬೇಕಾಗಿದೆ. ಅದನ್ನು ಯಾವುದಾದರೊಂದು'ಕಾನೂನಿನ' ಮಿತಿಯೊಳಗಿರಿಸುವುದು ಕಷ್ಟ ಸಾಧ್ಯ. ದಂಪತಿಗಳಲ್ಲಿ ಸಾಮರಸ್ಯ ಮತ್ತು ಐಕ್ಯ ಲಾಸ್ಯವಾಡುತ್ತಿದ್ದರೆ, ಅದಕ್ಕೆ ದಾಂಪತ್ಯ ನೀತಿಯನ್ನು ಅವರು ಅನ್ಯೋನ್ಯತೆಯಿಂದ ಪಾಲಿಸುತ್ತಿರುವುದೇ ಕಾರಣವಾಗಿರಬೇಕೆಂದಿಲ್ಲ. ಕೆಲವೊಮ್ಮೆ ಆ ಸ್ಥಿತಿಯು ಕೈ ಮತ್ತು ನಾಲಗೆಯಿಂದ ವ್ಯವಹರಿಸಿ ತೀವ್ರ ಕಚ್ಚಾಟ ನಡೆದ ಬಳಿಕವೇ ಉಂಟಾಗುತ್ತದೆ. ವಿರಸ ಮತ್ತು ಕಲಹಕ್ಕೂ ದಂಪತಿಗಳಲ್ಲಿ ಯಾರಾದರೊಬ್ಬರ ಲೋಪದೋಷವೇ ಕಾರಣವಾಗಿರಬೇಕಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ಸತಿ-ಪತಿಯವರೀರ್ವರೂ ಉತ್ತಮ ಮಾನವೀಯ ಮಾದರಿಯಾಗಿರುತ್ತಾರೆ. ಆದರೆ ಅವರ 'ನೈಸರ್ಗಿಕತೆ'ಯು ಪರಸ್ಪರ ಸರಿ ಹೊಂದುವುದಿಲ್ಲ. ಹಲವೊಮ್ಮೆ ಅವರೀರ್ವರೂ ತಮ್ಮಲ್ಲಿ ಹೊಂದಾಣಿಕೆ ಸಾಧ್ಯವಾಗದ ಬಗ್ಗೆ ಕುಳಿತು ಅಳುತ್ತಿರಬಹುದು. ಹಾಗಿದ್ದರೂ ಅವರಿಗೆ ಪರಸ್ಪರ ಹೊಂದಿಕೊಳ್ಳಲಾಗುವುದಿಲ್ಲ.

ಅದೇನಿದ್ದರೂ ವೈವಾಹಿಕ ಸಮಸ್ಯೆಗಳನ್ನು ವ್ಯವಹರಿಸುವಂತಹ ಸಾಮಾನ್ಯ ಕಾನೂನು ನಿವಾರ್ಯ. ಮಾನವ ಜೀವನವನ್ನು ತೀವ್ರವಾಗಿ ಕಾಡುವ ಈ ಸಮಸ್ಯೆಯನ್ನು ವ್ಯವಹರಿಸುವ ಾನೂನಿಲ್ಲದಂತಹ ಯಾವ ಪದ್ಧತಿಯೂ ಪರಿಪೂರ್ಣವೆನಿಸದು. ಸರ್ವಥಾ ನುಲ್ಲಂಘನೀಯವಾದ ಕೆಲವು ಸಾಮಾನ್ಯ ಮಿತಿಮೇರೆಗಳನ್ನಾದರೂ ನಿರ್ಧರಿಸಲು ಆ ಾನೂನಿನಿಂದ ಸಾಧ್ಯವಾಗಬೇಕು. ತರುವಾಯ ವೈಯಕ್ತಿಕ ವರ್ತನೆಗಳಿಗನುಸಾರವಾಗಿ ಯಾ ಸಮಸ್ಯೆಯನ್ನು ಪ್ರಸ್ತುತ ಮಿತಿಯೊಳಗಿದ್ದು ತೀರ್ಮಾನಿಸಬಹುದಾಗಿದೆ.

ಪರಸ್ಪರ ತಿಳುವಳಿಕೆ ಮತ್ತು ಪ್ರೀತಿಯಿಂದ ವರ್ತಿಸುತ್ತಿರುವಾಗ ಸ್ವಾಭಾವಿಕವಾಗಿ ಾವು ಕಾನೂನಿನ ಮೊರೆ ಹೋಗುವುದಿಲ್ಲ.

ಸಂತೃಪ್ತ ವೈವಾಹಿಕ ಜೀವನದಲ್ಲಿ ಕಾನೂನಿನ ಆದೇಶ ಅಥವಾ ತೀರ್ಮಾನವನ್ನು ಡುಕುವುದಿಲ್ಲ. ಕಾನೂನು ಹಾಗೆ ಆದೇಶಿಸಿದೆ, ಆದ್ದರಿಂದ ನಾನು ಹಾಗೆ ಮಾಡುತ್ತೇನೆ ಲ್ಲದಿದ್ದರೆ ನಾನು ತದ್ವಿರುದ್ಧವಾಗಿ ವರ್ತಿಸುತ್ತಿದ್ದೆ ಎಂದು ಆಗ ಪತಿ-ಪತ್ನಿಯರು ೇಳುವುದಿಲ್ಲ. ದಾಂಪತ್ಯ ಸಂತೃಪ್ತಿಯು-ನಾವು ಈ ಹಿಂದೆ ಹೇಳಿದಂತೆ, ಬಹುವಂಶ ಂಪತಿಗಳ ಭಾವೈಕ್ಯದಿಂದ ಉಂಟಾಗುತ್ತದೆ. ಒಂದೇ ಆತ್ಮದ ಎರಡು ಅಂಶಗಳ ನ್ಯೋನ್ಯತೆ ಮತ್ತು ಪರಸ್ಪರ ಪ್ರೇಮಗಳಿಂದ ಸಾಧಿತವಾಗುತ್ತದೆ. ಎರಡು ಹೃದಯಗಳನ್ನು ಜ್ಞಾತ ರೀತಿಯಲ್ಲಿ ಬೆಸೆಯುವ ಪ್ರೇಮವೇ ಅದಕ್ಕೆ ಆಧಾರ. ಅದು ಪ್ರಾಯಶಃ ವುಗಳಲ್ಲೊಂದರ ಅಥವಾ ಅವರೀರ್ವರ ಮಟ್ಟಿಗೆ ನ್ಯಾಯನಿಷ್ಠವಾಗಿರಲಾರದು. ಬದಲಾಗಿ ವುಗಳ ನೈಜ ನಿಲುಮೆಗೆ ವಿರುದ್ಧವಾಗಿರಬಹುದು. ಆದರೂ ಅಲ್ಲಿ ನಿರ್ದಿಷ್ಟ ಧ್ಯೇಯವು ರಗತವಾಗಿದೆ. ಅಲ್ಲಿ ಶಾಂತಿ ನೆಮ್ಮದಿಗಳು ಲಾಸ್ಯವಾಡುವುವು.

ಆದರೆ ಪರಸ್ಪರ ಹೊಂದಿಕೊಳ್ಳಲಾಗದ ಸಂದರ್ಭಗಳಲ್ಲಿ ದಂಪತಿಗಳು ಕಾನೂನಿಗೆ ರಣಾಗಬೇಕಾಗುವುದು. ವಿರಸವು ಕೊನೆಗೊಂಡೀತೆಂಬ ನಿರೀಕ್ಷೆಯಿಂದ ಅದರ ತೀರ್ಪನ್ನು ಯಸುತ್ತಾರೆ.

ನಿಷ್ಪಕ್ಷ ನ್ಯಾಯವನ್ನು ಕಾನೂನಿನಿಂದ ನಿರೀಕ್ಷಿಸಲಾಗುತ್ತದೆ. ಎಲ್ಲ ಪರಿಸ್ಥಿತಿಗಳಲ್ಲಿಯೂ ಡುವ ಮತ್ತು ಎಲ್ಲ ಪರಿಸ್ಥಿತಿಗಳಲ್ಲಿಯೂ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರ ೀಡುವಂತಹ ಸ್ಥಿತಿಯನ್ನು ನಾವು ಅದರಿಂದ ಬಯಸುತ್ತೇವೆ. ಆದರೆ ಯಾವುದೇ ಾನೂನಿಗೂ ಈ ಸಮಗ್ರತೆ ಮತ್ತು ವಿಶಾಲತೆ ಅಸಾಧ್ಯವೆಂದು ನಾನು ಒತ್ತಿ ಹೇಳುತ್ತೇನೆ. ಿಷ್ಪಪಕ್ಷ, ಅದರ ಪ್ರಯೋಗವು ಅಕ್ಷರಶಃ ನ್ಯಾಯಪೂರ್ಣ ಅಥವಾ ಹಿತಕರ ಾಗಿರುವುದೆಂದೂ ಹೇಳಲಾಗುವುದಿಲ್ಲ.

ನಾವು ಇಸ್ಲಾಮಿ ಕಾನೂನುಗಳನ್ನು ನೋಡೋಣ. ಪತ್ನಿಯ ಕರ್ತವ್ಯಗಳ ಹಿನ್ನೆಲೆಯಲ್ಲಿ ದನ್ನು ವಿಶ್ಲೇಷಿಸೋಣ. ಅವಳಿಗಾಗಿಯೇ ಈ ಕೋಲಾಹಲಗಳೆಲ್ಲಾ ನಡೆಯುತ್ತಿವೆಯಷ್ಟೆ. ಬಗ್ಗೆ ಮೂರು ವಾಸ್ತವಿಕ ಅಂಶಗಳು ಗಮನಾರ್ಹವಾಗಿವೆ.

1) ಆ ಕರ್ತವ್ಯಗಳು ಸ್ವಯಂ ಕಠೋರವಾಗಿವೆಯೇ?

2) ಆ ಕರ್ತವ್ಯಗಳು ಪರ್ಯಾಯ ಹಕ್ಕುಗಳಿಲ್ಲದೆ ಕೇವಲ ಏಕಪಕ್ಷೀಯವೇ?

3) ಅವು ಸ್ತ್ರೀಗೆ ವಿಮೋಚನೆ ಪಡೆಯುವ ಅವಕಾಶವಿಲ್ಲದ ಶಾಶ್ವತ ಕರ್ತ ಗಳಾಗಿವೆಯೇ?

ಸ್ತ್ರೀಯ ಮೂರು ಪ್ರಧಾನ ಕರ್ತವ್ಯಗಳಿವೆ. ಪತಿಯು ತನ್ನನ್ನು ಹಾಸಿಗೆ ಆಮಂತ್ರಿಸಿದಾಗ ಆತನನ್ನು ಅನುಸರಿಸುವುದು, ಪತಿಯು ಮೆಚ್ಚದ ಯಾರಿಂದಲೂ ಆತ ಹಾಸಿಗೆಯನ್ನು ಮೆಟ್ಟಿಸದಿರುವುದು; ಆತನ ಗೈರುಹಾಜರಿಯಲ್ಲಿ ಪ್ರಾಮಾಣಿಕತೆ ಪಾಲಿಸುವುದ

ಪ್ರಥಮ ವಿಷಯವನ್ನು ಸ್ವಲ್ಪ ವಿಸ್ತರಿಸಿ ಹೇಳಬೇಕಾಗಿದೆ. ಅದರಲ್ಲಿ ಅಡಕವಾಗಿರು ನೀತಿ ಸ್ಪಷ್ಟ. ಲೈಂಗಿಕಾಸಕ್ತಿಯ ಪೂರೈಕೆಯು ಪುರುಷ ದೇಹದ ನೈಸರ್ಗಿಕ ಬೇಡಿಕೆಯಾಗಿ ದೈಹಿಕ ಒತ್ತಡಗಳಿಂದ ನೆಮ್ಮದಿ ಪಡೆದು ಜೀವನದ ಕರ್ತವ್ಯಗಳನ್ನು ಪ್ರಶಾಂ ಮನಸ್ಸಿನಿಂದ ನಿರಾಯಾಸ ಮತ್ತು ಕಾರ್ಯದಕ್ಷತೆಯಿಂದ ನಿರ್ವಹಿಸಲು ತನ್ಮೂಲಕ ಆತನಿ ಸಾಧ್ಯವಾಗುವುದು. ಲೈಂಗಿಕಾಸಕ್ತಿಯನ್ನು ಶಮನಿಸಬೇಕೆಂಬ ಬಯಕೆಯು ಸ್ತ್ರೀಯರಿಗಿಂ ಪುರುಷರ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತದೆ. ಮುಖ್ಯವಾಗಿ ಯೌವ್ವನ ಕಾಲದಲ್ಲಿ ಪುರುಷನೊಂದಿಗೆ ಹೋಲಿಸಿದಾಗ ಸ್ತ್ರೀಯ ಲೈಂಗಿಕ ಭಾವನೆಯು ತೀವ್ರತಮವೇ ಆಗಿ ದೈಹಿಕವಾಗಿಯೂ ಶಾರೀರಿಕವಾಗಿಯೂ ಆಕೆಗೆ ಅದರತ್ತ ಹೆಚ್ಚು ಒಲವಿದೆ. ಹಾಗಿದ್ದರ ಆಕೆಯ ಲೈಂಗಿಕ ತೃಪ್ತಿಯು ಕೇವಲ ಶಾರೀರಿಕವಾಗಿಯೇ ಆಗಿರಬೇಕಾಗಿಲ್ಲ. ವಿವಾಹದ ಮಾನವ ಜೀವನದ ಆಧ್ಯಾತ್ಮಿಕ, ಮಾನಸಿಕ, ಸಾಮಾಜಿಕ ಮತ್ತು ಆರ್ಥಿಕ ರಂಗಗಳೊಂದಿ ಲೈಂಗಿಕ ಅಂಶವೂ ಪರಿಗಣಿಸಲ್ಪಟ್ಟಿದೆ. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತ ಕಾಮೋದ್ರೇಕಿತನಾದ ಪತಿಯ ಕರೆಯನ್ನು ಪತ್ನಿಯು ನಿರಾಕರಿಸಿದರೆ ಆತನು ಏ ಮಾಡಬೇಕು? ಅನ್ಯ ಸ್ತ್ರೀಯರೊಡನೆ ಅನೈತಿಕ ಸಂಬಂಧ ಬೆಳೆಸಬೇಕೇ? ಆದರೆ ಅಂತ ಸಂಬಂಧವನ್ನು ಯಾವ ಸಮಾಜವೂ ಸಹಿಸಲಾರದು. ಹಾಗೆಯೇ ಆಕೆಗೂ, ತನ್ನ ಪತಿಯ ಅನ್ಯ ಸ್ತ್ರೀಯರಿಂದ ದೈಹಿಕವಾಗಿ ಅಥವಾ ಮಾನಸಿಕವಾಗಿ ಆಕರ್ಷಿಸಲ್ಪಡುವುದನ ಊಹಿಸಲೂ ಕಷ್ಟವಾಗುವುದು.

ಲೈಂಗಿಕ ಸಂಪರ್ಕಕ್ಕೆ ಪತಿಯ ಕರೆಯನ್ನು ಪತ್ನಿಯು ತಿರಸ್ಕರಿಸುವುದಕ್ಕೆ ಈ ಕೆಳಗಿ ಕಾರಣಗಳಿರಬಹುದು;

1. ಆಕೆ ಪತಿಯನ್ನು ದ್ವೇಷಿಸುತ್ತಾಳೆ. ಆದ್ದರಿಂದ ಆತನ ಲೈಂಗಿಕ ಸಂಬಂಧದಿಂ ದೂರವಿರಲು ಆಕೆ ಇಚ್ಛಿಸುತ್ತಾಳೆ.

2. ಆಕೆಗೆ ಪತಿಯೊಂದಿಗೆ ಪ್ರೇಮವಿದ್ದರೂ ಲೈಂಗಿಕ ಸಂಬಂಧವನ್ನು ಅವ ಸಮಗ್ರವಾಗಿ ದ್ವೇಷಿಸುತ್ತಾಳೆ. ಆದ್ದರಿಂದ ಆಕೆ ದೂರ ನಿಲ್ಲುತ್ತಾಳೆ. ಇದು ಸಮತೂ ತಪ್ಪಿದ ಮಾನಸಿಕ ನೀತಿ. ಆದರೂ ಜೀವನದಲ್ಲಿ ಅದೊಂದು ವಾಸ್ತವಿಕತೆಯಾಗಿದೆ.

3. ಪತಿಯೊಂದಿಗೆ ಆಕೆಗೆ ಯಾವ ದ್ವೇಷವೂ ಇಲ್ಲ. ಬದಲಾಗಿ ಪ್ರೇಮವೇ ಇದೆ. ಆದರೂ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಲೈಂಗಿಕ ಸಂಬಂಧವನ್ನು ಆಕೆ ದ್ವೇಷಿಸುತ್ತಾಳೆ.

ಒಂದನೇಯ ಕಾರಣವು ನಿರಂತರವಾದುದಾಗಿದೆ. ಅದಕ್ಕೆ ನಿರ್ದಿಷ್ಟ ಕಾಲಮಿತಿಯಿಲ್ಲ. ಯಾವುದೇ ವಿಶಿಷ್ಟ ಕೆಲಸದೊಂದಿಗೆ ಅದಕ್ಕೆ ಸಂಬಂಧವಿಲ್ಲ. ಅದು ವೈವಾಹಿಕ ಸಂಬಂಧವನ್ನು ಮುಂದುವರಿಸಲಿಚ್ಛಿಸದಂತಹ ಸ್ಥಿತಿಯಾಗಿದೆ. ಅಲ್ಲಿ ಸ್ವಾಭಾವಿಕವಾದ ವಿಚ್ಛೇದನವೇ ಉತ್ತಮ. ಈ ಬಗ್ಗೆ ಸ್ತ್ರೀಗೆ ಹಲವು ಹಕ್ಕುಗಳಿವೆ. ಆ ಕುರಿತು ಮುಂದೆ ನೋಡೋಣ.

ದ್ವಿತೀಯ ಕಾರಣವೂ ಸ್ಥಿರವಾಗಿರುವುದು. ಅದಕ್ಕೆ ಪತಿಯ ನಿರ್ಬಂಧ ಅಥವಾ ಹಠವು ಪ್ರೇರಕವಲ್ಲ. ಅದಕ್ಕೆ ಉಭಯತ್ರರಿಗೂ ಆರಂಭದಿಂದಲೇ ಸ್ಪಷ್ಟ ಹಾಗೂ ಸಂಪೂರ್ಣವಾಗಿ ಸಹಮತವಿರುವ ಪರಿಹಾರದ ಅಗತ್ಯವಿದೆ. ಒಂದೋ ಪತಿಯು ಅದೆಷ್ಟೇ ಕಷ್ಟವಾದರೂ ತನ್ನ ಅಭಿಲಾಷೆಗಳಿಗೆ ಕಡಿವಾಣ ಹಾಕಬೇಕು. ಅದಲ್ಲದಿದ್ದರೆ ಪತ್ನಿಯು, ಪತಿಯ ಪ್ರೇಮ ಮತ್ತು ಆತನಿಂದ ಬೇರ್ಪಟ್ಟು ಜೀವಿಸುವುದರ ತೊಂದರೆಗಳನ್ನು ಜ್ಞಾಪಿಸಿ, ಸಂಕಷ್ಟಗಳನ್ನು ಸಹಿಸಲು ಸಿದ್ಧಳಾಗಬೇಕು. ಇನ್ನು ಯಾವ ರೀತಿಯಿಂದಲೂ ಹೊಂದಿಕೊಳ್ಳಲಾಗದಿದ್ದರೆ ಸಭ್ಯ ರೀತಿಯಿಂದ ಬೇರ್ಪಡಬೇಕು. ಪತಿಯು ನಿರ್ಬಂಧಿಸಿದರೆ ಆತನನ್ನು ಅನುಸರಿಸಬೇಕೆಂದು ಕಾನೂನು ಆದೇಶಿಸುತ್ತದೆ. ಇದು ಏಕಪಕ್ಷೀಯ ತೀವ್ರತೆಯಲ್ಲ. ಲೈಂಗಿಕ ಸಂಬಂಧವು ವಿವಾಹದಲ್ಲಿ ಸ್ವಾಭಾವಿಕವಾಗಿ ಒಳಗೊಂಡಿರುವುದೇ ಅದಕ್ಕೆ ಕಾರಣವಾಗಿದೆ. ಮಾತ್ರವಲ್ಲದೇ ಪತ್ನಿಯ ಅಸಮ್ಮತಿಯಿಂದಾಗಿ ಪತಿಯು ಅನೈತಿಕ ಮಾರ್ಗ ಹಿಡಿಯುವ ಸಾಧ್ಯತೆಯೂ ಅದರಲ್ಲಿದೆ. ಹಾಗಲ್ಲದಿದ್ದರೆ ಅದು ಇನ್ನೊಂದು ವಿವಾಹಕ್ಕೆ ದಾರಿ ಮಾಡಿಕೊಡುವುದು. ಅದು ಪತ್ನಿಯು ಮೆಚ್ಚದಂತಹ ವಿಷಯವಾಗಿದೆ. ಆದರೆ ತನಗೆ ಅಸಾಧ್ಯವೆಂದು ತೋರಿದಾಗಲೂ ಹಾಗೆಯೇ ಮುಂದುವರಿಯಬೇಕೆಂದು ಅದು ಆಕೆಯನ್ನು ನಿರ್ಬಂಧಿಸುವುದಿಲ್ಲ. ಅದರಿಂದ ಆಕೆಯ ಪತಿಪ್ರೇಮವೇ ಅಸ್ತಮಿಸಬಹುದು. ಆಗ ಸಭ್ಯ ರೀತಿಯಲ್ಲಿ ಬೇರ್ಪಡುವುದೇ ಉತ್ತಮ.

ಮೂರನೆಯ ಸ್ಥಿತಿಯು ಕೇವಲ ತಾತ್ಕಾಲಿಕವಾಗಿದೆ. ಇದನ್ನು ಸುಲಭದಲ್ಲಿ ಪರಿಹರಿಸಬಹುದು. ಈ ತಾತ್ಕಾಲಿಕ ವಿರಸದಿಂದ ಆಯಾಸ, ಬಳಲಿಕೆ, ಆಲಸ್ಯ, ತಾತ್ಕಾಲಿಕ ಅಸ್ವಸ್ಥತೆಗಳುಂಟಾಗಬಹುದು. ಅದನ್ನು ಮಾನಸಿಕ ಹಾಗೂ ದೈಹಿಕ ಮುಂಜಾಗ್ರತೆಗಳಿಂದ ನಿವಾರಿಸಬಹುದಾಗಿದೆ. ಆದ್ದರಿಂದಲೇ ಲೈಂಗಿಕ ಸಂಬಂಧವನ್ನು ಸರಸ, ಪ್ರೇಮ, ಸಲ್ಲಾಪ ಮತ್ತು ಭಾವೋತ್ತೇಜಕ ಕ್ರಿಯೆಗಳಿಂದ ಆರಂಭಿಸಬೇಕೆಂದು ಪ್ರವಾದಿವರ್ಯರು(ಸ) ಪುರುಷರಿಗೆ ಉಪದೇಶಿಸಿದ್ದಾರೆ. ಪ್ರಥಮವಾಗಿ ಈ ಸಂಬಂಧವನ್ನು ಮೃಗೀಯ ಮಟ್ಟದಿಂದ ಉನ್ನತಗೊಳಿಸಿ ಭಾವೈಕ್ಯ ಮತ್ತು ಆತ್ಮಸಮನ್ವಯವನ್ನು ಸಾಧಿಸುವ ಅಗತ್ಯವಿದೆ. ತನ್ಮೂಲಕ ವಿರಸದ ಉಪಾದಿಗಳನ್ನು ತೊಡೆದು ಹಾಕಲು ಸಾಧ್ಯವಾಗಬಹುದು.

ಇನ್ನು, ಪತ್ನಿಯು ಲೈಂಗಿಕ ಸಂಬಂಧವನ್ನು ಬಯಸುತ್ತಾಳೆ. ಕಾರಣವಶಾತ್,

ಪತಿಯು ಅದನ್ನು ನಿರಾಕರಿಸುವಂತಹ ಸಂದರ್ಭದಲ್ಲಿ - ಪುರುಷನ ಯೌವ್ವನ ಕಾಲದಲ್ಲಿ ಅಂತಹ ಸಾಧ್ಯತೆ ಕಡಿಮೆ - ಆಕೆ ದಾರಿಗಾಣದೆ ಬೇಸರಗೊಳ್ಳಬೇಕಾಗಿಲ್ಲ. ಪತಿಯನ್ನು ಅನುಸರಿಸಬೇಕೆಂದು ಸ್ತ್ರೀಗೆ ಆದೇಶ ನೀಡುವ ಕಾನೂನಿನಲ್ಲಿಯೇ ಅವಳ ಹಿತಾಸಕ್ತಿಗಳನ್ನು ಗಮನಿಸಿ ಅರ್ಹವಾದ ಸ್ಥಾನಮಾನಗಳನ್ನು ಆಕೆಗೂ ನೀಡಲಾಗಿದೆ. ಪತ್ನಿಯು ಅಪೇಕ್ಷಿಪಟ್ಟರೆ ಪುರುಷನು ತನ್ನ'ಪತಿ ಧರ್ಮ'ವನ್ನು ಪೂರೈಸಬೇಕೆಂದು ಅದು ಆದೇಶಿಸುತ್ತದೆ. ಪತಿಯು ಅದಕ್ಕೆ ಅಶಕ್ತನಾದರೆ ಆತನಿಂದ ಸಂಬಂಧವನ್ನು ಕಡಿದುಕೊಳ್ಳಬಹುದು. ಹೀಗೆ ಕರ್ತವ್ಯಗಳು ಉಭಯತ್ರರಲ್ಲಿಯೂ ಅರ್ಪಿಸಲ್ಪಟ್ಟಿರುವುದನ್ನು ನಾವು ಕಾಣಬಹುದಾಗಿದೆ. ಅದರಲ್ಲಿ ಪತ್ನಿಗೆ ಅನ್ಯಾಯವಾಗಲೀ, ಆಕೆಯ ವ್ಯಕ್ತಿತ್ವದ ದಮನವಾಗಲೀ ಇಲ್ಲ. ಆಕೆಯ ದ್ವಿತೀಯ ಕರ್ತವ್ಯವು ಪತಿಯ ಶಯ್ಯಾಸ್ಥಳಕ್ಕೆ ಆತನಿಗಿಷ್ಟವಿಲ್ಲದವರನ್ನು ಪ್ರವೇಶಗೊಳಿಸದಿರುವುದು ಅಂದರೆ ಪತಿಗೆ ಮೆಚ್ಚುಗೆಯಿಲ್ಲದವರನ್ನು ಮನೆಯೊಳಗೆ ಪ್ರವೇಶಗೊಳಿಸಬಾರದು. (ಇದು ವ್ಯಭಿಚಾರಕ್ಕೆ ಸಂಬಂಧಿಸಿದುದಲ್ಲ. ಅದು ಪತಿ ಅನುಮತಿಸಿದರೂ ನಿಷಿದ್ಧವಷ್ಟೆ.) ದಂಪತಿಗಳಲ್ಲಿ ಕಲಹ ನಿರ್ಮಿಸುವ ಉದ್ದೇಶದಿಂದ ಚಾಡಿ ಹೇಳಿ ಕುಪ್ರಚಾರ ನಡೆಸುವವರ ಹಸ್ತಕ್ಷೇಪವೇ ಹೆಚ್ಚಾಗಿ ಎಲ್ಲ ಕುಟುಂಬ ಕಲಹಗಳ ಮೂಲ ಕಾರಣವಾಗಿರುವುದು ಪ್ರಸ್ತುತ ಕರ್ತವ್ಯದಲ್ಲಿ ಅಡಕವಾಗಿರುವ ಯುಕ್ತಿ. ಪತಿಯು ಅದನ್ನು ಮನಗಂಡು ನಿರ್ದಿಷ್ಟ ವ್ಯಕ್ತಿಯನ್ನು ಮನೆಗೆ ಸೇರಿಸಬೇಡವೆಂದು ಹೇಳಿದರೆ, ಪತ್ನಿಯು ಅದಕ್ಕೆ ತದ್ವಿರುದ್ಧವಾಗಿ ವರ್ತಿಸಿದರೆ ಪರಿಣಾಮವೇನಾದೀತು? ಖಂಡಿತವಾಗಿಯೂ ಅಲ್ಲಿ ವಿನಾಶದ ಬೀಜವು ಮೊಳಕೆಯೊಡೆಯುವುದು. ಸಾಮರಸ್ಯದ ಬಾಗಿಲುಗಳು ಮುಚ್ಚಿಕೊಳ್ಳುವುವು. ಅದ್ದರಿಂದ ಪತಿ-ಪತ್ನಿಯರ ಸಂಬಂಧದಿಂದ ರೂಪುಗೊಳ್ಳುವ ಕುಟುಂಬವೆಂಬ ಜಂಟಿ ಸಂಸ್ಥೆಯ ಒಳಿತಿಗೆ ಪ್ರಸ್ತುತ ಕಾನೂನು ಅನಿವಾರ್ಯವಾಗಿದೆ. ಅಲ್ಲಿ ಹುಟ್ಟಿ ಬೆಳೆಯುವ ಮಕ್ಕಳಿಗೆ ಪ್ರೀತಿ, ವಾತ್ಸಲ್ಯ ಮತ್ತು ಶುಭ್ರ ವಾತಾವರಣ ಅಗತ್ಯವಿದೆ. ತಂಟೆ ತಕರಾರುಗಳಿಂದ ಅದನ್ನು ಕೆಡಿಸಿದರೆ ಮಕ್ಕಳ ಮಾನಸಿಕ ಮತ್ತು ಭಾವನಾತ್ಮಕ ಬೆಳವಣಿಗೆಯು ವಿಕೃತವಾಗುವುದು.

ಇಲ್ಲಿ ಹೀಗೆ ಪ್ರಶ್ನಿಸಬಹುದು. ಪತ್ನಿಗೆ ಇಷ್ಟವಿಲ್ಲದ ವ್ಯಕ್ತಿಯನ್ನು ಮನೆಯೊಳಗೆ ಬಿಡಬಾರದೆಂದು ಪತಿಗೆ ಕಾನೂನು ಆಜ್ಞೆ ನೀಡಿಲ್ಲವೇಕೆ? ಪ್ರೀತಿ-ಸಾಮರಸ್ಯದ ವಾತಾವರಣದಲ್ಲಿ ಗುಣ-ನಡತೆಗಳಲ್ಲಿ ಈರ್ವರೂ ಉತ್ತಮ ಮತ್ತು ಸುಸಂಸ್ಕೃತರಾಗಿದ್ದರೆ ಈ ಸಮಸ್ಯೆ ಉದ್ಭವಿಸುವುದಿಲ್ಲ. ವಿರಸ ಹೆಚ್ಚಿ ಐಕ್ಯತೆ ಅಸಾಧ್ಯವಾದರೆ ನಾವು ಕಾನೂನು ಮತ್ತು ನ್ಯಾಯಾಲಯದ ಅಭಯ ಪಡೆಯುತ್ತೇವೆ. ಇಲ್ಲಿ ಒಂದು ವಿಷಯವನ್ನು ಜ್ಞಾಪಿಸಬೇಕಾಗಿದೆ ಕೆಲವೊಮ್ಮೆ ಸ್ತ್ರೀಯ ಭಾವನೆಗಳಲ್ಲಿ ನ್ಯಾಯದ ಪ್ರಚೋದನೆಯಿರಲಾರದು. ಕೇವಲ ವೈಯಕ್ತಿಕ ದ್ವೇಷದಿಂದ ಅತ್ತೆ, ನಾದಿನಿ ಅಥವಾ ಇತರ ಸಂಬಂಧಿಕರನ್ನು ಆಕೆಯು

ಸ್ವೇಷಿಸುತ್ತಿರಬಹುದು. ಈ ದ್ವೇಷಕ್ಕೆ ಸಾಮೂಹಿಕ ಹಿತದೃಷ್ಟಿ ಪ್ರೇರಕವಾಗಿರುವುದಿಲ್ಲ. ಅಂತಹ ಸಂದರ್ಭಗಳಲ್ಲಿ ತನ್ನ ಪತ್ನಿಯು ದ್ವೇಷಿಸುವವರನ್ನು ದೂರವಿಡುವ ವಿಷಯದಲ್ಲಿ ಆಕೆಯನ್ನು ಅನುಸರಿಸಬೇಕೆಂದು ಪತಿಯನ್ನು ನಿರ್ಬಂಧಿಸುವುದರಿಂದ ಹಿತವಾಗದು. ಕೇವಲ ಭಾವೋದ್ರೇಕ ಅಥವಾ ಕ್ಷುಲ್ಲಕ ಕಾರಣಗಳಿಗಾಗಿ ಆಕೆ ಹಾಗೆ ಒತ್ತಾಯಿಸುತ್ತಿರಬಹುದು.

ಪತಿಯ ಚಟುಪಟಿಕೆಗಳೆಲ್ಲವೂ ಸದಾ ಸರಿಯಾಗಿರುವುವೆಂದು ಇದರ ಅರ್ಥವಲ್ಲ. ಕೆಲವೊಮ್ಮೆ ಆತನು ಮಗುವಿನಂತೆ ವರ್ತಿಸುತ್ತಾನೆ. ಹಾಗೆಯೇ ಸ್ತ್ರೀಯ ನಿರ್ಧಾರ ಮತ್ತು ಅಂದಾಜುಗಳೆಲ್ಲವೂ ಸದಾ ತಪ್ಪಾಗಿರುವುದೆಂದೂ ಇದರರ್ಥವಲ್ಲ. ಕೆಲವೊಂದು ನಿರ್ದಿಷ್ಟ ವ್ಯಕ್ತಿಯನ್ನು ಆಕೆ ದ್ವೇಷಿಸುವುದಿದ್ದರೆ, ಆಕೆಯ ನಿಲುಮೆಯೇ ನ್ಯಾಯವಾಗಿರಬಹುದು. ಆ ವ್ಯಕ್ತಿಯು ಕುಟುಂಬ ಸಂಬಂಧವನ್ನು ಕೆಡಿಸಲು ಪ್ರಯತ್ನಿಸುವವನಾಗಿರಬಹುದು. ಆದರೆ, ಓರ್ವ ಸಾಮಾನ್ಯ ಮಾನವನ ಜೀವನಕ್ಕೆ ಯೋಗ್ಯವಾಗಿ ರೂಪಿಸಲ್ಪಟ್ಟ ಕಾನೂನು ಕ್ರಮವೆಂಬ ನೆಲೆಯಲ್ಲಿ ಹಾಗೂ ಸಾಮಾನ್ಯವಾಗಿ ಸ್ತ್ರೀಗಿಂತ ವಿವೇಕಪೂರ್ಣವಾಗಿ ವರ್ತಿಸಲು ಪುರುಷನಿಗೆ ಸಾಧ್ಯವಾಗುವುದರಿಂದಲೂ, ಇಸ್ಲಾಮ್ ಸ್ತ್ರೀಗಿಂತ ಪುರುಷನಿಗೆ ಪ್ರಾಮುಖ್ಯತೆ ನೀಡುತ್ತದೆ. ಆದರೂ ತನಗೆ ಹೊರಲಾಗದ ಹೊರೆಯನ್ನು ವಹಿಸಬೇಕಾಗಿ ಬಂದರೆ ಹಾಗೂ ಅದೇ ಸ್ಥಿತಿಯಲ್ಲಿ ಮುಂದುವರಿಯಲು ಅಸಾಧ್ಯವಾದರೆ ಪತಿ ಸಂಬಂಧವನ್ನು ವಿಚ್ಛೇದಿಸಲು ಆಕೆಗೆ ಹಕ್ಕಿದೆ.

ಮೂರನೆಯ ಕರ್ತವ್ಯವು, ಪತಿಯ ಗೈರು ಹಾಜರಿಯಲ್ಲಿ ಸ್ತ್ರೀಯು ಆತನ ಧನ-ಮಾನಗಳನ್ನು ಸಂರಕ್ಷಿಸುವುದಾಗಿದೆ. ಇದು ಸ್ವಾಭಾವಿಕ ಮತ್ತು ವಿವೇಕಪೂರ್ಣವಾಗಿದೆ. ಈ ಬಗ್ಗೆ ಯಾರಿಗೂ ತರ್ಕವಿರಲಾರದು. ಅದು ಸ್ತ್ರೀ-ಪುರುಷರು ಸಮಾನ ಹೊಣೆಗಾರರಾಗಿರುವ ಕರ್ತವ್ಯವಾಗಿದೆ.

******

ಇನ್ನು ಪತ್ನಿ ಅಥವಾ ಪತಿಯಿಂದಾಗುವ ಕರ್ತವ್ಯಚ್ಯುತಿಯ ಬಗ್ಗೆ ಪರಿಶೀಲಿಸೋಣ. ಕುಟುಂಬ ನಾಯಕತ್ವದ ಹೊಣೆ ವಹಿಸಿರುವ ಪುರುಷನಿಗೆ ಅವಿಧೇಯಳಾಗಿರುವ ತನ್ನ ಪತ್ನಿಯ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಹಕ್ಕಿದೆ. ಕುರ್‌ಆನ್ ಹೀಗೆ ಹೇಳುತ್ತದೆ:

"ನಿಮ್ಮ ಪತ್ನಿಯರು ನಿಮ್ಮ ಆಜ್ಞೆ ಮೀರಿ ನಡೆಯುವರೆಂಬ ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶಿಸಿರಿ. ಮಲಗುವಲ್ಲಿ ಅವರಿಂದ ದೂರವಿರಿ. (ಅವಶ್ಯ ಬಿದ್ದಾಗ) ಅವರನ್ನು ಹೊಡೆಯಿರಿ. ಮುಂದೆ ಅವರು ನಿಮ್ಮನ್ನು ಅನುಸರಿಸಿ ನಡೆದರೆ, ಅನಂತರ ಅವರ ಮೇಲೆ ತಪ್ಪು ಹೊರಿಸಲು ಬೇಕು ಬೇಕೆಂದೇ ನೆವನ ಹುಡುಕಬೇಡಿರಿ."

(ಅನ್ನಿಸಾ : 34)

ಶಿಸ್ತುಕ್ರಮವನ್ನು ಸ್ಪಷ್ಟಗೊಳಿಸುವ ಪ್ರಸ್ತುತ ವಾಕ್ಯವು ಅಂತಿಮವಾಗಿ, ಗಾಯವಾಗದ ದಂಡನೆಯನ್ನು ಆದೇಶಿಸಿರುವುದು ಗಮನಾರ್ಹ. ಈ ಹಕ್ಕನ್ನು ದುರುಪಯೋಗಗೊಳಿಸುವ ಸಂದರ್ಭಗಳ ಕುರಿತು ನಾವಿಲ್ಲಿ ಚರ್ಚಿಸುತ್ತಿಲ್ಲ. ಲೋಕದ ಎಲ್ಲ ಹಕ್ಕುಗಳನ್ನೂ ದುರುಪಯೋಗಪಡಿಸಲಾಗುತ್ತಿದೆ. ಚಾರಿತ್ರ್ಯ ಸಂಸ್ಕರಣೆ ಮತ್ತು ನೈತಿಕ ಉನ್ನತಿಯೇ ಅದಕ್ಕಿರುವ ಪರಿಹಾರ. ಅದನ್ನು ಇಸ್ಲಾಮ್ ಸ್ವಲ್ಪವೂ ನಿರ್ಲಕ್ಷಿಸಿಲ್ಲ. ಅದಕ್ಕೆ ಬೇಕಾದ ಕ್ರಮ ಕೈಗೊಳ್ಳುವುದರಲ್ಲಿ ಅದು ಔದಾಸೀನ್ಯ ತೋರಿಲ್ಲ.[1] ಆದರೆ, ಈ ಹಕ್ಕನ್ನು ಕಾನೂನುಗೊಳಿಸುವ ಮತ್ತು ಕುಟುಂಬ ವ್ಯವಸ್ಥೆಯನ್ನು ಸಂರಕ್ಷಿಸಿ, ಅದನ್ನು ವಿನಾಶ ಮತ್ತು ವಿಚ್ಛಿದ್ರತೆಯಿಂದ ತಡೆಯುವ ಆ ಕಾನೂನಿನ ಅನಿವಾರ್ಯತೆಯ ಬಗ್ಗೆ ನಾವಿಲ್ಲಿ ಚರ್ಚಿಸುತ್ತಿದ್ದೇವೆ. ಲೋಕದ ಎಲ್ಲ ಕಾನೂನುಗಳು ಅವುಗಳನ್ನು ಉಲ್ಲಂಘಿಸುವವರ ವಿರುದ್ಧ ದಂಡನೆ ವಿಧಿಸುವ ಅಧಿಕಾರವನ್ನು ಕೈವಶವಿರಿಸಿಕೊಂಡಿವೆ. ಹಾಗಿಲ್ಲದಿರುತ್ತಿದ್ದರೆ ಪ್ರಸ್ತುತ ಕಾನೂನುಗಳಿಗೆ ಅದನ್ನು ಬರೆದ ಶಾಯಿಯ ಬೆಲೆಯೂ ಇರುತ್ತಿರಲಿಲ್ಲ. ಅಂತಹ ಕಾನೂನುಗಳಿಂದ ಯಾವ ಪ್ರಯೋಜನವೂ ಆಗದು.

ವೈವಾಹಿಕ ಸಂಬಂಧವು ಪತಿ-ಪತ್ನಿಯರಿಗೆಂಬಂತೆಯೇ ಸಮಾಜಹಿತದ ಪದ್ಧತಿಯೂ ಹೌದು. ಅದರಿಂದ ಎಲ್ಲರಿಗೂ ಹೆಚ್ಚಿನ ಪ್ರಯೋಜನವನ್ನು ನಿರೀಕ್ಷಿಸಲಾಗಿದೆ. ಸಾಮರಸ್ಯ ಮತ್ತು ಒಮ್ಮತವಿರುವ ತನಕ ಕಾನೂನಿನ ಹಸ್ತಕ್ಷೇಪವಿಲ್ಲದೆಯೇ ಅದು ಎಲ್ಲರಿಗೂ ಹಿತಕಾರಿಯಾಗಿರುವುದು. ಆದರೆ ವಿರಸದಿಂದ ಉದ್ಭವಿಸುವ ವಿಪತ್ತು ಕೇವಲ ಪತಿ-ಪತ್ನಿಯರಾಗಿರುವ ವ್ಯಕ್ತಿಗಳಿಗೆ ಸೀಮಿತವಾಗಿರಲಾರದು. ಭಾವೀ ಜನಾಂಗದ ಬೀಜವಾಗಿರುವ ಅವರ ಮಕ್ಕಳ ಮೇಲೆಯೂ ಪರಿಣಾಮ ಬೀರುವುದು. ಸುಧಾರಣೆ ಮತ್ತು ಶಿಕ್ಷಣದ ಉತ್ತಮ ವಿಧಾನದಿಂದ ಅವರನ್ನು ಪೋಷಿಸಬೇಕಾದುದು ಸಮಾಜದ ಸಾಮೂಹಿಕ ಕರ್ತವ್ಯವಾಗಿದೆ.

ಈ ವಿನಾಶಕ್ಕೆ ಪತ್ನಿಯು ಕಾರಣೀಭೂತಳಾಗಿದ್ದರೆ, ಅವಳನ್ನು ಸತ್ಯದತ್ತ ಮುನ್ನಡೆಸುವವರಾರು? ನ್ಯಾಯಾಲಯವೇ? ಪತಿ-ಪತ್ನಿಯ ಸಂಬಂಧದ ಖಾಸಗೀ ರಂಗಗಳಲ್ಲಿ ನ್ಯಾಯಾಲಯವು ಹಸ್ತಕ್ಷೇಪ ನಡೆಸಿದರೆ, ಅದರಿಂದ ಕ್ಷುಲ್ಲಕ ಹಾಗೂ ತಾತ್ಕಾಲಿಕ ವಿರಸದ ಬಿರುಕು ದೊಡ್ಡದಾಗುವ ಸಾಧ್ಯತೆಯೇ ಹೆಚ್ಚು. ಅದರಿಂದ ಸಂಬಂಧವು ಇನ್ನಷ್ಟು ಕೆಡಬಹುದಷ್ಟೇ. ಯಾಕೆಂದರೆ ಸಾಮಾನ್ಯವಾಗಿ ಅಲ್ಲಿ ಯಾವುದಾದರೊಂದು ಕಕ್ಷಿಯ ಗೌರವಕ್ಕೆ ಬಹಿರಂಗವಾಗಿ ಭಂಗ ಉಂಟಾಗುತ್ತದೆ. ಅದು ದುರಭಿಮಾನ ಮತ್ತು

---

1. ಇಸ್ಲಾಮಿನ ಮೂಲಭೂತ ತತ್ವಗಳನ್ನು ನಾವಿಲ್ಲಿ ವಿವರಿಸುತ್ತಿದ್ದೇವೆ. ಆದರೆ ಇಂದು ಇಸ್ಲಾಮಿನ ಹೆಸರಿನಲ್ಲಿ ಅಸ್ತಿತ್ವದಲ್ಲಿರುವ ಕಟು ವಾಸ್ತವಿಕತೆಗಳ ಕುರಿತು ಈ ಅಧ್ಯಾಯದ ಇನ್ನೊಂದೆಡೆ ಪ್ರತಿಪಾದಿಸುತ್ತೇವೆ.

ಹಠಮಾರಿತನಕ್ಕೆ ಕಾರಣವಾಗುವುದು. ಆದ್ದರಿಂದ ಸಾಮರಸ್ಯದ ಸರ್ವಪ್ರಯತ್ನಗಳೂ ವಿಫಲಗೊಂಡ ಸಂಕೀರ್ಣ ಪ್ರಸಂಗಗಳಲ್ಲಿ ಮಾತ್ರ ನ್ಯಾಯಾಲಯವು ಹಸ್ತಕ್ಷೇಪ ನಡೆಸಬೇಕು.

ಹಾಗಿದ್ದರೆ ನಿತ್ಯ ಜೀವನದ ಕ್ಷುಲ್ಲಕ ವಿಷಯಗಳಿಗಾಗಿ ನ್ಯಾಯಾಲಯವನ್ನು ಸಮೀಪಿಸುವುದು ವಿವೇಕಪೂರ್ಣ ಕ್ರಮವಲ್ಲ. ಯಾವ ವಿವೇಕಶಾಲಿಯೂ ಅಂತಹ ಮೂರ್ಖತನಕ್ಕೆ ಕೈಹಾಕಲಾರನು. ಅಂತಾದರೆ ಪ್ರತಿಯೊಂದು ಮನೆಯಲ್ಲಿಯೂ ದಿನ-ರಾತ್ರೆ ಕಾರ್‍ಯನಿರ್ವಹಿಸುವ  ನ್ಯಾಯಾಲಯವಿರಬೇಕಾದೀತು.

ಹಾಗಾದರೆ ಈ ಶಿಸ್ತುಕ್ರಮದ ಹೊಣೆ ವಹಿಸುವ ಅಧಿಕಾರಶಕ್ತಿಯು ಮನೆಯಲ್ಲಿಯೇ ಇರಬೇಕು. ಅದು ಈ ಕುಟುಂಬ ವ್ಯವಹಾರಗಳ ಮತ್ತು ಅದರ ಕರ್ತವ್ಯಗಳ ಹೊಣೆ ವಹಿಸಿರುವ ಪುರುಷನೇ ಆಗಿರಬೇಕು. ಆತನು ಪ್ರೇಮಾನುಕಂಪದ ಹಿತನುಡಿಯಿಂದ ಆರಂಭಿಸಬೇಕು. ಆಕೆಯ ಭಾವನೆಗಳನ್ನು ಯಾವ ರೀತಿಯಿಂದಲೂ ನೋಯಿಸಬಾರದು. ಈ ಯತ್ನ ಸಫಲವಾದರೆ ಅದುವೇ ಉತ್ತಮ. ಇಲ್ಲದಿದ್ದರೆ ಒಂದು ಹೆಜ್ಜೆ ಮುಂದಿಡಬೇಕು. ಸ್ವಲ್ಪ ಬಿಗು ಪ್ರಯತ್ನ. ಅಂದರೆ ಶಯ್ಯಾಗಾರದಿಂದ ದೂರವಿರಿಸುವುದು. ರೂಪ ಲಾವಣ್ಯ ಮತ್ತು ಮಾದಕತೆಯ ಬಗ್ಗೆ ಸ್ವಯಂ ಹೆಮ್ಮೆಪಡುವ ಸ್ತ್ರೀಯ ನೈಸರ್ಗಿಕ ಭಾವನೆಗೆ ಇಸ್ಲಾಮ್ ಈ ಮೂಲಕ ಮಾನಸಿಕ ಚಿಕಿತ್ಸೆ ನೀಡುತ್ತದೆ. ಹಲವೊಮ್ಮೆ ತನ್ನ ಸೌಂದರ್ಯದ ಬಗೆಗಿನ ದುರಭಿಮಾನವೇ ಕಲಹಕ್ಕೆ ನಾಂದಿಯಾಗಿರುವುದು. ಶಯ್ಯಾಗಾರದಿಂದ ದೂರವಿರಿಸುವುದರಿಂದ ಆ ಅಹಂಕಾರವನ್ನು ತುಚ್ಛೀಕರಿಸಿದಂತಾಗುವುದು. ಅದು ಪತ್ನಿಯ ಹಠಮಾರಿತನ ಮತ್ತು ಅಹಂಭಾವವನ್ನು ತಗ್ಗಿಸಲು ಮತ್ತು ಸತ್ಯವೆಡೆಗೆ ಆಕೆಯನ್ನು ತಿರುಗಿಸಲು ಸಹಾಯಕವಾಗಬಹುದು. ಇನ್ನು ಈ ತಂತ್ರಗಳೆಲ್ಲವೂ ವಿಫಲವಾದರೆ, ಆ ಮೇಲೆ ಅಲ್ಲಿ ಒಂದು ರೀತಿಯ ಕಟು ಧಿಕ್ಕಾರವೇ ಬಾಕಿ ಉಳಿದಿರುತ್ತದೆ. ಅದಕ್ಕೆ ಪ್ರಹಾರವೇ ಸೂಕ್ತ ಉತ್ತರ. ಆದರೆ, ಅದರ ಉದ್ದೇಶವು ಹಿಂಸೆ ಅಥವಾ ಸೇಡು ತೀರಿಸುವುದಾಗಿರಬಾರದು. ಕೇವಲ ಶಿಸ್ತುಕ್ರಮವಾಗಿರಬೇಕು. ಆದ್ದರಿಂದಲೇ ಗಾಯವಾಗದ ಪ್ರಹಾರವೆಂದು ಧರ್ಮಶಾಸ್ತ್ರವು ಸ್ಪಷ್ಟವಾಗಿ ಹೇಳಿದೆ.

ಇದನ್ನು ಸ್ತ್ರೀಯೊಂದಿಗಿನ ಕ್ರೌರ್ಯ ಮತ್ತು ಆಕೆಯ ಅಭಿಮಾನಕ್ಕೆ ಧಕ್ಕೆಯೊದಗಿಸುವುದೆಂದು ಆರೋಪಿಸಲಾಗುತ್ತಿದೆ. ಖಂಡಿತ ಅಲ್ಲ. ಇಲ್ಲಿ ಒಂದು ವಿಷಯ ಸ್ಮರಣೀಯವಾಗಿದೆ. ಶಾಂತಿಯುತ ತಂತ್ರಗಳು ವಿಫಲಗೊಂಡ ಬಳಿಕವೇ ಒಂದು ಮುಂಜಾಗ್ರತಾ ಕ್ರಮವೆಂಬ ನೆಲೆಯಲ್ಲಿ ಪ್ರಸ್ತುತ ಅಸ್ತ್ರವನ್ನು ಬಳಸಲಾಗುವುದು. ಅದಲ್ಲದೇ ಈ ವಿಧಾನದ ಹೊರತು ಸರಿದಾರಿಗೆ ಬರಿಸಲಾಗದ ಕೆಲವು ಮಾನಸಿಕ ದೌರ್ಬಲ್ಯಗಳಿರುತ್ತವೆ. ಪೂರ್ವೋಕ್ತ ತಂತ್ರಗಳೆಲ್ಲವೂ ಓರ್ವ ವ್ಯಕ್ತಿಯಲ್ಲಿ ಪರಿಣಾಮ

ಬೀರದಿರುವುದಕ್ಕೆ, ಬಹುವಂಶ ಆ ವ್ಯಕ್ತಿಯು 'ಮಸೋಕಿಸ್ಮ್' (Masochism)[1] ಎಂಬ ಲೈಂಗಿಕತೆಗೆ ಸಂಬಂಧಿಸಿದ ಮಾನಸಿಕ ರೋಗಕ್ಕೆ ತುತ್ತಾಗಿರುವುದೇ ಕಾರಣವಾಗಿರುತ್ತದೆಂದು ಆಧುನಿಕ ಮನಃಶಾಸ್ತ್ರವು ಹೇಳುತ್ತದೆ. ಅಂಥವರನ್ನು ಕೇವಲ ದೈಹಿಕ ಮತ್ತು ಮಾನಸಿಕವಾದ ಕಠಿಣ ದಂಡನೆಗಳಿಂದ ಸಮಸ್ಥಿತಿಗೆ ತರಲು ಸಾಧ್ಯ. ಇಂತಹ ಮಾನಸಿಕ ರೋಗವು ಪುರುಷರಿಗಿಂತ ಸ್ತ್ರೀಯರಲ್ಲಿ ಹೆಚ್ಚು ಕಂಡು ಬರುತ್ತದೆ. (ಅಂತೆಯೇ ಪುರುಷನಲ್ಲಿ ಸಾಮಾನ್ಯವಾಗಿ 'ಸೇಡಿಸ್ಮ್'[2] ಎಂಬ ರೋಗವು ಕಂಡು ಬರುತ್ತದೆ. ಕ್ರೌರ್ಯದಿಂದ ಆನಂದ ಪಡುವುದೇ ಅದರ ಲಕ್ಷಣ) ಪತ್ನಿಯು ಪ್ರಸ್ತುತ ವರ್ಗಕ್ಕೆ ಸೇರಿದವಳಾಗಿದ್ದರೆ ಏಟು ಉತ್ತಮ ಚಿಕಿತ್ಸೆಯಾಗಬಹುದು. ಅದು ಆಕೆಯ ತೃಷೆಯನ್ನು ಶಮನಿಸಬಹುದು. ರೋಗ ವಾಸಿಯಾಗಿ ಸಾಮಾನ್ಯ ಸ್ಥಿತಿ ಸಾಧಿಸಲು ಅದು ಸಹಾಯಕವಾಗಬಹುದು.

'ಸೇಡಿಸ್ಟ್'ನಾದ ಓರ್ವ ಪುರುಷನು 'ಮಸೋಕಿಸ್ಮ್' ಪೀಡಿತ ಸ್ತ್ರೀಯನ್ನು ವಿವಾಹವಾದರೆ, ಸಂಪೂರ್ಣ ಐಕ್ಯ ಸಾಮರಸ್ಯ ಮತ್ತು ಸಂತೋಷದಿಂದ ಬಾಳುವುದು ಅಚ್ಚರಿದಾಯಕ ವಾಗಿದ್ದರೂ, ಅದು ವಾಸ್ತವಿಕತೆಯೊಂದರ ಅಪೂರ್ವ ಸಮ್ಮಿಲನವಾಗಿದೆ. ಆದರೆ ಅದಕ್ಕಿಂತ ವಿಸ್ಮಯಕಾರೀ ವಿಷಯವು, ಅತ್ಯಪೂರ್ವವಾಗಿ ಸಂಭವಿಸುವುದಿದ್ದರೂ, ಮಸೋಕಿಸ್ಮ್ ಪೀಡಿತ ಪತಿಯು ಸೇಡಿಸ್ಟ್ ಪೀಡಿತ ಪತ್ನಿಯ ಕೈಗೆ ಸಿಲುಕಿದರೆ ಆಕೆಯು ಆತನನ್ನು ಹೊಡೆದು ಸರಿಪಡಿಸುತ್ತಾ ಈರ್ವರೂ ಉತ್ತಮ ಜೀವನ ಸಾಗಿಸುವುದಾಗಿದೆ.

ಆದರೆ ಸಾಮಾನ್ಯ ಪರಿಸ್ಥಿತಿಗಳಲ್ಲಿ ಅದು ರೋಗಮಟ್ಟವನ್ನು ತಲಪಿರಲಾರದು. ಆಗ ಪ್ರಹಾರವು ಅನಿವಾರ್ಯ ತಂತ್ರವಲ್ಲ. ಕೇವಲ ಮುಂಜಾಗ್ರತಾಕ್ರಮವಾಗಿರುವುದು. ಅದನ್ನು ಪ್ರಯೋಗಿಸಲು ಅವಸರ ಪಡಬಾರದು. ಹಂತಹಂತವಾಗಿ ಮಾರ್ಗದರ್ಶನ ನೀಡುವ ಕುರ್‌ಆನ್ ಅದನ್ನೇ ಬೆಟ್ಟು ಮಾಡುತ್ತದೆ. ಅತ್ಯಂತ ಅನಿವಾರ್ಯ ಪರಿಸ್ಥಿತಿಯ ಹೊರತು ಆ ಅಸ್ತ್ರವನ್ನು ಕೈಗೆತ್ತಿಕೊಳ್ಳಬಾರದೆಂದು ಪುರುಷರಿಗೆ ಎಚ್ಚರಿಕೆ ನೀಡಿದೆ. ಅವರನ್ನು ಆಕ್ಷೇಪಿಸುತ್ತಾ ಪ್ರವಾದಿ(ಸ) ಹೀಗೆಂದರು: "ನೀವು ಒಂಟೆಗೆ ಹೊಡೆಯುವಂತೆ ನಿಮ್ಮ ಪತ್ನಿಯರಿಗೆ ಹೊಡೆಯಬೇಡಿರಿ. ಹಾಗೆ ಹೊಡೆದರೆ ಆ ಬಳಿಕ ರಾತ್ರೆ ಆತನು ಆಕೆಯೊಂದಿಗೆ ಮಲಗುವುದು ಹೇಗೆ?" (ಬುಖಾರಿ)

ಒಡಕಿಗೆ ಪತಿಯೇ ಕಾರಣನಾಗಿದ್ದರೆ ಆಗ ಬೇರೆಯೇ ಕಾನೂನಿದೆ-

"ಓರ್ವ ಸ್ತ್ರೀಗೆ ತನ್ನ ಪತಿಯಿಂದ ದುರ್ವರ್ತನೆ ಅಥವಾ ನಿರ್ಲಕ್ಷ್ಯದ ಭಯವಿದ್ದರೆ, ಪತಿ ಮತ್ತು ಪತ್ನಿ (ಕೆಲವು ಹಕ್ಕು ಬಾಧ್ಯತೆಗಳ ತಾರತಮ್ಯಗಳೊಂದಿಗೆ) ಪರಸ್ಪರ ಸಂಧಾನ

---

1. ರತಿ ಕ್ರೀಡೆಗಳಲ್ಲಿ ಸಂಗಾತಿಯಿಂದ ಪೈಶಾಚಿಕ ಹಾಗೂ ಹೇಳಲಾಗದ ಅಶ್ಲೀಲ ಮತ್ತು ನೀಚ ಮರ್ದನಗಳಿಂದ ಕಾಮ ತೃಪ್ತಿ ಪಡೆಯುವ ಒಂದು ವಿಕೃತ ಲೈಂಗಿಕ ಭಾವನೆ.

2. ಸಂಗಾತಿಗೆ ಮೈಥುನ ವೇಳೆ ಕ್ರೂರವಾದ ಶಾರೀರಿಕ ಮರ್ದನ ಮತ್ತು ಹಿಂಸೆ ನೀಡಿದರೆ ಮಾತ್ರವೇ ಸಂತೃಪ್ತಿಯಾಗುವ ವಿಕೃತ ಲೈಂಗಿಕ ಭಾವನೆ.

ಮಾಡಿಕೊಳ್ಳುವುದರಲ್ಲಿ ದೋಷವಿಲ್ಲ. ಹೇಗಿದ್ದರೂ ಸಂಧಾನವೇ ಅತ್ಯುತ್ತಮ..."

(ಅನ್ನಿಸಾ: 128)

ಕೆಲವರು ಸ್ತ್ರೀ-ಪುರುಷರ ಸಂಪೂರ್ಣ ಸಮಾನತೆಯ ಬೇಡಿಕೆಯನ್ನು ಮುಂದೊಡ್ಡಿ ಬೊಬ್ಬಿರಿಯುತ್ತಾರೆ. ಆದರೆ ಇಲ್ಲಿರುವ ಸಮಸ್ಯೆಯು ಮಾನವೀಯ ನೈಸರ್ಗಿಕತೆ ಮತ್ತು ವ್ಯಾವಹಾರಿಕತೆಗೆ ಸಂಬಂಧಿಸಿದಂತೆಯೇ ವಿನಾ ನಿರಾಧಾರವಾದ ಕಾಲ್ಪನಿಕ ತತ್ವದ ಸಮಸ್ಯೆಯಲ್ಲ. ತನ್ನ ಪತಿಯನ್ನು ಹೊಡೆಯುವ ಪತ್ನಿಯ ಹೃದಯದಲ್ಲಿ ಆತನ ಬಗ್ಗೆ ಸ್ವಲ್ಪವಾದರೂ ಗೌರವವಿದ್ದೀತೆ? ತರುವಾಯ ಆತನೊಂದಿಗೆ ಜೀವಿಸಲು ಆಕೆಗೆ ಸಾಧ್ಯವಾದೀತೇ? 'ನಾಗರಿಕ' ಪಾಶ್ಚಾತ್ಯ ಲೋಕದಲ್ಲಾಗಲೀ, 'ಅನಾಗರಿಕ' ಪೌರ್ವಾತ್ಯ ಲೋಕದಲ್ಲಾಗಲೀ, ಸ್ತ್ರೀಯರು ಪತಿಯಂದಿರನ್ನು ಹೊಡೆಯುವ ಹಕ್ಕಿರಬೇಕೆಂದು ವಾದಿಸಿದ್ದಾರೆಯೇ?

ಪತಿಯ ಕೋಪಾಟೋಪಗಳೆಲ್ಲವನ್ನೂ ಮೌನವಾಗಿ ಸ್ತ್ರೀಯು ಸಹಿಸುತ್ತಿರಬೇಕೆಂದು ಇಸ್ಲಾಮ್ ಆಜ್ಞಾಪಿಸಿಲ್ಲವೆಂಬ ಸತ್ಯವು ಗಮನಾರ್ಹವಾಗಿದೆ. ಪತಿಯೊಂದಿಗೆ ಕೂಡಿ ಬಾಳುವುದು ಅಸಹ್ಯವೆನಿಸಿದಾಗ ಆಕೆಯು ಸಂಬಂಧವನ್ನು ವಿಚ್ಛೇದಿಸಬಹುದು.

ಮೇಲಿನ ವಿವರಣೆಗಳಿಂದ ನಾವು ಮನಗಂಡ ಅಂಶಗಳನ್ನು ಹೀಗೆ ಸಂಕ್ಷೇಪಿಸಬಹುದು:

1. ಸ್ತ್ರೀಯರಿಗೆ ಪುರುಷರೊಂದಿಗಿರುವ ಕರ್ತವ್ಯಗಳು ಅಂಧವಾಗಿ ಹೇರಲ್ಪಟ್ಟವುಗಳಲ್ಲ. ಅವು ಸ್ತ್ರೀಯೂ ಸೇರಿರುವ ಕುಟುಂಬದ ಸಾಮಾನ್ಯ ಹಿತವನ್ನು ಗಮನದಲ್ಲಿರಿಸಿದವುಗಳಾಗಿವೆ.

2. ಸ್ತ್ರೀಯ ಹೆಚ್ಚಿನ ಕರ್ತವ್ಯಗಳ ಸ್ಥಾನದಲ್ಲಿ ಪತಿಗೂ ಕೆಲವು ಕರ್ತವ್ಯಗಳಿವೆ. ವಿಶಿಷ್ಟ ಸಂದರ್ಭಗಳಲ್ಲಿ ಸ್ತ್ರೀಯರಿಗಿಲ್ಲದ ಕೆಲವು ಅಧಿಕಾರಗಳನ್ನು ಪುರುಷನಿಗೆ ನೀಡಿರುವುದು ಕಂಡು ಬರುತ್ತವೆ. ಅವುಗಳಲ್ಲಿ ಸ್ತ್ರೀ ಮತ್ತು ಪುರುಷನ ನೈಸರ್ಗಿಕ ಓತಾಸಕ್ತಿಗಳನ್ನು ಪರಿಗಣಿಸಲಾಗಿದೆಯೇ ವಿನಾ ಅವು ಸ್ತ್ರೀಯನ್ನು ನಿಂದಿಸುವ ಅಥವಾ ಅಪಮಾನಿಸುವ ಉದ್ದೇಶವನ್ನು ಹೊಂದಿಲ್ಲ.

3. ಪುರುಷನ ಅಧಿಕಾರಗಳು ಅಂಗೀಕಾರಾರ್ಹವಲ್ಲ ಅಥವಾ ಅನ್ಯಾಯದ್ದಾಗಿವೆಯೆಂದು ಮನಗಂಡರೆ ಆಕೆಗೆ ಅವುಗಳನ್ನು ನಿರಾಕರಿಸುವ ಹಕ್ಕಿದೆ.

ಸ್ತ್ರೀಗೆ ತನ್ನ ಕರ್ತವ್ಯಗಳು ಅಸಹನೀಯವೆಂದು ಕಂಡು ಬಂದರೆ, ಈ ಹಿಂದೆ ನಾವು ಹಲವು ಬಾರಿ ಪ್ರಸ್ತಾಪಿಸಿರುವಂತೆ ಆಕೆಯು ಆತನಿಂದ ವಿಚ್ಛೇದನ ಪಡೆಯಬಹುದು. ಅದಕ್ಕೆ ಮೂರು ವಿಧಾನಗಳಿವೆ.

1. ವಿವಾಹ ವಿಚ್ಛೇದನದ ಹಕ್ಕನ್ನು ಸ್ತ್ರೀಯು ಸ್ವಯಂ ಇರಿಸಿಕೊಳ್ಳುವುದು. ಇದನ್ನು ಫಿಕ್‌ಹ್‌ನ ಭಾಷೆಯಲ್ಲಿ 'ತಫ್ವೀಳ್' ಎಂದು ಕರೆಯಲಾಗುತ್ತದೆ. ಈ ಹಕ್ಕನ್ನು ಕೆಲವರು ಬಹಳ ಅಪರೂಪವಾಗಿ ಬಳಸುತ್ತಾರೆ. ಆದರೆ ಇದು ಶರೀಅತ್ ಸ್ಪಷ್ಟವಾಗಿ ಹೇಳಿರುವಂತಹ ಹಕ್ಕು. ಅಗತ್ಯ ಕಂಡರೆ ಅದನ್ನು ಚಲಾಯಿಸಬಹುದು.

2. ಪತಿಯೊಂದಿಗೆ ವಿರಸವಾಗಿದ್ದು, ಸಹಬಾಳ್ವೆ ಅಸಾಧ್ಯವೆಂದೂ ಸ್ಪಷ್ಟಪಡಿ
ವಿವಾಹ ವಿಚ್ಛೇದನ ಕೋರುವುದು. ಕೆಲವು ನ್ಯಾಯಾಲಯಗಳು ಈ ಹಕ್ಕನ್ನು ಅಂಗೀಕ
ಸುವುದಿಲ್ಲವೆಂದು ನಾನು ಕೇಳಿದ್ದೇನೆ. ಆದರೆ ಅದು ಪ್ರವಾದಿವರ್ಯರು(ಸ) ಅಂಗೀಕರಿ
ಜಾರಿಗೊಳಿಸಿದ ಸುಸ್ಪಷ್ಟ ನೀತಿಯಾಗಿದೆ. ಅದು ಶರೀಅತ್‌ನ ಒಂದು ಭಾಗವಾಗಿ
ವಿವಾಹದಿಂದ ಪತ್ನಿಗೆ ದೊರೆತ ಸೊತ್ತನ್ನು ಮರಳಿಸಬೇಕೆಂಬ ಶರ್ತವಿದೆ. ಅ
ನ್ಯಾಯೋಚಿತವೂ ಹೌದು. ಯಾಕೆಂದರೆ ಪತಿಯು ಪತ್ನಿಯನ್ನು ತೊರೆಯುವುದರೊಂದಿ
ಆ ಸಂಬಂಧದಿಂದ ದೊರೆತುದೆಲ್ಲವೂ ಆಕೆಗೆ ನಷ್ಟವಾಗುವುದು. ಅಂದರೆ ವಿವಾ
ವಿಚ್ಛೇದನಕ್ಕೆ ಕಾರಣರಾದವರೇ - ಅದು ಸ್ತ್ರೀಯಾಗಿರಲಿ ಪುರುಷನಾಗಿರಲಿ- ಅದರಿಂದಾಗು
ಲೌಕಿಕ ನಷ್ಟವನ್ನು ಸಹಿಸಲು ಸಿದ್ಧರಿರಬೇಕು.

3. ಮೂರನೆಯ ವಿಧಾನವು ದುಷ್ಟ ವರ್ತನೆ, ಕಿರುಕುಳಗಳನ್ನು ಸ್ಪಷ್ಟೀಕರಿಸಿ ವಿವಾ
ವಿಚ್ಛೇದನಕ್ಕಾಗಿ ಒತ್ತಾಯಿಸುವುದು. ಅದನ್ನು ಸಾಬೀತು ಪಡಿಸಿದರೆ ವಿವಾಹಧನ ಮತ
ಜೀವನ ವೆಚ್ಚ ಪಡೆದು ಆಕೆ ಬೇರೆಯಾಗಬಹುದು. ಹಲವೊಮ್ಮೆ ಇಂತಹ ಪ್ರಸಂಗಗಳ
ಮೋಸ ಮತ್ತು ಭ್ರಷ್ಟಾಚಾರ ನಡೆಯುವುದರಿಂದ ನ್ಯಾಯಾಲಯಗಳು ಇಂಥ ಸಮಸ್ಯೆಗಳ
ಬಹಳ ಎಚ್ಚರಿಕೆಯಿಂದ ವ್ಯವಹರಿಸುತ್ತವೆ. ಆದರೆ ವಿಷಯವು ಸಾಬೀತಾದರೆ ಅ
ವಿವಾಹ ವಿಚ್ಛೇದನಕ್ಕಾಗಿ ವಾದಿಸುವುದು.

ಅವು ಪುರುಷನ ಅಧಿಕಾರಗಳ ಬದಲಿಗೆ ಸ್ತ್ರೀಗೆ ದೊರೆತಿರುವ ಅಸ್ತ್ರಗಳಾಗಿ
ಅಂತಿಮ ವಿಶ್ಲೇಷಣೆಯಲ್ಲಿ ಅವೆರಡೂ ಸಂತುಲಿತವಾಗಿವೆ.ಈ ಚರ್ಚೆಯು ನಮ್ಮ
ವಿವಾಹ ವಿಚ್ಛೇದನಕ್ಕೆ ತಲಪಿಸುತ್ತದೆ.

'ತಲಾಕ್'ನಿಂದಾಗುವ ದುರಂತ ಕಥೆಗಳನ್ನು ನಾವು ದಿನನಿತ್ಯ ಕೇಳುತ್ತಿದ್ದೇ
ಬೀದಿಪಾಲಾದ ಮಾತೆಯರ ಮತ್ತು ಮಕ್ಕಳ ಹೃದಯವಿದ್ರಾವಕ ಕಥೆಗಳು; ನ್ಯಾಯಾಲಯಗ
ಕೊನೆಯಿಲ್ಲದ ಅಲೆದಾಟಗಳು, ದಾವೆಗಳ ಮೇಲೆ ದಾವೆಗಳು; ಹೀಗೆ ಹತ್ತು ಹಲ
ಕಥೆಗಳು.

ಪತ್ನಿಯು ಮನೆಯಲ್ಲಿ ನೆಮ್ಮದಿಯಿಂದ ಬಾಳುತ್ತಿರಬಹುದು. ಅದೇ ವೆ
ಕಠಿಣವಾಗಿ ದುಡಿಯುತ್ತಿರಬಹುದು. ಒಂದು ಮಗುವಿಗೆ ಮೊಲೆಯುಣ್ಣಿಸುತ್ತಲೂ, ಇ
ಮಕ್ಕಳ ಪಾಲನೆ ಪೋಷಣೆ ಮಾಡುತ್ತಿರಬಹುದು. ಹಾಗೆಯೇ ಪತಿಗೆ ಸುಖ ಸೌಲಭ್ಯಗಳ
ಒದಗಿಸುವುದರಲ್ಲಿ ನಿರತಳಾಗಿರಬಹುದು. ಹೀಗಿರಲು ಯಾವ ಮುನ್ಸೂಚನೆಯೂ ಇಲ್ಲ
ಅದೋ ಓರ್ವ ಅಂಚೆಗಾರನು ವಿವಾಹ ವಿಚ್ಛೇದನ ಪತ್ರದೊಂದಿಗೆ ಆಕೆಯ ಮುಂ
ಹಾಜರಾಗುತ್ತಾನೆ! ಕಾರಣವೇನು? ಪತಿಯ ಮನದಲ್ಲಿ ಉದ್ಭವಿಸಿದ ತಾತ್ಕಾಲಿಕ ಉನ್ಮಾ
ಆತ ಹಾದಿಯಲ್ಲಿ ಹೆಚ್ಚು ಸುಂದರಿಯಾದ ಓರ್ವ ತರುಣಿಯನ್ನು ಸಂಧಿಸಿದ; ಅಥ
ಲೈಂಗಿಕ ಸಂಬಂಧದಲ್ಲಿ ಪುನರಾವರ್ತನೆಯಾಗುತ್ತಿರುವ ವಿರಸದಿಂದ ಆತ

ಜಿಗುಪ್ಸೆಯಾಯಿತು. ಒಂದು 'ಬದಲಾವಣೆ'ಗಾಗಿ ಆಸೆಪಟ್ಟ. ಅದಲ್ಲದಿದ್ದರೆ, ತಾನು ಬಯಸಿದ ಸಂದರ್ಭದಲ್ಲಿ, ಆಯಾಸ ಮತ್ತು ಬಳಲಿಕೆಯಿಂದಾಗಿ ಪತ್ನಿಯು ಅದಕ್ಕೆ ಒಪ್ಪಲಿಲ್ಲ....!

ಆ ಸಹನಾಶೀಲೆ ಮತ್ತು ಪತಿವ್ರತೆಯಾದ ಪತ್ನಿಯನ್ನೂ, ಗಿಳಿಪಂಜರದಂತೆ ಪ್ರಶಾಂತವಾದ ಮನೆಯಲ್ಲಿ ಭವ್ಯ ಭವಿಷ್ಯವನ್ನು ನಿರೀಕ್ಷಿಸುತ್ತಿರುವ ಮಕ್ಕಳನ್ನೂ ಕ್ಷಣಿಕ ಆವೇಶದಿಂದ ಚೆಂಡಾಡುವ ಪುರುಷನ ಕೈಯಿಂದ ಆ ಅಸ್ತ್ರವನ್ನು ನಾಶಪಡಿಸಲು ಯಾವ ಮಾರ್ಗವೂ ಇಲ್ಲವೇ?

ನಿಜ, ಜನರು ವರ್ಣಿಸುವಂತಹ ಅನೇಕಾರು ದುರಂತಗಳು ನಡೆಯುತ್ತವೆ. ಆದರೆ, ಏನು ಮಾಡಬೇಕು?

ತಲಾಕನ್ನು ನಿಷೇಧಿಸಬೇಕೇ? ಹಾಗಿದ್ದರೆ ತಲಾಕ್‌ನ ನಿಷೇಧದಿಂದ ಉಂಟಾಗುವ ಮಹಾ ದುರಂತಗಳಿಗೆ ನಮ್ಮಲ್ಲಿ ಯಾವ ಪರಿಹಾರವಿದೆ? ವಿವಾಹ ವಿಚ್ಛೇದನ ಹಕ್ಕನ್ನು ನಿಷೇಧಿಸಿರುವ ಕೆಥೋಲಿಕ್ ಜನತೆಗೆ ಅದರ ದುರಂತ ಕಥೆಗಳು ಚೆನ್ನಾಗಿ ತಿಳಿದಿದೆ. ಕುಟುಂಬದ ನಾಯಕನೂ ನಾಯಕಿಯೂ ಪರಸ್ಪರ ದ್ವೇಷಿಸುತ್ತಾರೆ. ಸಹಬಾಳ್ವೆ ಅಸಾಧ್ಯವೆಂದು ಅವರು ಅಂತಿಮವಾಗಿ ತೀರ್ಮಾನಿಸುತ್ತಾರೆ. ಆದರೆ, ಅಲ್ಲಿ ಸಂಬಂಧ ಶಾಶ್ವತ ಮತ್ತು ವಿಚ್ಛೇದನ ಅಸಾಧ್ಯವಾಗಿದೆ!? ಇಂತಹ ಕುಟುಂಬಗಳಿರಬೇಕೆ? ಅದರಿಂದ ಅನೈತಿಕ ವ್ಯವಹಾರಗಳಿಗೆ ಪ್ರೇರಣೆ ನೀಡಿದಂತಾಗುವುದಿಲ್ಲವೇ? ತನ್ನ ಲೈಂಗಿಕ ದಾಹ ಶಮನಕ್ಕಾಗಿ ಪತಿಯು 'ಗರ್ಲ್‌ಫ್ರೆಂಡ'ನ್ನು ಹುಡುಕುತ್ತಾನೆ. ಪತ್ನಿಯೂ ಅದೇ ಮಾರ್ಗವನ್ನು ಅವಲಂಬಿಸುತ್ತಾಳೆ. ಕರಾಳ ಕಾರ್ಮೋಡ ತುಂಬಿದ ಪ್ರಸ್ತುತ ಕೌಟುಂಬಿಕ ವಾತಾವರಣದಲ್ಲಿ ಬೆಳೆಯುವ ಮಕ್ಕಳ ಅವಸ್ಥೆಯೇನಾದೀತು? ಮಾತಾಪಿತರ ಆಶ್ರಯದಲ್ಲಿ ಬೆಳೆಯುವುದಷ್ಟೇ ಪ್ರಾಮುಖ್ಯವಲ್ಲ. ಮಕ್ಕಳು ಬೆಳೆಯುವ ವಾತಾವರಣವೂ ಪ್ರಾಮುಖ್ಯವಾಗಿದೆ. ದಿನನಿತ್ಯ ಜಗಳಾಡುವ ತಂದೆತಾಯಿಗಳ ಆಸರೆಯಲ್ಲಿ ಬೆಳೆಯುವ ಮಕ್ಕಳಲ್ಲಿ ಕಂಡು ಬರುವ ಮನೋ ದೌರ್ಬಲ್ಯಗಳ ಹೆಚ್ಚಳಕ್ಕೆ ಅದೇ ಕಾರಣವಾಗಿದೆ.

ಪುರುಷನಿಗಿರುವ ತಲಾಕ್ ಹಕ್ಕಿನ ಮೇಲೆ ನಿಯಂತ್ರಣ ಹೇರಬೇಕೆಂದು ಕೆಲವರು ವಾದಿಸುತ್ತಾರೆ. ಹಾಗೆಂದರೇನು? ಹೌದು, ಪುರುಷನು ವಿವಾಹ ವಿಚ್ಛೇದನದ ನುಡಿಗಳನ್ನು ಉಚ್ಚರಿಸಿದ ಮಾತ್ರಕ್ಕೆ ಸಂಬಂಧ ಮುರಿಯಬಾರದು. ಕೇವಲ ನ್ಯಾಯಾಲಯದ ಮೂಲಕವೇ ವಿವಾಹ ವಿಚ್ಛೇದನ ಪಡೆಯಬೇಕು. ಪತಿ-ಪತ್ನಿಯರ ಸಂಬಂಧಿಕರ ಪೈಕಿ ಈರ್ವರು ನ್ಯಾಯನಿಷ್ಠ ವ್ಯಕ್ತಿಗಳನ್ನು ನ್ಯಾಯಾಲಯವು ಆಮಂತ್ರಿಸಬೇಕು. ಅವರು ಸಮಸ್ಯೆಯನ್ನು ಪರಿಶೀಲಿಸಿದ ಬಳಿಕ ಪತಿಯೊಡನೆ ಪುನರ್ವಿಮರ್ಶೆ ನಡೆಸುವಂತೆ ವಿನಂತಿಸಬೇಕು. ಆತನಿಗೆ ಬುದ್ಧಿವಾದ ಹೇಳಿ ಸಾಮರಸ್ಯಕ್ಕೆ ಪ್ರೇರೇಪಿಸಬೇಕು. ತನ್ಮೂಲಕ ಪುರುಷನ ಧಿಕ್ಕಾರ ನೀತಿಯನ್ನು ಬದಲಿಸಿ ವೈವಾಹಿಕ ಸಂಬಂಧವನ್ನು ಪುನಃ ಉತ್ತಮ ಪಡಿಸಲು

ಸಾಧ್ಯವಾಗಬಹುದು. ಪ್ರಸ್ತುತ ಪ್ರಯತ್ನಗಳೆಲ್ಲವೂ ವಿಫಲವಾದ ಬಳಿಕವೇ ವಿವಾಹ ವಿಚ್ಛೇದನ ನಡೆಸಬೇಕಾದ ಸಮಸ್ಯೆಯೆಂದು ನಾವು ಅದನ್ನು ಪರಿಗಣಿಸಬೇಕು. ಅದನ್ನೂ ಪತಿಯ ಬದಲಾಗಿ ನ್ಯಾಯಾಲಯದ ಮೂಲಕವೇ ನೀಡಬೇಕು.

ಸಂಬಂಧಿಕರೊಡನೆ ಸಮಾಲೋಚನೆ ನಡೆಸಿ ಸಾಮರಸ್ಯಕ್ಕಾಗಿ ವಿನಂತಿಸುವ ಈ ರೂಪವು ಇಸ್ಲಾಮ್ ಆದೇಶಿಸಿರುವುದೇ ಆಗಿದೆ. ಅದಕ್ಕೆ ಯಾವ ಅಡ್ಡಿಯೂ ನನಗೆ ಕಾಣಿಸುವುದಿಲ್ಲ. ಮಾತ್ರವಲ್ಲದೇ ಅದಕ್ಕೊಂದು ನ್ಯಾಯಾಲಯದ ಅಗತ್ಯವಿದೆಯೆಂದೂ ತೋರುವುದಿಲ್ಲ. ವಾಸ್ತವದಲ್ಲಿ ಈ ಸುಧಾರಕರು ಹೇಳುವ ಎಲ್ಲ ಕ್ರಮಗಳೂ ನ್ಯಾಯಾಲಯದ ಹಸ್ತಕ್ಷೇಪವಿಲ್ಲದೆಯೇ ಇಸ್ಲಾಮಿನಲ್ಲಿದೆ. ಆತ ವಿವಾಹ ವಿಚ್ಛೇದನ ನೀಡಿದ. ಅದು ಸಿಂಧುವಾಯಿತೆಂದೂ ನಾವು ಭಾವಿಸೋಣ. ಹಾಗಿದ್ದರೂ ಉಭಯತ್ರರ ಸಂಬಂಧಿಕರು ಸೇರಿ, ಅವರಲ್ಲಿ ರಾಜೀ ಮಾಡಿಸಿ ಪೂರ್ವಸ್ಥಿತಿಗೆ ತರುವ ಅವಕಾಶ ಇಸ್ಲಾಮಿನಲ್ಲಿ ಇಲ್ಲವೇ? ಇನ್ನು ಎರಡನೇ ಬಾರಿ ವಿಚ್ಛೇದನ ನಡೆದರೂ ಅವರಿಗೆ ಪರಸ್ಪರ ಆಸಕ್ತಿ ಮತ್ತು ಪ್ರಯೋಜನವಿದೆಯೆಂದು ಮನಗಂಡರೆ ಅವರನ್ನು ಒಂದುಗೂಡಿಸುವುದಕ್ಕೆ ಅಡ್ಡಿಯೇನಿದೆ? ಹೊಸ ಕ್ರಮ ಮತ್ತು ಹೊಸ ಮಹ್ರ್‌ನ ಮೂಲಕ ಪತಿಗೆ ಬುದ್ಧಿ ಕಲಿಸುವ ಅವಕಾಶವೂ ಅದರಲ್ಲಿದೆ.

ಪರಸ್ಪರ ಒಂದುಗೂಡಿಸುವ ಕಾಳಜಿಯು ನ್ಯಾಯಾಲಯವನ್ನು ಅವಲಂಬಿಸಿಲ್ಲ. ಸಂಬಂಧಿಕರು ಮತ್ತು ಸ್ನೇಹಿತರಿಗಿಂತ ಹೆಚ್ಚಿನ ಕಾಳಜಿ ನ್ಯಾಯಾಧೀಶರಿಗೆ ಯಾಕಿರಬೇಕು?

ಕೆಲವು 'ನಾಗರಿಕ' ರಾಷ್ಟ್ರಗಳನ್ನು ನೋಡಿರಿ. ಅಲ್ಲಿ ನ್ಯಾಯಾಲಯದಲ್ಲಿ ನಡೆಯುವ ವಿವಾಹ ವಿಚ್ಛೇದನಗಳು ಮಾತ್ರ ಸಿಂಧುವಾಗುವುದು. ಆದರೂ ಅಲ್ಲಿನ ವಿವಾಹ ವಿಚ್ಛೇದನ ಪ್ರಮಾಣವು ಎಲ್ಲಿಗೆ ತಲಪಿದೆ? ಅಮೇರಿಕದಲ್ಲಿ 40 ಶೇಕಡಾ ದಾಟಿಯಾಯಿತು. ಇದು ಜಾಗತಿಕ ವಿವಾಹ ವಿಚ್ಛೇದನ ದಾಖಲೆಯಾಗಿದೆ. ವಿವಾಹ ಮತ್ತು ವಿವಾಹ ವಿಚ್ಛೇದನ ಪ್ರವೀಣರೆಂದು ವರ್ಣಿಸಲಾಗುತ್ತಿರುವ ಈಜಿಪ್ಟ್‌ನಲ್ಲಿ ಇದು ತುಂಬಾ ಕಡಿಮೆಯಿದೆ!

ಪತ್ನಿಯು ತಪ್ಪುಗಾರಳೆಂದು ಸ್ಪಷ್ಟ ರುಜುವಾತಾಗಿ ಆಕೆಯೊಂದಿಗೆ ಸಹಬಾಳ್ವೆ ಅಸಾಧ್ಯವೆಂದು - ನ್ಯಾಯಾಧೀಶನಿಗೆ - ಮನವರಿಕೆಯಾದರೆ ಮಾತ್ರವೇ ಪುರುಷನಿಗೆ ವಿವಾಹ ವಿಚ್ಛೇದನದ ಅನುಮತಿ ನೀಡಬೇಕೆಂಬ ಬೇಡಿಕೆಯಿಂದ ತೀವ್ರವಾದಿಗಳು ಸ್ತ್ರೀಗೆ ಸಾಧಿಸಿ ಕೊಡಬಯಸುವ ಮರ್ಯಾದೆಯೇನು? ತನ್ನನ್ನು ಮೆಚ್ಚದ ಓರ್ವನೊಂದಿಗೆ ಆತನ ಮನೆಯಲ್ಲಿಯೇ ಬಿದ್ದುಕೊಂಡಿರುವುದರಿಂದ ಆಕೆಗೆ ಯಾವ ಮರ್ಯಾದೆಯಿದೆ? ತಾನು ಆಕೆಯನ್ನು ಮೆಚ್ಚುವುದಿಲ್ಲ ಹಾಗೂ ಆಕೆಗೆ ತನ್ನ ಹೃದಯದಲ್ಲಿ ಸ್ಥಾನವಿಲ್ಲವೆಂದು ಸದಾ ವಟ ಗುಟ್ಟುತ್ತಾ, ಪರಸ್ತ್ರೀಯರ ಬಳಿ ಹೋಗುವ ಒಬ್ಬಾತನನ್ನು ಸಹಿಸುವುದರಲ್ಲಿ ಯಾವ ಅಭಿಮಾನವಿದೆ? ಆತನ ಸೇಡು ತೀರಿಸಲಿಕ್ಕಾಗಿ ಆಕೆ ಅಲ್ಲಿಯೇ ಉಳಿಯಬೇಕೇ? ಅದು ಕರ್ಮ ಶಾಸ್ತ್ರವು ಒಂದು ಧ್ಯೇಯವಾಗಿ ಅಂಗೀಕರಿಸಬೇಕಾದ ನೀತಿಯೇ? ಮೆಚ್ಚದ

ಓರ್ವನೊಂದಿಗೆ ಮರ್ಯಾದೆ ಬಿಟ್ಟು ಬಿದ್ದುಕೊಂಡಿರುವುದು ಪ್ರತೀಕಾರದ ಮಾರ್ಗವೇ?

ಇನ್ನು, ಮಕ್ಕಳನ್ನು ಸಾಕಿ ಸಲಹಲಿಕ್ಕಾಗಿ ಆಕೆ ಅಲ್ಲಿರಬೇಕೇ? ಮಕ್ಕಳ ಅಭಿಮಾನ ಮತ್ತು ಬೆಳವಣಿಗೆಗೆ, ಆ ಶಾಪಗ್ರಸ್ತ ಕರಾಳ ವಾತಾವರಣದಲ್ಲಿ ಜೀವಿಸುವುದಕ್ಕಿಂತ ಅವರು ಮಾತೆಯೊಂದಿಗೆ ಪ್ರತ್ಯೇಕವಾಗಿ ವಾಸವಾಗಿರುವುದೇ ಎಷ್ಟೋ ಉತ್ತಮ.

ಹಾಗಿದ್ದರೆ, ಅದಾವುದೂ ಪರಿಹಾರವಲ್ಲ. ಶಿಕ್ಷಣವೇ ಏಕೈಕ ಪರಿಹಾರ ಮಾರ್ಗ. ಎಲ್ಲ ಜನರ ನೈತಿಕ ಮತ್ತು ಮಾನಸಿಕ ಹಾಗೂ ಸಾಂಸ್ಕೃತಿಕ ಗುಣಮಟ್ಟವನ್ನು ಉತ್ತಮಗೊಳಿಸುವುದು, ಪ್ರೀತಿಯೇ ಜೀವನದ ಬುನಾದಿಯಾಗುವಂತೆ, ಒಳಿತು ಎಲ್ಲವನ್ನು ವ್ಯಾಪಿಸುವಂತೆ, ಮಾನಸಿಕ ಭಾವನೆಗಳನ್ನು ಸುಧಾರಿಸಬೇಕು. ವೈವಾಹಿಕ ಜೀವನವು ಒಂದು ಪವಿತ್ರ ಸಂಬಂಧವಾಗಿದ್ದು ಅದನ್ನು ಕ್ಷಣಿಕ ಆವೇಶದಿಂದ ತುಂಡರಿಸಬಾರದೆಂಬ ಪ್ರಜ್ಞೆಯನ್ನು ಪುರುಷನಲ್ಲಿ ಬೆಳೆಸಬೇಕು. ಕೇವಲ ಇದೊಂದರಿಂದಲೇ ಸಮಸ್ಯೆಯ ಪರಿಹಾರ ಸಾಧ್ಯ.

ನೈತಿಕ ಶಿಕ್ಷಣವು ಸುದೀರ್ಘ ಮತ್ತು ಸಾವಧಾನವಾಗಿ ಸಾಗಬೇಕಾದ ಹಾದಿಯಾಗಿದೆ. ಅದಕ್ಕೆ ಇಸ್ಲಾಮಿನಂತೆ ಜೀವಿಸಿ, ದೈವಿಕ ಕಾನೂನು ಶಾಸ್ತ್ರದಂತೆ ನ್ಯಾಯ ಪಾಲಿಸುವಂತಹ ಮುಸ್ಲಿಮ್ ಸಮುದಾಯ ಅತ್ಯಗತ್ಯವಾಗಿದೆ. ಕಠಿಣ ಹಾಗೂ ನಿರಂತರ ತ್ಯಾಗ ಪ್ರಯತ್ನಗಳ ವಿನಾ ಅದನ್ನು ಸಾಧಿಸಲಾರದು. ಮನೆಯಲ್ಲಿಯೂ ಶಾಲೆಯಲ್ಲಿಯೂ, ಸಿನೆಮಾ ಮಂದಿರದಲ್ಲಿಯೂ ಪ್ರಸಾರ ಕೇಂದ್ರದಲ್ಲಿಯೂ ಮಸೀದಿಯಲ್ಲಿಯೂ ಬೀದಿಯಲ್ಲಿಯೂ ಹೀಗೆ ಎಲ್ಲೆಡೆ ಅದು ಸಾಗಬೇಕು... ಎಷ್ಟೇ ತ್ರಾಸದಾಯಕವಾಗಿದ್ದರೂ ಪ್ರಾಮಾಣಿಕವಾದ ಮಾರ್ಗ ಅದೊಂದೇ.

ಶರೀಅತ್‌ನ ಮಟ್ಟಿಗೆ ಉಭಯ ವಿಭಾಗಕ್ಕೂ ಸಮಾನ ಹಕ್ಕು ನೀಡುವುದೇ ನ್ಯಾಯಪೂರ್ಣವಾಗಿದೆ. ಶರೀಅತ್ ಹಾಗೆಯೇ ಮಾಡಿದೆ. ನಿರ್ದಿಷ್ಟ ರೂಪದ ಸಾಮರಸ್ಯ ಮತ್ತು ಹೊಂದಾಣಿಕೆ ಸಾಧ್ಯವೇ ಇಲ್ಲವೆಂದು ತೋರಿದರೆ ಮಾತ್ರ ಅದು ಸ್ತ್ರೀ-ಪುರುಷರಿಗೆ ವಿವಾಹ ವಿಚ್ಛೇದನದ ಹಕ್ಕನ್ನು ನೀಡುತ್ತದೆ.

ಆದರೂ, ಅನುಮತಿ ನೀಡಿರುವ ವಿಷಯಗಳ ಪೈಕಿ ಅಲ್ಲಾಹನು ತಲಾಕನ್ನು ಅತ್ಯಂತ ದ್ವೇಷಿಸುತ್ತಾನೆ.

*****

ಇನ್ನು, ಬಹುಪತ್ನಿತ್ವದ ಸಮಸ್ಯೆಯನ್ನು ನೋಡೋಣ. ಬಹುಪತ್ನಿತ್ವವು ಕೆಲವು ವಿಶಿಷ್ಟ ಪರಿಸ್ಥಿತಿಗಳನ್ನು ಪರಿಗಣಿಸಿರುವಂತಹ ಕಾನೂನಾಗಿದೆ.

ಅದು ಇಸ್ಲಾಮಿನ ಮೂಲಭೂತ ನಿಯಮವೇನಲ್ಲ. "…. ನೀವು ಮೆಚ್ಚುವ ಸ್ತ್ರೀಯರನ್ನು ಎರಡೋ, ಮೂರೋ, ನಾಲ್ಕೋ ವಿವಾಹವಾಗಿರಿ. ಆದರೆ (ಅವರ ಮಧ್ಯೆ)

ನ್ಯಾಯ ಪಾಲಿಸಲು ಸಾಧ್ಯವಿಲ್ಲವೆಂಬ ಆಶಂಕೆ ನಿಮಗಿದ್ದರೆ ಓರ್ವಳನ್ನೇ ವಿವಾಹವಾಗಿರಿ." (ಅನ್ನಿಸಾ:34)

ಇಲ್ಲಿ ನ್ಯಾಯವೇ ಬುನಾದಿಯಾಗಿದೆ. ಅದು ಅಷ್ಟೊಂದು ಸುಲಭದಲ್ಲಿ ಸಾಧ್ಯವಲ್ಲ. ಆದ್ದರಿಂದ ಇಸ್ಲಾಮ್ ಮೂಲಭೂತವಾಗಿ ಏಕಪತ್ನಿತ್ವವನ್ನೇ ಅಂಗೀಕರಿಸಿದೆ. ಆದರೆ ಏಕಪತ್ನಿತ್ವವು ಕೆಲವೊಮ್ಮೆ ಅಕ್ರಮ ಮತ್ತು ಅನ್ಯಾಯವಾಗುವ ಸನ್ನಿವೇಶಗಳಿವೆ. ಅಂತಹ ಸಂದರ್ಭಗಳಲ್ಲಿ ಅದು ಅನಿವಾರ್ಯವಾಗಿ ಒಂದು ವಿಶಿಷ್ಟ ನಿಯಮವನ್ನು ಅವಲಂಬಿಸುತ್ತದೆ. ಅಲ್ಲಿಯೂ ಸಂಪೂರ್ಣ ನ್ಯಾಯ ದೊರೆಯುವ ಅವಕಾಶವಿಲ್ಲವೆಂದು ತಿಳಿದಿದೆ. ಒಂದು ದೊಡ್ಡ ಅಪಾಯವನ್ನು ತಪ್ಪಿಸಲಿಕ್ಕಾಗಿ ಒಂದು ಸಣ್ಣ ಅಪಾಯವನ್ನು ಅದು ಅಂಗೀಕರಿಸಿದೆ.

ತರುಣರು ಬಹುಸಂಖ್ಯೆಯಲ್ಲಿ ಸಾಮೂಹಿಕವಾಗಿ ಮೃತ್ಯುಗೀಡಾಗುವ ಯುದ್ಧ ಮುಂತಾದ ಸಂದರ್ಭಗಳಲ್ಲಿ ಸಮಾಜದಲ್ಲಿ ಇಂತಹ ಕಾನೂನು ನಿರ್ಮಾಣ ಅನಿವಾರ್ಯವಾಗುತ್ತದೆ. ಅಲ್ಲಿ ಸಂತುಲಿತ ಸ್ಥಿತಿಯು ಅಸ್ತವ್ಯಸ್ತವಾಗಿ ಸ್ತ್ರೀಯರು ಪುರುಷರಿಗಿಂತ ಹೆಚ್ಚಾಗುತ್ತಾರೆ. ಅಂತಹ ಪರಿಸ್ಥಿತಿಯಲ್ಲಿ ಸಾಮಾಜಿಕ ಅರಾಜಕತೆ ಮತ್ತು ನೈತಿಕ ಅಧಃಪತನದಿಂದ ರಕ್ಷಣೆ ಹೊಂದಲಿಕ್ಕಾಗಿ ಬಹುಪತ್ನಿತ್ವವನ್ನು ಅವಲಂಬಿಸಬೇಕಾಗುತ್ತದೆ. ಅನಾಥ ಸ್ತ್ರೀಯೋರ್ವಳು ತನ್ನ ಮತ್ತು ಕುಟುಂಬದ ಪೋಷಣೆಗಾಗಿ ಹೊರಗಿಳಿದು ಕೆಲಸ ಮಾಡಬಹುದು. ಅದು ನಿಜ. ಆದರೆ ಸಹಜವಾದ ಲೈಂಗಿಕ ತೃಷೆಯನ್ನು ನೀಗಿಸಲು ಆಕೆ ಏನು ಮಾಡಬೇಕು? ಪರಮ ಸಾಧ್ವಿ ಅಥವಾ ದೇವಚರಳಾಗಿರದ ಸ್ಥಿತಿಯಲ್ಲಿ, ಆಕೆಯು ತನ್ನ ಪಾವಿತ್ರ್ಯವನ್ನು ಅನ್ಯ ಪುರುಷನಿಗೆ ಸಮರ್ಪಿಸದೆ ಈ ಬೇಡಿಕೆಯನ್ನು ಈಡೇರಿಸುವುದು ಹೇಗೆ?... ಹಾಗೆಯೇ ಆಕೆಯ ಸಂತಾನ ಮೋಹ.. ಅದನ್ನು ಆಕೆ ಹೇಗೆ ಸಾಧಿಸಬೇಕು? ಸಂತಾನೋತ್ಪಾದನೆಯು ಒಂದು ನೈಸರ್ಗಿಕ ಹಂಬಲವಾಗಿದೆ. ಅದರಿಂದ ಯಾರೊಬ್ಬರೂ ಮುಕ್ತರಲ್ಲ. ಈ ಹಂಬಲವು ಸ್ತ್ರೀಯರಲ್ಲಿ ಪುರುಷರಿಗಿಂತ ಪ್ರಬಲ ಮತ್ತು ತೀವ್ರವಾಗಿರುವುದು. ಅದು ಆಕೆಯ ಅಸ್ತಿತ್ವದ ಮೂಲಾಧಾರವಾಗಿದೆ. ಅದಿಲ್ಲದಿದ್ದರೆ ಜೀವನದ ಮಾಧುರ್ಯವನ್ನು ಆಕೆ ಸವಿಯಲಾರಳು.

ಕೇವಲ ಸ್ತ್ರೀಯ ಹಿತದೃಷ್ಟಿಯಿಂದಲೇ ಆಲೋಚಿಸಿದರೂ ಇಂತಹ ಬೇಡಿಕೆಗಳ ಈಡೇರಿಕೆಗೆ ಓರ್ವನೇ ಪುರುಷನ ಆಶ್ರಯದಲ್ಲಿ ಒಂದಕ್ಕಿಂತ ಹೆಚ್ಚು ಸ್ತ್ರೀಯರು ಸೇರಿಕೊಳ್ಳುವುದರ ಹೊರತು ಬೇರೆ ಮಾರ್ಗವೇನಿದೆ? ಹೌದು, ಬಹಿರಂಗವಾಗಿಯೂ ಕಾನೂನುಬದ್ಧವಾಗಿಯೂ ಸಮಾನ ಹಕ್ಕುಗಳೊಂದಿಗೆ (ಗುಪ್ತ ಮನೋಭಾವಗಳ ಮಟ್ಟಿಗೆ ಅದು ಸಾಧ್ಯವಾಗಬೇಕೆಂದಿಲ್ಲ. ಯಾಕೆಂದರೆ ಕಾನೂನಿನಿಂದ ಅದರ ಮೇಲೆ ಯಾವ ಪ್ರಭಾವ ಬೀರಲೂ ಸಾಧ್ಯವಿಲ್ಲ.) ಓರ್ವ ಪುರುಷನ ಆಶ್ರಯದಲ್ಲಿ ಸೇರುವುದೇ ಉತ್ತಮ.

ಇದು ಪ್ರಸ್ತುತ ಕಾನೂನು ನಿರ್ಮಾಣದ ಮೂಲಕ ಇಸ್ಲಾಮ್ ಗುರಿಯಾಗಿಟ್ಟಿರುವ ಲವು ಧ್ಯೇಯಗಳಾಗಿವೆ. ಓರ್ವ ಪುರುಷನ ಆಶ್ರಯದಲ್ಲಿ ಮೂರ್‍ನಾಲ್ಕು ಸ್ತ್ರೀಯರು ೀರುವ ಮಾತಂತಿರಲಿ ಈರ್ವರು ಸ್ತ್ರೀಯರೇ ಹೊಂದಿಕೊಳ್ಳುವುದು ಸುಲಭಸಾಧ್ಯವೆಂದು ಯಾರೂ ಹೇಳಲಾರರು. ಆದರಿಂದ ಆಕೆಯ ಮನಸ್ಸಿಗೆ ಸಮಾಧಾನವಾಗಲೀ ಸಂತೋಷವಾಗಲೀ ದೊರೆಯದು. ಆದರೆ ಅದೊಂದು ಅನಿವಾರ್ಯ ಸ್ಥಿತಿ. ತಾನು ಏಕಾಂಗಿಯಾಗಿ ಉಳಿಯುವುದಕ್ಕಿಂತ ಇದರಲ್ಲಿ ಕಡಿಮೆ ಆಪತ್ತಿದೆಯೆಂದು ಮನಗಾಣದಿರುತ್ತಿದ್ದರೆ ಈ ದುರ್ಗಮ ಮಾರ್ಗವನ್ನು ಆಕೆ ಅವಲಂಬಿಸುತ್ತಿರಲಿಲ್ಲ.

ಸ್ತ್ರೀ-ಪುರುಷರ ಅನುಪಾತವನ್ನು ಯುದ್ಧದಂತೆಯೇ ಇತರ ಹಲವು ಕಾರಣಗಳೂ ಅಸ್ತವ್ಯಸ್ತಗೊಳಿಸಬಹುದು. ಬಾಹ್ಯ ಜಗತ್ತಿಗೆ ಸಂಬಂಧಿಸಿದ ಅವಘಡ ಮತ್ತು ಸಾಂಕ್ರಾಮಿಕ ರೋಗಗಳಿಗೆ ಹೆಚ್ಚಿನ ಸಲ ಪುರುಷರೇ ಬಲಿಯಾಗುತ್ತಾರೆ. ಪುರುಷರ ಸುರಕ್ಷಿತತೆಯು ಸ್ತ್ರೀಯರಿಗಿಂತ ಕಡಿಮೆ. ಇನ್ನು ಸ್ತ್ರೀ-ಪುರುಷರ ಸಂಖ್ಯಾ ನಿಷ್ಪತ್ತಿಯು ಸಮಾನವಾಗಿರುವಾಗ ಬಹುಪತ್ನಿತ್ವವಿರಲಾರದು. ಇತರರು ಬಹುಪತ್ನಿತ್ವ ಸ್ವೀಕರಿಸಿದ್ದರಿಂದ ವಿವಾಹವಾಗಬಯಸುವ ಓರ್ವ ಯುವಕನಿಗೆ ಸ್ತ್ರೀಯರು ದೊರೆಯಲಿಲ್ಲವೆಂಬ ಸನ್ನಿವೇಶ ಎಂದೂ ಬಂದಿಲ್ಲ.

ಅದಲ್ಲದೇ ಕರ್ಮಶಾಸ್ತ್ರ ವಿದ್ವಾಂಸರು ಸಾಮಾನ್ಯವಾಗಿ ಅರಿತಿರುವ ಕೆಲವು ವೈಯಕ್ತಿಕ ಸಂದರ್ಭಗಳಿವೆ. ಅಂತಹ ಸಂದರ್ಭಗಳಲ್ಲಿಯೂ ಬಹುಪತ್ನಿತ್ವ ಅನಿವಾರ್ಯ ವಾಗುತ್ತದೆ. ಅಪರೂಪಕ್ಕೊಮ್ಮೆ ಕೆಲವು ಪುರುಷರು ಲೈಂಗಿಕವಾಗಿ ಅತಿ ಪ್ರಬಲರಾಗಿರುತ್ತಾರೆ. ಒಬ್ಬಳೇ ಪತ್ನಿಗೆ ಆತನನ್ನು ಸಂತೃಪ್ತಿಗೊಳಿಸಲು ಸಾಧ್ಯವಾಗದಿರಬಹುದು. ಆಗ ಆತನು ಕಾನೂನುಬದ್ಧವಾಗಿ ದ್ವಿತೀಯ ಪತ್ನಿಯನ್ನು ಹೊಂದಬೇಕಾಗುವುದು. ಅಥವಾ ಗುಪ್ತಕಾಮಿನಿಯರನ್ನು ಸಂಪರ್ಕಿಸಬೇಕಾಗುತ್ತದೆ. ಇದು ಸಭ್ಯ ಸಮಾಜವು ಎಂದೆಂದಿಗೂ ಒಪ್ಪದ ಒಂದು ನೀಚ ಕಾರ್ಯವಾಗಿದೆ.

ಪತ್ನಿಯ ಬಂಜೆತನವೂ ಆ ಕಾರಣಗಳಲ್ಲೊಂದಾಗಿದೆ. ಸಂತಾನ ಮೋಹವು ಮಾನವನಲ್ಲಿ ಅಗಾಧವಾಗಿ ಬೇರೂರಿರುತ್ತದೆ. ಅದು ಪವಿತ್ರ ಮತ್ತು ಉತ್ಕೃಷ್ಟ ಅಭಿಲಾಷೆಯಾಗಿದೆ. ಬಂಜೆತನಕ್ಕೆ ಪತ್ನಿಯು ಅಪರಾಧಿನಿಯಲ್ಲವೆಂಬುದು ನಿಜ. ಆದರೆ ಓರ್ವ ಪತಿಯ ಸಂತಾನಭಾಗ್ಯದ ಹಕ್ಕನ್ನು - ಆತನಿಗಿಷ್ಟವಿಲ್ಲದಿದ್ದರೂ ನಿಷೇಧಿಸಬೇಕೆಂದು ಯಾರೂ ಹೇಳಲಾರರು. ಇನ್ನೋರ್ವಳನ್ನು ತನ್ನ ಪತಿಯೊಂದಿಗೆ ಸೇರಿಸಲು ಪ್ರಥಮ ಪತ್ನಿ ಒಪ್ಪಿದರೆ ಅದು ಸಾಧ್ಯವಾಗುವುದು. ಒಂದು ವೇಳೆ ಆಕೆಗೆ ಅದು ಅಸಹ್ಯವೆಂದಾದರೆ, ಆಗ ವಿಚ್ಛೇದನವೇ ಉಳಿಯುವ ಮಾರ್ಗ.

ಕೆಲವೊಮ್ಮೆ ಪತ್ನಿಯು ನಿತ್ಯರೋಗಿಯಾಗಿರಬಹುದು. ಆಕೆಯೊಂದಿಗೆ ಲೈಂಗಿಕ ಸಂಬಂಧ ಅಸಾಧ್ಯವಾಗಿರಬಹುದು. ಇಂತಹ ಸನ್ನಿವೇಶದಲ್ಲಿ ಲೈಂಗಿಕ ಕಾಮನೆಯು ಹೀನವೆಂದೂ ಅದಕ್ಕಾಗಿ ಸ್ತ್ರೀಯೋರ್ವಳ ಸೌಭಾಗ್ಯವು ನಾಶವಾಗಬಾರದೆಂದೂ ಯಾರೂ

ಹೇಳಲಾರರು.[1] ಇಲ್ಲಿರುವ ಸಮಸ್ಯೆಯು ಕೀಳು ಮೇಲೆಂಬುದಲ್ಲ. ಇದೂ ಬೇರೆ ಉಪಾಯವಿಲ್ಲದ ಅನಿವಾರ್ಯ ಸ್ಥಿತಿಯಾಗಿದೆ. ಇನ್ನು, ಓರ್ವ ಪುರುಷನು ತನ್ನ ಪತ್ನಿಯ ಭಾವನೆಗಳನ್ನು ಮನ್ನಿಸಿ ಅದರಿಂದ ಮೇಲೇರಲು ಸಾಧ್ಯವಾದರೆ ಅದು ಹೆಚ್ಚು ಪ್ರಶಂಸಾರ್ಹ. ಮಾನವ ಸಾಮರ್ಥ್ಯಕ್ಕೆ ಮೀರಿದ ವಿಷಯವನ್ನು ಅಲ್ಲಾಹನು ಹೇರುವುದಿಲ್ಲ. ಹೊರಗೆ ಸಭ್ಯತೆ ನಟಿಸುವುದಕ್ಕಿಂತ ಬಹಿರಂಗವಾಗಿ ಸತ್ಯವನ್ನು ಒಪ್ಪಿಕೊಳ್ಳುವುದೇ ಉತ್ತಮ. ಬಹುಪತ್ನಿತ್ವವನ್ನು ನಿಷೇಧಿಸಿರುವ ರಾಷ್ಟ್ರಗಳಲ್ಲಿ ನಡೆಯುತ್ತಿರುವಂತೆ ಕತ್ತಲೆಯ ಮರೆಯಲ್ಲಿ ವಂಚನೆ ತೋರುವುದಕ್ಕಿಂತ ಅದೆಷ್ಟೋ ಉತ್ತಮ.

ಹಾಗೆಯೇ ಪತಿಗೆ ಪತ್ನಿಯನ್ನು ಪ್ರೀತಿಸಲಾಗದ, ಅದೇ ವೇಳೆ ಆಕೆಯನ್ನು ತೊರೆಯಲೂ ಮನಸ್ಸಿಲ್ಲದ ಕೆಲವು ಸಂದರ್ಭಗಳನ್ನೂ ನಾವು ನೆನಪಿನಲ್ಲಿಡಬೇಕಾಗಿದೆ. ಅಂತಹ ಸಂದರ್ಭಗಳನ್ನು ತಪ್ಪಿಸಲು ಅಥವಾ ನಿಯಂತ್ರಿಸಲು ಮಾನವನಿಗೆ ಸಾಧ್ಯವಾಗದು.

ಈ ಎಲ್ಲಾ ಪರಿಸ್ಥಿತಿಗಳಲ್ಲಿ ಪುರುಷನು ತನ್ನ ಪ್ರಥಮ ಪತ್ನಿಯನ್ನು ತೊರೆಯಲೊಪ್ಪದಿರುವುದನ್ನು ನಾವು ಕಾಣುತ್ತೇವೆ. ಆಕೆಯೊಂದಿಗಿನ ಸುದೀರ್ಘ ಕಾಲದ ಸಹಬಾಳ್ವೆಯನ್ನು ಮರೆಯಲು ಅಥವಾ ಕಡೆಗಣಿಸಲು ಆತ ಸಿದ್ಧನಿಲ್ಲ. ಇದು ಪತ್ನಿಯ ಮಟ್ಟಿಗೆ ಅಷ್ಟೊಂದು ಹಿತಕರವಲ್ಲದಿದ್ದರೂ ಅತಿ ಶ್ರೇಷ್ಠವಾದ ವಿಚಾರಧಾರೆ ಯಾಗಿದೆ. ಪತ್ನಿಗೆ ಇನ್ನಷ್ಟು ಕಷ್ಟ ಅಥವಾ ಕಿರುಕುಳ ಕೊಡಲಿಕ್ಕಾಗಿ ಆಕೆಯನ್ನು ಸಂಗಡ ಇರಿಸಿಕೊಂಡಿದ್ದರೆ ಅದು ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ನಿಕೃಷ್ಟ ಕೆಲಸವಾಗಿದೆ. ಪತ್ನಿಯು ಅಪೇಕ್ಷಿಸಿದ ಕ್ಷಣದಲ್ಲಿಯೇ ವಿವಾಹ ವಿಚ್ಛೇದನ ಮಾಡಬೇಕು.

*****

ನಾವು ಆರೋಪಗಳ ಬಗ್ಗೆ ಇನ್ನೂ ಪರಿಶೀಲಿಸೋಣ. ಉದ್ಯೋಗ ಹಕ್ಕಿನ ಸಮಸ್ಯೆಯನ್ನು ತೆಗೆದುಕೊಳ್ಳೋಣ-

ಅದೊಂದು ಹಕ್ಕೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇಸ್ಲಾಮಿನ ಆರಂಭ ಹಂತದಲ್ಲಿ ಸ್ತ್ರೀಯರು ತಮ್ಮ ಪರಿಸರಕ್ಕೆ ಯುಕ್ತವಾದ ಉದ್ಯೋಗವನ್ನು ಮಾಡುತ್ತಿದ್ದರು. ಇಲ್ಲಿರುವ ಸಮಸ್ಯೆಯು ಹಕ್ಕು ಸ್ಥಾಪನೆಯದ್ದಲ್ಲ. ವಾಸ್ತವದಲ್ಲಿ ಸಮಾಜಕ್ಕೂ ಸ್ವಯಂ ಸ್ತ್ರೀಗೂ ಅಗತ್ಯವಾದ ಕೆಲಸಗಳಲ್ಲಿ ನಿರತವಾಗುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಹುಡುಗಿಯರ ಶಿಕ್ಷಣ, ರೋಗಿಗಳ ಸೇವೆ, ಸ್ತ್ರೀಯರ ಚಿಕಿತ್ಸೆ ಮುಂತಾದ ಸ್ತ್ರೀಯರಿಗೆ ಸಂಬಂಧಿಸಿದ ಕೆಲಸಗಳನ್ನು ಇಸ್ಲಾಮ್ ಕೇವಲ ಅನುಮತಿಸಿರುವುದಷ್ಟೇ ಅಲ್ಲ, ಅದು

---

1. ಜೀವನೋದ್ದೇಶ ನಿರ್ವಹಣೆಗೆ ಅಗತ್ಯವಿರುವ ನೈಸರ್ಗಿಕ ಭಾವನೆಗಳೆಲ್ಲವೂ ಮೂಲಭೂತವಾಗಿ ಪವಿತ್ರ ಮತ್ತು ಗೌರವಾರ್ಹವಾಗಿದ್ದು ಅವುಗಳನ್ನು ಯೋಗ್ಯರೀತಿಯಲ್ಲಿ ಸಂತೃಪ್ತಿಗೊಳಿಸಬೇಕೆಂದೂ ಇಸ್ಲಾಮ್ ಹೇಳುತ್ತದೆ. ಅದು ಅಪರಾಧಕ್ಕೆಡೆ ಕೊಟ್ಟಾಗ ಮಾತ್ರ ಇಸ್ಲಾಮ್ ಅದನ್ನು ದ್ವೇಷಿಸುತ್ತದೆ.

ಸ್ತ್ರೀಯರ ಕಡ್ಡಾಯ ಕೆಲಸವೆಂದೂ ಭಾವಿಸುತ್ತದೆ. ಅದಕ್ಕಾಗಿ ಪುರುಷರನ್ನು ಯುದ್ಧಕ್ಕೆ ಸನ್ನದ್ಧಗೊಳಿಸುವಂತೆ ಅವರನ್ನು ತರಬೇತುಗೊಳಿಸಬೇಕು. ಕುಟುಂಬ ಪೋಷಣೆಗೆ ಜನರಿಲ್ಲದಾಗ ಅಥವಾ ಪುರುಷನ ಆದಾಯವು ಸಾಕಾಗದಿರುವಾಗ, ಹೊರಗೆ ಹೋಗಿ ಕೆಲಸ ಮಾಡುವ ಹಕ್ಕನ್ನು ಇಸ್ಲಾಮ್ ಸ್ತ್ರೀಗೆ ನೀಡಿದೆ. ಜೀವನ ನಿರ್ವಹಣೆಗಾಗಿ ವಾಮಮಾರ್ಗಗಳನ್ನು ಅವಲಂಬಿಸುವುದಕ್ಕಿಂತ ಅದು ಎಷ್ಟೋ ಉತ್ತಮ.

ಇವೆಲ್ಲವೂ ಅನಿವಾರ್ಯ ಪರಿಸ್ಥಿತಿಗಳಾಗಿವೆ. ಈ ಆಧಾರದಲ್ಲಿಯೇ ಇಸ್ಲಾಮ್ ಅದಕ್ಕೆ ಅನುಮತಿ ನೀಡುತ್ತದೆ. ಆದರೆ ಪಾಶ್ಚಾತ್ಯ ಮತ್ತು ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಕಂಡು ಬರುತ್ತಿರುವಂತೆ, ಸ್ತ್ರೀಯರು ಹೊರಗೆ ಹೋಗಿ ಕೆಲಸ ಮಾಡುವುದನ್ನು ಸಮಾಜದ ಮೂಲಭೂತ ಸ್ವಭಾವವೆಂದು ಭಾವಿಸುವುದು ಮೂಢತನವಾಗಿದೆ. ಇಸ್ಲಾಮ್ ಅದನ್ನು ಅಂಗೀಕರಿಸುವುದಿಲ್ಲ. ಯಾಕೆಂದರೆ, ಅದು ಸ್ತ್ರೀಯನ್ನು ಆಕೆಯ ಪ್ರಾಥಮಿಕ ನೀತಿಯಿಂದ ಹೊರ ಹಾಕುವುದೇ ಆಗಿದೆ. ಅದರಿಂದ ಸಾಧಿತವಾಗುವ ಒಳಿತಿಗಿಂತ ಹೆಚ್ಚಾಗಿ, ಮಾನಸಿಕ, ಸಾಮಾಜಿಕ ಮತ್ತು ನೈತಿಕವಾದ ಅನೇಕಾರು ಕೆಡುಕುಗಳಿಗೆ ಅದು ಪ್ರೇರಕವಾಗುವುದು.

ಸ್ತ್ರೀಯ ದೈಹಿಕ, ವೈಚಾರಿಕ ಮತ್ತು ಮಾನಸಿಕ ರಚನೆಯು ಮಾತೃತ್ವವೆಂಬ ವಿಶಿಷ್ಟ ನೀತಿ ನಿರ್ವಹಣೆಗಾಗಿ ಸಜ್ಜುಗೊಳಿಸಲ್ಪಟ್ಟಿರುವುದನ್ನು ಯಾರೂ ನಿರಾಕರಿಸಲಾರರು. ನಿಸರ್ಗದತ್ತವಾದ ಈ ನೀತಿಯನ್ನು ಆಕೆ ನಿರ್ವಹಿಸದಿದ್ದರೆ, ನಿರ್ದಿಷ್ಟ ಧ್ಯೇಯಕ್ಕಾಗಿ ಸಜ್ಜುಗೊಳಿಸಲ್ಪಟ್ಟ ಜೈವಿಕ ಶಕ್ತಿಯನ್ನು ನಿರ್ಲಕ್ಷಿಸಿ ಅದನ್ನು ಮೂಲ ಹಾದಿಯಿಂದ ತಪ್ಪಿಸಿದಂತಾದೀತು. ಅನಿವಾರ್ಯ ಪರಿಸ್ಥಿತಿಗಳಲ್ಲಿ ಹಾಗಾಗುವುದಿದ್ದರೆ ತೊಂದರೆಯಿಲ್ಲ. ಆದರೆ ಒಂದು ಮಾನವ ಜನಾಂಗದ ಅನಾಗರಿಕ ಭಾವ ಕುಚೇಷ್ಟೆಗಳಿಗನುಗುಣವಾಗಿ ಆಕೆಯನ್ನು ಕುಣಿಯಗೊಡಬೇಕೆಂಬ ವಾದವು ಗಂಡಾಂತರಕಾರಿಯಾಗಿದೆ. ಅತಿ ಭೋಗ ಲಾಲಸೆಯೇ ಅದರ ಹಿಂದಿರುವ ಸ್ವಾರ್ಥ ಧ್ಯೇಯ. ಅದರಲ್ಲಿ ಸುಪ್ತವಾಗಿರುವ ಭಾವಿ ಗಂಡಾಂತರವನ್ನು ಯಾರೂ ಗಮನಿಸುವುದಿಲ್ಲ. ಆದರೆ ಇಸ್ಲಾಮಿಗೆ ಅದನ್ನೆಂದೂ ಅಂಗೀಕರಿಸಲು ಸಾಧ್ಯವಿಲ್ಲ. ಒಂದು ವೇಳೆ ಅದನ್ನು ಅಂಗೀಕರಿಸಿದರೆ, ಅದರ ಅತೀ ದೊಡ್ಡ ವೈಶಿಷ್ಟ್ಯವು ನಷ್ಟವಾದೀತು. ಹೌದು, ಜನಾಂಗಗಳ ಮಧ್ಯೆ ಯಾವ ಭೇದಭಾವ ವನ್ನೂ ತೋರದೆ, ಮಾನವಕುಲದ ಸಮಗ್ರ ಏಕತೆಯನ್ನು ವೀಕ್ಷಿಸುವ ಅದರ ವಿಶಾಲ ದೃಷ್ಟಿಕೋನ.

ಮಾತೆಯಾಗಿರುತ್ತಾ, ಸ್ತ್ರೀಯು ಉದ್ಯೋಗ ನಿರ್ವಹಿಸಬಹುದಲ್ಲವೇ. ಮಕ್ಕಳ ಸಮಸ್ಯೆಯನ್ನು ಮಕ್ಕಳ ಕಲ್ಯಾಣ ಕೇಂದ್ರಗಳು ನಿವಾರಿಸಬಹುದೆಂದು ಕೆಲವರು ವಾದಿಸುತ್ತಾರೆ.

ಇದು ಅನುಭವದಿಂದ ತಿರಸ್ಕೃತವಾಗಿರುವ ಬಾಲಿಶ ವಾದವಾಗಿದೆ. ಮಕ್ಕಳಿಗೆ ಅಗತ್ಯವಿರುವ ದೈಹಿಕ ಸಂರಕ್ಷಣೆ ಮತ್ತು ಬೌದ್ಧಿಕ, ಮಾನಸಿಕ ಶಿಕ್ಷಣ ನೀಡಲು ನರ್ಸರಿ ಗಳಿಗೆ ಸಾಧ್ಯವಾಗಬಹುದು. ಆದರೆ, ಜೀವನದ ಅಸ್ತಿತ್ವಕ್ಕೆ ಅನಿವಾರ್ಯವಾಗಿರುವ, ಉತ್ತಮ

ಗುಣ ನಡವಳಿಕೆಗಳ ಪೋಷಣೆಗೆ ಅತ್ಯಗತ್ಯವಾಗಿರುವ ಅಂಶ ದೊರೆಯಲಾರದು. ಮಾತೃಸ್ನೇಹ! ಮಾತೃಲಾಲನೆ! ಹತ್ತಮ್ಮ ಹೊತ್ತರೂ ಹೆತ್ತಮ್ಮಳಿಗೆ ಸಾಟಿಯಾಗದ ಸ್ವಂತ ಅಮ್ಮ!"

ಆಧುನಿಕ ಹುಚ್ಚು ನಾಗರಿಕತೆಗಾಗಲೀ ವಿವೇಕಹೀನ ಕಮ್ಯೂನಿಸ್ಟರಿಗಾಗಲೀ ಮಾನವ ಪ್ರಕೃತಿಯನ್ನು ಬದಲಾಯಿಸಲು ಸಾಧ್ಯವಿಲ್ಲ. ಅತಿ ಕಡಿಮೆಯೆಂದರೂ ಪ್ರಥಮ ಎರಡು ವರ್ಷಗಳಲ್ಲಿ ಮಗುವಿಗೆ ಮಾತೃಲಾಲನೆ ದೊರೆಯಲೇಬೇಕು. ಅದರಲ್ಲಿ ಇನ್ನಾರೂ ಭಾಗಿಗಳಾಗಬಾರದು. ಪ್ರೀತಿಯ ಸಹೋದರನೂ ಕೂಡಾ. ಅದಕ್ಕೆ ತನ್ನ ಬೇಡಿಕೆಗಳನ್ನು ಸದಾ ಗಮನಿಸುವ ತನ್ನ ಕಷ್ಟ ಯಾತನೆಗಳನ್ನು ತಿಳಿಯುವ, ಸಾಂತ್ವನ ಮತ್ತು ಅಭಯ ನೀಡಿ ಸಂರಕ್ಷಿಸುವ, ನಿರಂತರ ಜಾಗ್ರತೆ ವಹಿಸುವ ಅಮ್ಮನ ಅಗತ್ಯವಿದೆ. ತಾಯಿಯ ಕೊರತೆಯು ಆತನ ಮನಸ್ಸಿನಲ್ಲಿ ಸಂಘರ್ಷ ಮತ್ತು ಸಂಕುಚಿತತೆಯನ್ನು ನಿರ್ಮಿಸುವುದು. ಶಿಶುಕಲ್ಯಾಣ ಕೇಂದ್ರಗಳಲ್ಲಿ ನಡೆಯುವುದೇನು? ಅಲ್ಲಿ ಹತ್ತಿಪ್ಪತ್ತು ಮಕ್ಕಳು ಓರ್ವ ಕೃತಕ 'ಮಮ್ಮಿ'ಯ ಆಶ್ರಯದಲ್ಲಿ ಸೇರುವರು. ಆಕೆಯನ್ನು ಒಲಿಸಿಕೊಳ್ಳಲು ಎಲ್ಲರೂ ಪ್ರಯತ್ನಿಸುತ್ತಾರೆ. ಈ ಪ್ರಯತ್ನವು ಕ್ರಮೇಣ ಸ್ಪರ್ಧೆಗೆ ತಿರುಗುತ್ತದೆ. ಸಂಘರ್ಷ ಮತ್ತು ಸ್ಪರ್ಧಾತ್ಮಕ ಮನೋಭಾವದಿಂದ ಅವರು ಬೆರೆಯುತ್ತಾರೆ. ಇದರಿಂದಾಗಿ ಆ ಮುದ್ದು ಹೃದಯಗಳು ಪ್ರೀತಿ ಮತ್ತು ಸಹೋದರತೆಯ ಒರತೆಯಿಲ್ಲದ ಬರಡು ಭೂಮಿಯಾಗಿ ಮಾರ್ಪಡುತ್ತವೆ.

ಸ್ತ್ರೀಗೆ ಉದ್ಯೋಗವು ಕೆಲವೊಮ್ಮೆ ಅನಿವಾರ್ಯವಾಗುವಂತೆಯೇ ಮಕ್ಕಳಿಗೆ ಪರಿಸ್ಥಿತಿಯ ಒತ್ತಡಗಳಿಂದಾಗಿ ಶಿಶುಕಲ್ಯಾಣ ಕೇಂದ್ರಗಳ ಪರಿಪಾಲನೆಯೂ ಅನಿವಾರ್ಯ ವಾಗುತ್ತದೆ. ಅದೇ ವೇಳೆ ಯಾವ ಅನಿವಾರ್ಯತೆಯೂ ಇಲ್ಲದೆ ಅದನ್ನೇ ಆಧಾರಗೊಳಿಸುವುದು ಅವಿವೇಕತನವಾಗಿದೆ.

ಭಾವೀ ಜನಾಂಗವನ್ನು ವಿನಾಶಕೂಪಕ್ಕೆ ಎಸೆದು ಲೌಕಿಕ ಸವಲತ್ತುಗಳ ಉತ್ಪಾದನೆಯನ್ನು ಹೆಚ್ಚಿಸುವುದರಿಂದ ಯಾವ ಪ್ರಯೋಜನವಿದೆ?

ಮತಿಗೆಟ್ಟ ಪಾಶ್ಚಾತ್ಯ ಲೋಕದಲ್ಲಿ ಅದರ ಐತಿಹಾಸಿಕ, ಭೌಗೋಳಿಕ, ರಾಜಕೀಯ ಮತ್ತು ಆರ್ಥಿಕ ಒತ್ತಡಗಳ ಬಗ್ಗೆ ಏನಾದರೂ ಸಮರ್ಥನೆಯಿರಬಹುದು. ಆದರೆ ಮುಸ್ಲಿಮ್ ಲೋಕದಲ್ಲಿ ನಮಗೆ ಆ ಬಗ್ಗೆ ಯಾವ ಸಮರ್ಥನೆಯಿದೆ? ಸ್ತ್ರೀಯರು ಉದ್ಯೋಗ ಕೇಂದ್ರಗಳಿಗೆ ಹೋಗುವುದಕ್ಕೆ, ದುಡಿಯುವ ಸಾಮರ್ಥ್ಯವಿರುವ ಪುರುಷರ ಅಭಾವ ಕಾರಣವೇ? ಮುಸ್ಲಿಮ್ ಪುರುಷನು, ಆತ ಪತಿ, ಪಿತ, ಸಹೋದರ ಅಥವಾ ಸಂಬಂಧಿಕ ಯಾರೇ ಆಗಿರಲಿ, ಸ್ತ್ರೀಯ ಸಂರಕ್ಷಣೆಯ ಹೊಣೆಯಿಂದ ಹಿಂದೆ ಸರಿದು, ಆಕೆಯನ್ನು ಜೀವನ ನಿರ್ವಹಣೆಗಾಗಿ ಬೀದಿಗಿಳಿಸುವುದನ್ನು ನಾವು ಹೇಗೆ ತಾನೇ ಸಮರ್ಥಿಸಬಹುದು?

ಸ್ತ್ರೀಯು ಉದ್ಯೋಗದಲ್ಲಿದ್ದರೆ ಅದರಿಂದ ಆಕೆಗೆ ಸ್ವತಂತ್ರ ಆರ್ಥಿಕ ಅಸ್ತಿತ್ವ ಮತ್ತು ತನ್ಮೂಲಕ ಗೌರವ ದೊರೆಯುವುದೆಂದು ಅವರು ವಾದಿಸುತ್ತಾರೆ. ಸ್ತ್ರೀಯರಿಗೆ ಸ್ವತಂತ್ರ ಆರ್ಥಿಕ ಅಸ್ತಿತ್ವವಿರಬಾರದೆಂದು ಇಸ್ಲಾಮ್ ಹೇಳುತ್ತಿದೆಯೇ? ಮುಸ್ಲಿಮ್ ಲೋಕದಲ್ಲಿರುವ ಸಮಸ್ಯೆಯು ವ್ಯವಸ್ಥೆಯದ್ದಲ್ಲ. ಸ್ತ್ರೀ-ಪುರುಷರಿಗೆ ಗೌರವಾರ್ಹವಾದ ಜೀವನೋಪಾಯವಿಲ್ಲದೆ ಸಾರ್ವತ್ರಿಕವಾಗಿರುವ ಬಡತನವೇ ವಾಸ್ತವಿಕ ಸಮಸ್ಯೆಯಾಗಿದೆ. ಸ್ತ್ರೀ-ಪುರುಷರನ್ನೊಳಗೊಂಡ ಇಡೀ ಸಮಾಜವನ್ನು ಶ್ರೀಮಂತಗೊಳಿಸಲಿಕ್ಕಾಗಿ ಉತ್ಪಾದನಾ ಬಲವನ್ನು ಹೆಚ್ಚಿಸುವುದೇ ಅದಕ್ಕೆ ಪರಿಹಾರವಾಗಿದೆ. ಹೀಗೆ ಬಡತನವನ್ನು ಸಂಪೂರ್ಣವಾಗಿ ತೊಲಗಿಸಬೇಕು. ಅದರ ಹೊರತು ಉದ್ಯೋಗ ರಂಗದಲ್ಲಿ ಸ್ತ್ರೀಯು ಪುರುಷನೊಂದಿಗೆ ಸ್ಪರ್ಧಿಸುವುದು ಪರಿಹಾರವಲ್ಲ.

ಕುಟುಂಬ ಪೋಷಣೆಗೆ ಒಂದೇ ಆದಾಯ ಮೂಲವಿರುವುದಕ್ಕಿಂತ ಎರಡು ಆದಾಯ ಮೂಲಗಳಿರುವುದು ಹೆಚ್ಚು ಸುರಕ್ಷಿತವೆಂದು ಕೆಲವರು ವಾದಿಸುತ್ತಾರೆ. ವಿರಳ ಪರಿಸ್ಥಿತಿಗಳಲ್ಲಿ ಅದು ಸೂಕ್ತವಾಗಿರಬಹುದು. ಆದರೆ ನೈಸರ್ಗಿಕವಾಗಿ ಸ್ತ್ರೀಗೆ ಸರಿ ಹೊಂದದ ಕೆಲಸಗಳಿಂದ ಪುರುಷನನ್ನು ದೂರವಿರಿಸಿ ಸ್ತ್ರೀಯರೆಲ್ಲರೂ ಸಾಮೂಹಿಕವಾಗಿ ರಂಗಕ್ಕಿಳಿಯಬೇಕೆಂದರೆ, ಒಂದು ಹೊಸ ಕುಟುಂಬದ ಉದಯವನ್ನು ತಡೆಯ ಬೇಕೆಂದರ್ಥ. ಅದರಿಂದ ಕಾನೂನು ಬದ್ಧವಾದ ಲೈಂಗಿಕ ಸಂಬಂಧಕ್ಕೆ ಆತಂಕವೊಡ್ಡಿ ಅನೈತಿಕ ಕೃತ್ಯಗಳಿಗೆ ದಾರಿ ಮಾಡಿಕೊಟ್ಟಂತಾದೀತು. ಇಂತಹ ದುರವಸ್ಥೆಯನ್ನು ನಿರ್ಮಿಸುವುದಕ್ಕೆ ಯಾವ ಆರ್ಥಿಕ, ಸಾಮಾಜಿಕ ಅಥವಾ ನೈತಿಕ ಸಮರ್ಥನೆ ದೊರೆತೀತು?

ಸ್ತ್ರೀಯನ್ನು ಆಕೆಯ ಜನ್ಮಸಿದ್ಧ ಧ್ಯೇಯವಾಗಿರುವ ತಾಯ್ತನಕ್ಕಾಗಿ ವಿಶಿಷ್ಟವಾಗಿ ಚುನಾಯಿಸುವ ಮೂಲಕ ಇಸ್ಲಾಮ್, ಮಾನವನ ನೈಸರ್ಗಿಕತೆ ಮತ್ತು ಸಮಾಜದ ಬೇಡಿಕೆಗಳನ್ನು ಜಂಟಿಯಾಗಿ ಪರಿಗಣಿಸಿದೆ. ಆದ್ದರಿಂದಲೇ ಸ್ತ್ರೀಯ ಸಂರಕ್ಷಣಾ ಹೊಣೆಯನ್ನು ಪುರುಷರಿಗೆ ವಹಿಸಿಕೊಡಲಾಯಿತು. ಅದರಿಂದ ಹಿಂಜರಿಯಲು ಆತನಿಗೆ ಅನುಮತಿಯಿಲ್ಲ. ಜೀವನ ನಿರ್ವಹಣೆಯ ಸಂಕೀರ್ಣತೆಯಿಂದ ಆಕೆಯ ಮನಸ್ಸಿಗೆ ನೆಮ್ಮದಿ ನೀಡುವುದೇ ಅದರ ಧ್ಯೇಯ. ಆಕೆಯು ತನ್ನ ಸಂಪೂರ್ಣ ಸಾಮರ್ಥ್ಯವನ್ನು ಮಾನವ ಸೃಷ್ಟಿಯ ನಿರ್ಮಾಣಕ್ಕೆ ವಿನಿಯೋಗಿಸಲೆಂದು ಹಾಗೆ ಮಾಡಲಾಗಿದೆ. ಈ ನೀತಿ ನಿರ್ವಹಣೆಯಲ್ಲಿ ಇಸ್ಲಾಮ್ ಆಕೆಗೆ ಉನ್ನತ ಪದವಿ ಮತ್ತು ಗೌರವವನ್ನು ನೀಡಿತು. ಒಮ್ಮೆ ಓರ್ವರು ಪ್ರವಾದಿವರ್ಯರೊಡನೆ(ಸ) ವಿಚಾರಿಸಿದರು: "ಜನರಲ್ಲಿ ನನ್ನ ಉತ್ತಮ ಬಾಂಧವ್ಯಕ್ಕೆ ಅತ್ಯಂತ ಅರ್ಹರು ಯಾರು?" ಅವರು ಹೇಳಿದರು: "ನಿನ್ನ ಮಾತೆ". ಆ ವ್ಯಕ್ತಿ ಪುನಃ ಪ್ರಶ್ನಿಸಿತು: "ಅನಂತರ ಯಾರು"? "ನಿನ್ನ ಮಾತೆ" ಪ್ರವಾದಿ(ಸ) ಎರಡನೇ ಬಾರಿ ಅದೇ ಉತ್ತರ ನೀಡಿದರು. ಅವರು ತನ್ನ ಪ್ರಶ್ನೆಯನ್ನು ಮೂರನೇ ಬಾರಿ ಕೇಳಿದರು. ಪ್ರವಾದಿ(ಸ) ಅದೇ ಉತ್ತರ ಪುನರಾವರ್ತಿಸಿದರು. ನಾಲ್ಕನೆಯ ಬಾರಿಯೂ ಪ್ರಶ್ನಿಸಿದಾಗ

ಪ್ರವಾದಿವರ್ಯರು(ಸ) ಹೇಳಿದರು : "ನಿನ್ನ ಪಿತ" (ಬುಖಾರಿ, ಮುಸ್ಲಿಮ್)

ಇದರಲ್ಲಿ ಮುಸ್ಲಿಮ್ ಮಹಿಳೆಯು ಮೊರೆಯಿಡುವ ಸಮಾನತೆಯ 'ಸಮಸ್ಯೆ' ಎಲ್ಲಿದೆ? ಮತದಾನ ಹಕ್ಕು ಮತ್ತು ಶಾಸನ ಸಭೆಯ ಪ್ರಾತಿನಿಧ್ಯಕ್ಕಾಗಿ ಕದ ತಟ್ಟುವಂತಹ ಯಾವ ಧ್ಯೇಯವನ್ನು ಇಸ್ಲಾಮ್ ಆಕೆಗೆ ಸಾಧಿಸದೆ ಬಿಟ್ಟಿದೆ?

ಪುರುಷನೊಂದಿಗಿರುವ ಮಾನವೀಯ ಸಮಾನತೆಯನ್ನು ಆಕೆ ಬಯಸುತ್ತಾಳೆಯೇ? ಸರಿ, ಕಾನೂನಿನ ದೃಷ್ಟಿಯಲ್ಲಿ ತಾತ್ವಿಕವಾಗಿಯೂ ಕಾರ್ಯರೂಪದಲ್ಲಿಯೂ ಇಸ್ಲಾಮ್ ಅದನ್ನು ಆಕೆಗೆ ನೀಡಿದೆ.

ಆರ್ಥಿಕ ಸ್ವಾತಂತ್ರ್ಯ ಮತ್ತು ಸಮಾಜದೊಂದಿಗೆ ನೇರವಾಗಿ ವ್ಯವಹಾರ ನಡೆಸುವ ಹಕ್ಕನ್ನು ಆಕೆ ಆಗ್ರಹಿಸುತ್ತಿದ್ದಾಳೆಯೇ? ಹಾಗಿದ್ದರೆ ಇಸ್ಲಾಮ್ ಪ್ರಸ್ತುತ ಹಕ್ಕುಗಳನ್ನು ಆಕೆಗೆ ಪ್ರಪ್ರಥಮವಾಗಿ ನೀಡಿದೆ!

ಶಿಕ್ಷಣ ಸೌಲಭ್ಯ ಬೇಕೆಂದು ಆಗ್ರಹಿಸುತ್ತಾಳೆಯೇ? ಹೌದು, ಅದನ್ನೂ ಇಸ್ಲಾಮ್ ಆಕೆಗೆ ಒದಗಿಸಿದೆ. ಮಾತ್ರವಲ್ಲದೇ ಅದು ಆಕೆಯ ಕಡ್ಡಾಯ ಕರ್ತವ್ಯವೆಂದೂ ನಿಶ್ಚಯಿಸಿದೆ.

ತನ್ನ ಒಪ್ಪಿಗೆಯಿಲ್ಲದೆ ವಿವಾಹ ಮಾಡಿಸಬಾರದೆಂದು ಹೇಳುತ್ತಾಳೆಯೇ? ಅಥವಾ ಸ್ವಯಂ ವಿವಾಹ ಪ್ರಸ್ತಾಪ ಮಾಡುವ ಹಕ್ಕು ಆಕೆಗೆ ಬೇಕೇ?

ಉತ್ತಮ ಪತ್ನಿಯಾಗಿರುವ ತನಕ ವೈವಾಹಿಕ ಜೀವನದಲ್ಲಿ ಗೌರವಾರ್ಹ ಒಡನಾಟ ದೊರೆಯಬೇಕಾಗಿದೆಯೇ? ಸಭ್ಯ ಒಡನಾಟ ದೊರೆಯದಿದ್ದಾಗ ಸಂಬಂಧ ಮುರಿಯುವ ಹಕ್ಕು ಬೇಕೆಂದು ಹೇಳುತ್ತಾಳೆಯೇ?

ಹೌದು, ಅವೆಲ್ಲವನ್ನೂ ಇಸ್ಲಾಮ್ ಆಕೆಗೆ ಅನುಮತಿಸಿದೆ. ಅದಲ್ಲದೇ ಆ ಹಕ್ಕುಗಳ ಸಂರಕ್ಷಣೆ ಪುರುಷನ ಕಡ್ಡಾಯ ಕರ್ತವ್ಯವೆಂದೂ ಇಸ್ಲಾಮ್ ಆದೇಶಿಸಿದೆ.

ಉದ್ಯೋಗ ಮಾಡುವ ಹಕ್ಕನ್ನು ಆಕೆ ಅಪೇಕ್ಷಿಸುತ್ತಿದ್ದಾಳೆಯೇ? ಅದನ್ನೂ ಇಸ್ಲಾಮ್ ಆಕೆಗೆ ನೀಡಿದೆ.

ಹಾಗಲ್ಲ, ಮಾನಮರ್ಯಾದೆಗಳನ್ನು ಬಿಟ್ಟು ಮಜಾ ಮಾಡಿ ಸಂತೋಷ ಪಡುವ ಸ್ವಾತಂತ್ರ್ಯವನ್ನು ಆಕೆ ಅಪೇಕ್ಷಿಸುತ್ತಾಳೆಯೇ? ಹಾಗಿದ್ದರೆ, ಇಸ್ಲಾಮ್ ಆಕೆಗೆ ನಿಷೇಧಿಸಿರುವ'ಹಕ್ಕು' ಕೇವಲ ಅದೊಂದೇ. ಅದೇ ವೇಳೆ ಪುರುಷನಿಗೂ ಇಸ್ಲಾಮ್ ಆ ಹಕ್ಕನ್ನು ನಿಷೇಧಿಸಿದೆ. ಈ ಹಕ್ಕು ಸ್ಥಾಪನೆಗಾಗಿ ಪಾರ್ಲಿಮೆಂಟಿಗೇನೂ ಹೋಗಬೇಕಾಗಿಲ್ಲ. ಸಾಮಾಜಿಕ ಸಂಬಂಧ ಮತ್ತು ವಿಶ್ವಾಸಾಚಾರಗಳನ್ನು ಸ್ವಲ್ಪ ಸಡಿಲು ಬಿಟ್ಟರಾಯಿತು. ತನ್ಮೂಲಕ ಎಲ್ಲಾ ಕಡಿವಾಣಗಳೂ ತುಂಡರಿಸಲ್ಪಡುವುವು. ಆಗ ಯಥೇಷ್ಟವಾಗಿ ಸುಖಪಡಬಹುದು. ಕೆಲವು ಢಾಂಬಿಕರು ಮತ್ತು ಮತಿಭ್ರಾಂತ ಸ್ತ್ರೀ ಚಳವಳಿಗಾರರು ಭ್ರಮಿಸಿರುವಂತೆ ಪಾರ್ಲಿಮೆಂಟಿನ ಪ್ರಾತಿನಿಧ್ಯವು ಸ್ವಯಂ ಒಂದು ಧ್ಯೇಯವಲ್ಲ.

ಬದಲಾಗಿ ಅದು ಇನ್ನೊಂದು ಧ್ಯೇಯದೆಡೆಗೊಯ್ಯುವ ಉಪಾದಿಯಾಗಿದೆ. ಧ್ಯೇಯವು ಸಾಧಿಸಲ್ಪಟ್ಟಿರುವಾಗ ಮಾರ್ಗದ ಬಗ್ಗೆ ಈ ಹಠವೇಕೆ? ಅದು ಕೇವಲ ಪಥಭ್ರಷ್ಟ ಪಾಶ್ಚಾತ್ಯ ಲೋಕವನ್ನು ಕಣ್ಣುಮುಚ್ಚಿ ಅನುಕರಿಸುವ ಭ್ರಮೆಯಾಗಿದೆ. ಅವರ ಮತ್ತು ನಮ್ಮ ಪರಿಸ್ಥಿತಿಗಳು ಭಿನ್ನವಾಗಿವೆ. ಅವರ ಹಾಗೂ ನಮ್ಮ ದೃಷ್ಟಿಕೋನದಲ್ಲಿ ಜೀವನ ಮೌಲ್ಯಗಳು ಭಿನ್ನವಾಗಿವೆ. ಹಾಗಿರುತ್ತಾ, ಈ ಅನುಕರಣೆಯೇಕೆ?

******

ಆದರೆ, ಕೆಲವರು ಪ್ರಶ್ನಿಸಬಹುದು. ಈ ಭಿನ್ನ ಪರಿಸ್ಥಿತಿ ಮತ್ತು ವಿಭಿನ್ನ ಜೀವನ ಮೌಲ್ಯಗಳೊಂದಿಗೆ ನಮ್ಮ ಸಂಬಂಧವೇನು? ಪೌರ್ವಾತ್ಯ ಲೋಕದಲ್ಲಿ ಸ್ತ್ರೀಯ ಸ್ಥಿತಿಯು ಅತ್ಯಂತ ಶೋಚನೀಯವಾಗಿದೆ. ಆ ಬಗ್ಗೆ ಮೌನ ವಹಿಸಲು ಸಾಧ್ಯವಿಲ್ಲ. ಪಾಶ್ಚಾತ್ಯ ಮಹಿಳೆಯು ಸ್ವತಂತ್ರಳಾಗಿ ಆಕೆಯ ಸ್ಥಾನಮಾನಗಳನ್ನು ಗಳಿಸಿಕೊಂಡಿದ್ದಾಳೆ. ಆದ್ದರಿಂದ ಪೌರ್ವಾತ್ಯ ಸ್ತ್ರೀಯೂ ಅದೇ ಮಾರ್ಗವನ್ನವಲಂಬಿಸಿ, ಕಸಿಯಲ್ಪಟ್ಟಿರುವ ತನ್ನ ಹಕ್ಕುಗಳಿಗಾಗಿ ಹೋರಾಡಬೇಕು!

ಇದು ವಾಸ್ತವಿಕ ಸಲಹೆಯಾಗಿದೆ. ಆ ಬಗ್ಗೆ ಯಾವ ಸಂದೇಹವೂ ಇಲ್ಲ. ಮುಸ್ಲಿಮ್ ರಾಷ್ಟ್ರಗಳಲ್ಲಿ ಸ್ತ್ರೀಯು ಸಾಮಾನ್ಯವಾಗಿ ಅಜ್ಞಾನ, ವಿವಶತೆ ಮತ್ತು ಹಿಂದುಳಿದ ಸ್ಥಿತಿಯಲ್ಲಿದ್ದಾಳೆ. ಆಕೆ ಹೀನಳೂ ಬಹಿಷ್ಕೃಯೂ ಆಗಿ ಬಾಳುತ್ತಿದ್ದಾಳೆ. ಆಕೆಯ ಜೀವನವು ಮೃಗ ಸಮಾನವಾಗಿದೆ. ದೈಹಿಕ ಹಾಗೂ ಮಾನಸಿಕ ಮ್ಲೇಚ್ಛತೆಗಳಿಗೆ ಸಿಲುಕಿ, ದೌರ್ಭಾಗ್ಯದ ನಿತ್ಯ ನರಕದಲ್ಲಿ ಏನನ್ನೂ ಗಳಿಸಲಾಗದೆ, ಸರ್ವಸ್ವವನ್ನೂ ಕಳೆದುಕೊಂಡು ದಿನ ದೂಡುತ್ತಿದ್ದಾಳೆ. ಕೇವಲ ದೈಹಿಕ ಬೇಡಿಕೆಗಳಿಂದ ಉನ್ನತಿಗೇರಲಾಗದೆ ಆಕೆಯು ಪಶು ಸಮಾನ ಜೀವನ ಸಾಗಿಸುತ್ತಿದ್ದಾಳೆ. ಉನ್ನತಿ ಮತ್ತು ಬೆಳವಣಿಗೆಯೆಲ್ಲವೂ ಆಕೆಗೆ ಕನಸು ಮತ್ತು ಮರೀಚಿಕೆಯಾಗಿವೆ!

ಇದೊಂದು ವಾಸ್ತವಿಕತೆ. ಆದರೆ, ಇದಕ್ಕೆ ಯಾರು ಹೊಣೆ? ಇಸ್ಲಾಮ್ ಅಥವಾ ಇಸ್ಲಾಮಿ ಶಿಕ್ಷಣಗಳು ಹೊಣೆಯಾಗಿವೆಯೇ?

ಪೌರ್ವಾತ್ಯ ಮಹಿಳೆಯ ಈ ಶೋಚನೀಯಾವಸ್ಥೆಗೆ ಅಲ್ಲಿ ಅಸ್ತಿತ್ವದಲ್ಲಿರುವ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಮಾನಸಿಕ ಪರಿಸ್ಥಿತಿಗಳೇ ಕಾರಣವಾಗಿದೆ. ನಾವು ಅವುಗಳನ್ನು ಕೂಲಂಕುಷವಾಗಿ ಅವಲೋಕಿಸಿ ಈ ವಿಪತ್ತುಗಳ ಉಗಮವನ್ನು ತಿಳಿದುಕೊಳ್ಳಬೇಕಾಗಿದೆ. ಸುಧಾರಣೆಗೆ ಪ್ರಯತ್ನಿಸುವವರೆಂಬ ನೆಲೆಯಲ್ಲಿ ವಸ್ತುಸ್ಥಿತಿಯನ್ನು ತಿಳಿದಿರಬೇಕಾದುದು ನಮ್ಮ ಕರ್ತವ್ಯವಾಗಿದೆ.

ಸಾಮಾಜಿಕ ಅಸಮಾನತೆಯಿಂದಾಗಿ ಒಂದು ವಿಭಾಗವು ಅತಿ ಆಡಂಬರ ಮತ್ತು ಶ್ರೀಮಂತಿಕೆಯಲ್ಲಿ ಮುಳುಗಿರುವಾಗ ಇನ್ನೊಂದು ವಿಭಾಗವು ಒಂದು ತುತ್ತು ಅನ್ನಕ್ಕೆ

ಗತಿಯಿಲ್ಲದೆ, ಮೈಮುಚ್ಚಲು ಬಟ್ಟೆಯಿಲ್ಲದೇ ಜೀವಚ್ಛವಗಳಾಗಿ ಜೀವಿಸುತ್ತಿರುತ್ತದೆ. ಈ ರಾಜಕೀಯ ಮರ್ದನದಿಂದಾಗಿ ಜನರು ಆಳುವ ಮತ್ತು ಆಳಲ್ಪಡುವ ಎರಡು ವಿಭಾಗಗಳಲ್ಲಿ ಹಂಚಿ ಹೋಗಿದ್ದಾರೆ. ಆಡಳಿತಗಾರರು ಹೊಣೆಗೇಡಿಗಳಾಗಿ, ಆದರೆ ಎಲ್ಲ ಹಕ್ಕುಗಳಿರುವ ವಿಶಿಷ್ಟ ವರ್ಗವಾಗಿ ಮಾರ್ಪಟ್ಟಿದ್ದಾರೆ. ಪ್ರಜೆಗಳ ಮೇಲೆ ಎಲ್ಲ ಭಾರ ಮತ್ತು ಕರ್ತವ್ಯಗಳನ್ನು ಬಲಾತ್ಕಾರವಾಗಿ ಹೇರಲಾಗುತ್ತದೆ. ಅದಕ್ಕೆ ಪ್ರತಿಯಾಗಿ ಅವರಿಗೆ ಏನನ್ನೂ ಕೊಡಲಾಗುವುದಿಲ್ಲ. ಈ ಹಿನ್ನೆಲೆಗಳಿಂದಾಗಿ ಬಹುವಂಶ ಪ್ರಜೆಗಳ ಮೇಲೆ ನಡೆಯುತ್ತಿರುವ ದಬ್ಬಾಳಿಕೆ ಮತ್ತು ಕರ್ಾಳತೆ- ಇತ್ಯಾದಿಗಳೆಲ್ಲವೂ ಸ್ತ್ರೀಯರು ಅನುಭವಿಸುತ್ತಿರುವ ಅಪಮಾನ ಮತ್ತು ಹಿಂಸೆಗಳಿಗೆ ಪ್ರೇರಕವಾಗಿವೆ.

ಸ್ತ್ರೀ-ಪುರುಷರ ಅನ್ಯೋನ್ಯತೆಗೆ ಪ್ರೀತ್ಯಾದರ ತುಂಬಿದ ವಾತಾವರಣದ ಅಗತ್ಯವಿದೆ. ಸಮಾಜವನ್ನು ಆಮೂಲಾಗ್ರವಾಗಿ ಪೀಡಿಸಿರುವ ಅಭಿಶಪ್ತ ಬಡತನ ಮತ್ತು ದಬ್ಬಾಳಿಕೆ ತಾಂಡವವಾಡುತ್ತಿರುವಾಗ ಅಂತಹ ವಾತಾವರಣ ಹೇಗೆ ತಾನೇ ನಿರ್ಮಾಣವಾದೀತು?

ಇಲ್ಲಿ ದುರಂತಕ್ಕೆ ಕೇವಲ ಸ್ತ್ರೀ ಗುರಿಯಾಗಿರುವುದಲ್ಲ. ತೋರಿಕೆಗೆ ಪುರುಷನ ಸ್ಥಿತಿಯು ಸ್ವಲ್ಪಂಶ ಉತ್ತಮವೆಂದು ಕಂಡು ಬಂದರೂ ಆತನ ಸ್ಥಿತಿಯೂ ಭಿನ್ನವಲ್ಲ.

ಪುರುಷನು ಸ್ತ್ರೀಯ ಮೇಲೆ ಕ್ರೌರ್ಯ ಮತ್ತು ದಬ್ಬಾಳಿಕೆ ಎಸಗುತ್ತಾನೆ. ಈ ಮೂಲಕ ಆತನು ತಾನು ಬಾಹ್ಯ ಲೋಕದಲ್ಲಿ ಕಳಕೊಂಡಿರುವ ಅಸ್ತಿತ್ವವನ್ನು ಮರಳಿ ಗಳಿಸಲು ಪ್ರಯತ್ನಿಸುತ್ತಿದ್ದಾನೆ. ಮೇಲಧಿಕಾರಿ, ಯಜಮಾನ ಅಥವಾ ಭೂಮಾಲಿಕ ಅಪಹರಿಸಿರುವ ತನ್ನ ಅಸ್ತಿತ್ವವನ್ನು ಪೊಲೀಸಧಿಕಾರಿ, ಫ್ಯಾಕ್ಟರಿ ಮಾಲಿಕ, ನಾಯಕ ಕಸಿದುಕೊಂಡಿರುವ ಗೌರವವನ್ನು, ಅಪಮಾನ, ಬಡತನ ಮತ್ತು ದುಷ್ಟ ಪದ್ಧತಿಗಳು ಬೆದರಿಸುತ್ತಿರುವ ತನ್ನ ಭದ್ರತೆಯನ್ನು ಮರಳಿ ಪಡೆಯಲು ಪ್ರಯತ್ನಿಸುತ್ತಾನೆ. ಆದರೆ ತನ್ನ ಪ್ರತಿಸ್ಪರ್ಧಿಗಳನ್ನು ಎದುರಿಸುವ ಅಥವಾ ಸೋಲಿಸುವ ಶಕ್ತಿ ಆತನಿಗಿಲ್ಲ. ಆದ್ದರಿಂದ ಅಲ್ಲಿ ಸಹಿಸಿಕೊಂಡಿರುವ ಕೋಪ ಮತ್ತು ಸೇಡಿನ ಗಂಟನ್ನು ತನ್ನ ಪತ್ನಿ ಮತ್ತು ಆಶ್ರಿತರ ಮುಂದೆ ಬಿಚ್ಚುತ್ತಾನೆ.

ಸಮಾಜವನ್ನು ನಖಶಿಖಾಂತ ಪೀಡಿಸುತ್ತಿರುವ ಈ ಅಭಿಶಪ್ತ ಬಡತನ; ಪುರುಷನ ಶ್ರಮವನ್ನು ಸಂಪೂರ್ಣವಾಗಿ ಕಬಳಿಸಿ ಆತನ ಮಾನಸಿಕ ಮತ್ತು ವೈಚಾರಿಕ ಶಕ್ತಿಯನ್ನು ನಾಶಪಡಿಸುತ್ತಿರುವ ಬಡತನ; ಇತರರೊಂದಿಗೆ ಸಭ್ಯತೆಯಿಂದ ವ್ಯವಹರಿಸಲು ಮತ್ತು ಪ್ರೀತ್ಯಾದರಗಳಿಂದ ವರ್ತಿಸಲು ಅಗತ್ಯವಿರುವ ವಿಶಾಲ ಮನೋಭಾವವನ್ನು ಹಾಳುಗೆಡಹುವ ಕ್ರೂರ ಬಡತನ; ಸಹನೆ, ತಾಳ್ಮೆ ಮತ್ತು ತಪ್ಪುಗಳನ್ನು ಮನ್ನಿಸುವ ಆತನ ಶಕ್ತಿಯನ್ನು ದುರ್ಬಲಗೊಳಿಸುವ ಭೀಕರ ಬಡತನ!...

ಆ ಬಡತನವೇ ಸ್ತ್ರೀಯನ್ನು ಪುರುಷನ ಗುಲಾಮಳನ್ನಾಗಿ ಮಾಡುತ್ತದೆ. ಅರಕ್ಷಿತ ಜೀವನಕ್ಕಿಂತ ಉತ್ತಮವಲ್ಲವೇ ಎಂಬ ಭಾವನೆಯಿಂದ ಆತನ ಎಲ್ಲ ರೀತಿಯ ಅಕ್ರಮ

ಮರ್ದನಗಳನ್ನು ಸಹಿಸಲು ಆಕೆ ಸಿದ್ಧಳಾಗುತ್ತಾಳೆ. ಧರ್ಮವು ಆಕೆಗೆ ನೀಡಿರುವ ಹಕ್ಕುಗಳನ್ನು ಉಪಯೋಗಿಸುವುದಕ್ಕೆ ಆತನು ತಡೆಯೊಡ್ಡುತ್ತಾನೆ. ಆಕೆಯು ತನ್ನ ಹಕ್ಕುಗಳನ್ನು ಉಪಯೋಗಿಸಿದ್ದರೆ ಪುರುಷನನ್ನು ಹದ್ದುಬಸ್ತಿನಲ್ಲಿಡಲು ಖಂಡಿತ ಸಾಧ್ಯವಾಗುತ್ತಿತ್ತು. ಆದರೆ ತಲಾಕ್ ನೀಡಬಹುದೆಂಬ ಭೀತಿಯಿಂದ ಆಕೆ ದಿನದೂಡುತ್ತಾಳೆ. ಹೀಗಿರುತ್ತಾ, ಆಕೆಗೆ ಏನು ಸಾಧ್ಯವಾದೀತು? ಮಕ್ಕಳನ್ನು ಅವರ ತಂದೆ ಸಾಕ ಬಹುದು. ಆದರೆ ಆಕೆ? ಆಕೆಯನ್ನು ಯಾರು ರಕ್ಷಿಸಬೇಕು? ಬಡತನದ ನಿತ್ಯ ನರಕದಲ್ಲಿ ಬಾಳುತ್ತಿರುವ ಆಕೆಯ ಸಂಬಂಧಿಕರೇ? ಜೀವನದ ಹೊಣೆಯನ್ನು ಹೊರಲಾಗದೆ ಉಸಿರುಗಟ್ಟಿರುವಾಗ ಅವರು ಆಕೆಯ ವಿವಾಹ ವಿಚ್ಛೇದನವನ್ನು ಸ್ವಾಗತಿಸಲಾರರು. ಅದರಿಂದ ತಮ್ಮ ಹೊಣೆ ಹೆಚ್ಚಾದೀತೆಂಬ ಭೀತಿಯಿಂದ ಶಾಪಗ್ರಸ್ತ ನಿಂದನೆಯನ್ನು ಸಹಿಸುವಂತೆ ಅವರು ಆಕೆಗೆ ಉಪದೇಶಿಸಬಹುದು.

ಎರಡನೆಯದಾಗಿ, ಹಿಂದುಳಿದ ಸಮಾಜಗಳಲ್ಲಿ ಎಲ್ಲ ಮಾನವೀಯ ಮೌಲ್ಯ ಗಳಿಗೂ ಬೆಲೆ ಕುಸಿತ ಉಂಟಾಗಿದೆ. ಪೌರ್ವಾತ್ಯ ಲೋಕವೂ ಹಿಂದುಳಿದ ಸ್ಥಿತಿಯಲ್ಲಿದೆ. ಅದರ ಧ್ಯೇಯ ಮತ್ತು ಆತ್ಮವು ಕಳೆಗುಂದಿ ಇಂದು ಅದು ಕಾರ್ಗತ್ತಲೆಯಲ್ಲಿ ಮುಳುಗಿದೆ. ಎಲ ರೂಪ ಮತ್ತು ಭಾವಗಳಲ್ಲಿ ಕೇವಲ ಶಕ್ತಿಗೆ ಶ್ರೇಷ್ಠತೆ ಮತ್ತು ಗೌರವವಿದೆ. ದೌರ್ಬಲ್ಯ, ನೀಚತೆ ಮತ್ತು ಅತಿಕ್ರಮಗಳು ಸಮರ್ಥಿಸಲ್ಪಡುತ್ತಿವೆ!

ಪುರುಷನು ಸ್ತ್ರೀಗಿಂತ ಪ್ರಬಲನಾಗಿದ್ದರೆ ಆತನು ಆಕೆಯನ್ನು ನಿಂದಿಸುತ್ತಾನೆ. ಮಾನವನನ್ನು ಮಾನವನೆಂಬ ನೆಲೆಯಲ್ಲಿ ಗೌರವಿಸುವ ಮಾನವೀಯ ಮಟ್ಟದಿಂದ ಆತ ಕೆಳಗಿಳಿಯುತ್ತಾನೆ. ಆ ಮಟ್ಟಕ್ಕೇರಲು ಆತನಿಗೆ ಸಾಧ್ಯವಾಗುವುದಿಲ್ಲ. ಆಕೆ ಒಡತಿಯಾಗಿದ್ದರೆ ಈ ಪರಿಸ್ಥಿತಿ ಬದಲಾಗಬಹುದು. ಆಗ ಆಕೆಯಲ್ಲಿ ಬಲ ಮತ್ತು ಅಧಿಕಾರವಿದೆಯೆಂಬ ದೃಷ್ಟಿಯಿಂದ ಆಕೆಯನ್ನು ಗೌರವಿಸುತ್ತಾನೆ.

ಹಿಂದುಳಿದ ಸಮಾಜದಲ್ಲಿ ಮಾನವರು ವೈಚಾರಿಕವಾಗಿ ಪಾಶವೀಮಟ್ಟಕ್ಕೆ ಅಥವಾ ಅದರ ಸಮೀಪಕ್ಕೆ ಇಳಿಯುತ್ತಾರೆ. ಮುಖ್ಯವಾಗಿ, ಲೈಂಗಿಕ ಭಾವನೆಗಳು ಮಾನವರ ಮೇಲೆ ಪ್ರಭಾವ ಬೀರುತ್ತವೆ. ಜೀವನವು ಕೇವಲ ಆ ವಲಯದಲ್ಲಿ ಹುದುಗಿದೆಯೆಂದು ಅವರು ಭಾವಿಸುತ್ತಾರೆ. ತನ್ನಿಮಿತ್ತ ಪುರುಷನ ಮಟ್ಟಿಗೆ ಸ್ತ್ರೀಯು ಕೇವಲ ಭೋಗ ವಸ್ತುವಾಗಿ ಮಾರ್ಪಡುತ್ತಾಳೆ.[1] ಮಾನವೀಯ ಆಧಾರದಲ್ಲಿ ಗೌರವಾರ್ಹಗೊಳಿಸುವ ಮಾನಸಿಕ, ವೈಚಾರಿಕ ಮತ್ತು ನೈತಿಕ ಶ್ರೇಷ್ಠತೆಯನ್ನು ಆಕೆಗೆ ನೀಡುವುದಿಲ್ಲ.

---

1. ಸ್ತ್ರೀಯ ದೃಷ್ಟಿಯಲ್ಲಿಯೂ ಪುರುಷನ ಸ್ಥಿತಿ ಹಾಗೆಯೇ ಇರಬಹುದು. ಆದರೆ ಕೆಲಸ ಮತ್ತು ಉದ್ಯೋಗ ಮಾಡುವವ ಮತ್ತು ಕುಟುಂಬ ಪಾಲಕನೆಂಬ ನೆಲೆಯಲ್ಲಿ ಲೈಂಗಿಕತೆಗಿಂತ ಮಿಗಿಲಾದ ಭಾವನೆಯೂ ಆಕೆಯಲ್ಲಿರುವುದು.

ಹಿಂದುಳಿದ ಸಮಾಜಗಳಲ್ಲಿ ಶಿಕ್ಷಣ ಶೀಲಗಳನ್ನು ನಿರ್ಲಕ್ಷಿಸಲಾಗುತ್ತಿದೆ. ಅಜ್ಞಾನ ಮತ್ತು ಬಡತನದ ವಾತಾವರಣದಲ್ಲಿ ಅದೊಂದು ದುಂದುವೆಚ್ಚವೆನಿಸಬಹುದು. ಆದರೆ ನೈತಿಕ ಶಿಕ್ಷಣವೇ ಮಾನವನನ್ನು ಮಾನವನಾಗಿ ಮಾಡುವ ಏಕೈಕ ಉಪಾದಿಯಾಗಿದೆ. ಆತನನ್ನು ಪಾಶವೀ ಮಟ್ಟದಿಂದ ಮೇಲೆತ್ತುವ ಅನ್ಯ ಮಾರ್ಗವಿಲ್ಲ. ಶಿಕ್ಷಣ ಸಂಪ್ರದಾಯವಿಲ್ಲದಿರುವಾಗ ಅಥವಾ ಅದು ಕೆಟ್ಟ ರೀತಿಯಲ್ಲಿರುವಾಗ, ಜನರು ಜೀವನವನ್ನು ಭಾವನೆಗಳ ಮಾಪಕದಿಂದ ಅಳೆಯುವ ಹಾಗೂ ಬಲವನ್ನು ಪೂಜಿಸುವ ಪಾಶವೀ ಮಟ್ಟದಿಂದ ಮೇಲೇರಲಾರರು.

ಇಂತಹ ವಾತಾವರಣದಲ್ಲಿ ಸ್ತ್ರೀಯು ತನಗರಿವಿಲ್ಲದೆಯೇ, ತನ್ನ ಬಗೆಗಿನ ಪುರುಷನ ಭಾವನೆಗಳನ್ನು ಕೆಡಿಸಲು ಹಾಗೂ ಆತನಿಗೆ ನಿರಂಕುಶತೆ ಮತ್ತು ಸರ್ವಾಧಿಕಾರದ ಸ್ಥಾನ ನೀಡಲು ಪ್ರಯತ್ನಿಸುತ್ತಾಳೆ. ತನ್ನ ಮಗುವನ್ನು ಅತಿಯಾಗಿ ಮುದ್ದಾಡುವ ತಾಯಿಯು ಆ ಮಗುವಿನ ಮೇಲೆ ಯಾವ ನಿಯಂತ್ರಣವನ್ನೂ ಹೇರುವುದಿಲ್ಲ. ತಪ್ಪಾಗಿರಲಿ ಸರಿಯಾಗಿರಲಿ ತನ್ನ ಮಾತುಗಳು ಪಾಲಿಸಲ್ಪಡುತ್ತಿವೆಯೆಂಬ ಭಾವನೆಯು ಮಗುವಿನಲ್ಲಿ ಬೆಳೆದು ಬರುವುದು. ಆತನ ಭಾವನೆ ಮತ್ತು ಅಭಿಲಾಷೆಗಳಿಗೆ ಕಡಿವಾಣ ಹಾಕಲು ಆಕೆ ಪ್ರಯತ್ನಿಸುವುದಿಲ್ಲ. ಹೀಗೆ ಬೆಳೆಯುವ ಭಾವನೆ ಮತ್ತು ಅಭಿಲಾಷೆಗಳ ಪ್ರೇರಣೆಯಿಂದಾಗಿಯೇ ಆತನು ತನ್ನ ಆಜ್ಞೆಗಳನ್ನು ಅನ್ಯರ ಮೇಲೆ ಬಲಾತ್ಕಾರವಾಗಿ ಹೇರಲು ಪ್ರಯತ್ನಿಸುತ್ತಾನೆ. ಸಂಕಷ್ಟ, ಬಡತನ ಮತ್ತು ದಬ್ಬಾಳಿಕೆಗಳು ತಾಂಡವವಾಡುತ್ತಿರುವ ಬಾಹ್ಯ ಲೋಕವು ಆತನ ಸರಿ ಯಾ ತಪ್ಪು ವರ್ತನೆಗಳನ್ನು ಅಂಗೀಕರಿಸದಿರುವಾಗ, ಸಕಲ ದುರ್ಗುಣಗಳನ್ನೂ ತನ್ನ ಆಶ್ರಯದಲ್ಲಿರುವ ಸ್ತ್ರೀಯರ, ಪುರುಷರ ಮತ್ತು ಮಕ್ಕಳ ಮೇಲೆ ಹೊರಿಸುತ್ತಾನೆ!

*****

ಇವು ಪೌರ್ವಾತ್ಯ ಸಮಾಜವನ್ನು ಪೀಡಿಸಿರುವ ದೋಷಗಳ ಸ್ಪಷ್ಟ ಕಾರಣಗಳಾಗಿವೆ. ಈ ಕಾರಣಗಳೇ ಆಕೆಯನ್ನು ಶೋಚನೀಯ ಸ್ಥಿತಿಗೆ ದೂಡಿ, ಆಕೆಯನ್ನು ಒಂದು ಸಮಸ್ಯೆಯನ್ನಾಗಿ ಮಾಡಿದೆ. ಈ ಪೈಕಿ ಯಾವುದು ಇಸ್ಲಾಮಿನಿಂದಾಗಿ ಹುಟ್ಟಿ ಕೊಂಡಿದೆ? ಇಸ್ಲಾಮೀ ನೀತಿಗೆ ಸರಿಹೊಂದುವ ಕಾರಣ ಯಾವುದು?

ಬಡತನವೇ?

ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಲ್ಲಿ ಝಕಾತ್ ದಾನ ಸ್ವೀಕರಿಸಲರ್ಹವಾದ ಒಬ್ಬನೇ ಒಬ್ಬ ಬಡವನಿಲ್ಲದಂತಹ ಸ್ಥಿತಿಗೆ ಸಮಾಜವನ್ನು ಸಮೃದ್ಧಗೊಳಿಸಿದ್ದು ಇಸ್ಲಾಮಲ್ಲವೇ? ಅದು ವಾಸ್ತವಿಕ ಲೋಕದಲ್ಲಿ ಸಾಕ್ಷಾತ್ಕಾರಗೊಂಡ

ಇಸ್ಲಾಮ್ ಆಗಿದೆ. ಇಂದು ಅದನ್ನು ಕಾರ್ಯಗತಗೊಳಿಸಬೇಕೆಂದು ನಾವು ವಿನಂತಿಸುತ್ತಿದ್ದೇವೆ. ಅದು ಸಮಾಜದಲ್ಲಿ ಸಂಪತ್ತು ನ್ಯಾಯೋಚಿತವಾಗಿ ವಿತರಣೆಯಾಗು ವಂತಹ ಪದ್ಧತಿಯಾಗಿದೆ. "ನಿಮ್ಮಲ್ಲಿರುವ ಧನಿಕರಲ್ಲಿಯೇ ಸುತ್ತಾಡದಿರಲಿಕ್ಕಾಗಿ!" ಅದು ಜನರ ಮಧ್ಯೆ ಇರುವ ಅರ್ಥಿಕ ಅಂತರವನ್ನು ಕಡಿಮೆಗೊಳಿಸುತ್ತದೆ, ಆಡಂಬರವನ್ನು ನಿಷೇಧಿಸುತ್ತದೆ. ಬಡತನವನ್ನು ದ್ವೇಷಿಸುತ್ತದೆ ಹಾಗೂ ಅದರ ನಿವಾರಣೆಗಾಗಿ ಪ್ರಯತ್ನಿಸುತ್ತದೆ.

ಪೌರ್ವಾತ್ಯ ಮಹಿಳೆಯ 'ಸಮಸ್ಯೆ'ಗೆ ಬಡತನವೇ ಮೂಲ ಕಾರಣವಾಗಿದೆ. ಅದು ನಿವಾರಣೆಯಾದರೆ ಎಲ್ಲ ಸಂಕಷ್ಟಗಳೂ ಪರಿಹಾರವಾಗಿ ಸ್ತ್ರೀಗೆ ಆಕೆಯ ಗೌರವವು ಮರಳಿ ದೊರೆಯುವುದು. ಜೀವನ ನಿರ್ವಹಣೆಗಾಗಿ ದುಡಿಯುವ ಅನುಮತಿಯಿದ್ದರೂ - ಅದು ಆಕೆಗೆ ಅನಿವಾರ್ಯವಾಗಲಾರದು. ಬದಲಾಗಿ ಸಮಾಜದ ಅರ್ಥಿಕ ಮಟ್ಟವು ಉತ್ತಮಗೊಂಡು ವಾರಸು ಸೊತ್ತಿನಲ್ಲಿರುವ ಆಕೆಯ ಹಕ್ಕು- ಅದು ಕೇವಲ ಆಕೆಯ ಸ್ವಂತ ಖರ್ಚಿಗಾಗಿ ಇರುವುದು, ಅದರಲ್ಲಿ ಅನ್ಯರಿಗೆ ಪಾಲಿಲ್ಲ- ಪುರುಷನ ಗೌರವ ಸಂಪಾದನೆಗೆ ಪರ್ಯಾಪ್ತ ವಾಗಿರುವುದು. ಬಡತನದ ಭೀತಿಯಿಂದ ಆಕೆ ಕೈ ಬಿಟ್ಟಿರುವ ಹಕ್ಕುಗಳನ್ನು ಮರಳಿ ಗಳಿಸಲು ಅದು ಆಕೆಗೆ ಪ್ರೇರಣೆ ನೀಡುವುದು.

ಮಾನವನನ್ನು ಮರ್ದಿಸಿ ದ್ವೇಷದ ವಿಷಸರ್ಪವನ್ನಾಗಿಸುವ ರಾಜಕೀಯ ದಮನ ಇಸ್ಲಾಮಿನಲ್ಲಿದೆಯೇ?

ಇಸ್ಲಾಮ್, ಅನ್ಯಾಯ ಮರ್ದನಗಳ ವಿರುದ್ಧ ಭುಗಿಲೆದ್ದ ಕ್ರಾಂತಿಕಾರೀ ಅಂದೋಲನವಾಗಿರಲಿಲ್ಲವೇ? ಅದು ಅನ್ಯಾಯವನ್ನು ತಡೆಯುವ ಅಹ್ವಾನವಾಗಿರಲಿಲ್ಲವೇ? ಅದು ಮಾನವರನ್ನು ಮಾದರಿ ಆಡಳಿತಗಾರ ಮತ್ತು ಮಾದರಿ ಪ್ರಜೆಗಳನ್ನಾಗಿಸಿದಂತಹ ಪದ್ಧತಿಯಾಗಿರಲಿಲ್ಲವೇ? ಅದು ಯಾವ ಉನ್ನತ ಮಟ್ಟಕ್ಕೆ ತಲಪಿದ್ದಿತೆಂದು ನೋಡಿರಿ. ಒಮ್ಮೆ ಉಮರ್‌ರು(ರ) ಜನರೊಡನೆ ಹೀಗೆಂದರು: "ಗಮನಿಸಿರಿ ಮತ್ತು ಪಾಲಿಸಿರಿ. "ಆಗ ಸಭಿಕರಲ್ಲೋರ್ವರು ಎದ್ದು ನಿಂತು ಹೇಳಿದರು, "ನೀವು ಧರಿಸಿರುವ ಈ ಉಡುಪು ನಿಮಗೆ ಎಲ್ಲಿಂದ ಲಭಿಸಿತೆಂದು ಹೇಳದೆ ನಾವು ನಿಮ್ಮನ್ನು (ಮಾತನ್ನು) ಆಲಿಸಲಾರೆವು, ಅನುಸರಿಸಲಾರೆವು." ಉಮರ್(ರ) ಕೋಪಗೊಳ್ಳಲಿಲ್ಲ. ಬದಲಾಗಿ ಪ್ರಶ್ನಿಸಿದವರ ಹಕ್ಕನ್ನು ಮನ್ನಿಸಿ, ಅವರಿಗೆ ಮನವರಿಕೆಯಾಗುವ ರೀತಿಯಲ್ಲಿ ವಿಷಯವನ್ನು ಸ್ಪಷ್ಟಪಡಿಸಿದರು. ತರುವಾಯ ಪ್ರಶ್ನಾರ್ಥಿಯು ಹೇಳಿದರು: "ಈಗ ನೀವು ಆಜ್ಞಾಪಿಸಿರಿ. ಇನ್ನು ನಾವು ಆಲಿಸುತ್ತೇವೆ ಮತ್ತು ಅನುಸರಿಸುತ್ತೇವೆ."

ಇದೇ ಇಸ್ಲಾಮ್. ಅದನ್ನೊಮ್ಮೆ ಲೋಕವು ನೋಡಿದೆ. ಅದನ್ನೇ ನಾವು ಇನ್ನೊಮ್ಮೆ ಅಪೇಕ್ಷಿಸುತ್ತೇವೆ. ಅಂದು ಆಡಳಿತಗಾರರು ಪ್ರಜೆಗಳನ್ನು ದಮನಿಸಲಾರರು. ಅವರ ಕೈ-

ಬಾಯಿಗಳನ್ನು ಬಿಗಿದು ಕಟ್ಟಲಾರರು. ಸತ್ಯವನ್ನು ಬಹಿರಂಗ ಪಡಿಸಲು ಅವರು ಕಿಂಚಿತ್ ಹಿಂಜರಿಯಲಾರರು. ಆಡಳಿತಗಾರನ ನಡವಳಿಕೆಯು ಪ್ರಜೆಗಳಿಗೆ ಮಾದರಿ ಯೋಗ್ಯವಾಗಿರುವುದು. ಅವರು ಪರಸ್ಪರ ನಡವಳಿಕೆಗಳಲ್ಲಿ ಅದನ್ನು ಅನುಕರಿಸುವರು. ಮಾಲಿಕನು ಕಾರ್ಮಿಕನೊಂದಿಗೂ ನಾಯಕನು ಆಶ್ರಿತನೊಂದಿಗೂ ಪತಿಯು ಪತ್ನಿ, ಮಕ್ಕಳೊಂದಿಗೂ ಹಾಗೆಯೇ ವರ್ತಿಸುವರು. ಒಳಿತು, ನ್ಯಾಯ ಮತ್ತು ಸಹೋದರತೆಯು ಅದರಲ್ಲಿ ಕಂಗೊಳಿಸುವುದು!

ನುಚ್ಚುನೂರಾದ ಮಾನವೀಯ ಮೌಲ್ಯಗಳಿಗೆ ಇಸ್ಲಾಮಿನೊಂದಿಗೆ ಸಂಬಂಧವಿದೆಯೇ? ಜನರನ್ನು ಅಧಃಪತನದಿಂದ ಮೇಲೆತ್ತಲಿಕ್ಕಾಗಿ ಇಸ್ಲಾಮ್ ಬಂತಲ್ಲವೇ? ಅವರನ್ನು ಮಾನವರಾಗಿ ಮಾಡುವುದೇ ಅದರ ಧ್ಯೇಯವಲ್ಲವೇ? "ನಿಮ್ಮಲ್ಲಿ ಅತ್ಯಧಿಕ ಭಯಭಕ್ತಿ ಯುಳ್ಳವನೇ ಅತ್ಯಂತ ಗೌರವಾರ್ಹನು." ಬಲಾಢ್ಯನಲ್ಲ, ಶ್ರೀಮಂತನಲ್ಲ, ಅಧಿಕಾರಾಧಿಪತ್ಯಗಳ ಒಡೆಯನೂ ಅಲ್ಲ. ಮಾನವೀಯ ಮೌಲ್ಯಗಳು ಅಷ್ಟೊಂದು ಉನ್ನತಗೊಂಡರೆ ದೌರ್ಬಲ್ಯ ಮತ್ತು ಅಸಾಮರ್ಥ್ಯಗಳಿಗಾಗಿ ಸ್ತ್ರೀಯರು ನಿಂದಿಸಲ್ಪಡಲಾರರು. ಸ್ತ್ರೀಯೊಂದಿಗಿನ ಸಭ್ಯ ನಡವಳಿಕೆಯೇ ಮಾನವೀಯತೆಯ ಮಾಪಕವಾಗುವುದು. ಅದು ಪ್ರವಾದಿವರ್ಯರು(ಸ) ಸ್ಪಷ್ಟವಾಗಿ ನಿರ್ಣಯಿಸಿರುವ ಮಾಪಕವಾಗಿದೆ. "ತನ್ನ ಮನೆ ಮಂದಿಯೊಂದಿಗೆ ಉತ್ತಮವಾಗಿ ವರ್ತಿಸುವವನೇ ನಿಮ್ಮಲ್ಲಿ ಅತ್ಯುತ್ತಮನು." ಮನೆಮಂದಿಯೆಂದರೆ ಅರಬೀ ಶೈಲಿಯಲ್ಲಿ ಪತ್ನಿಯೆಂದರ್ಥ. ಮಾನಸಿಕ ತಥ್ಯಗಳನ್ನು ಪ್ರವಾದಿವರ್ಯರು(ಸ) ಎಷ್ಟೊಂದು ಆಳವಾಗಿ ಅರಿತಿದ್ದರೆಂಬುದನ್ನು ಪ್ರಸ್ತುತ ವಚನಗಳು ಸ್ಪಷ್ಟಪಡಿಸುತ್ತವೆ. ತಮ್ಮ ಕೈ ಕೆಳಗಿರುವವರೊಡನೆ ಕೆಟ್ಟ ರೀತಿಯಿಂದ ವರ್ತಿಸಲು ಮನೋರೋಗಿಗಳಿಗೆ ಮಾತ್ರ ಸಾಧ್ಯ.

ಪೈಶಾಚಿಕ ಭಾವನೆಗಳ ಮಟ್ಟಕ್ಕಿಳಿಯಲು ಇಸ್ಲಾಮ್ ಪ್ರೇರೇಪಿಸುತ್ತದೆಯೇ?

ಮಾನವನು ಭಾವನೆಗಳನ್ನು ಸಂಸ್ಕರಿಸದೆ ಜೀವಿಸಲು ಇಸ್ಲಾಮ್ ಯಾವ ಕಾಲದಲ್ಲಿ ಅನುಮತಿಸಿದೆ? ಸಹಜ ಕಾಮನೆ ಮತ್ತು ನೈಸರ್ಗಿಕ ಭಾವನೆಗಳನ್ನು ಅದು ಅಂಗೀಕರಿಸುತ್ತದೆನ್ನುವುದು ನಿಜ. ಆದರೆ ಅವುಗಳ ಹಿಡಿತಕ್ಕೆ ಸಿಲುಕಿ ಪಶುಸಮಾನನಾಗಿ ವರ್ತಿಸಲು ಅದೆಂದೂ ಅನುಮತಿಸುವುದಿಲ್ಲ. ಅದು ಸ್ತ್ರೀ-ಪುರುಷನೊಡನೆ ತಂತಮ್ಮ ಸಂಗಾತಿಯ ಲೈಂಗಿಕ ಭಾವನೆಗಳನ್ನು ಪೂರೈಸಬೇಕೆಂದು ಹೇಳಿರುವುದಕ್ಕೆ ಪಶು ಸಮಾನವಾಗಬೇಕೆಂದರ್ಥವಲ್ಲ. ತನ್ಮೂಲಕ ಜೀವನದ ಬೇಡಿಕೆಗಳ ಬಂಧನದಿಂದ ಮಾನವರನ್ನು ವಿಮೋಚನೆಗೊಳಿಸಬೇಕೆಂದಷ್ಟೇ ಅದು ಬಯಸುತ್ತದೆ. ಅಂತಹ ಬೇಡಿಕೆಗಳು ಅವರ ಮನಸ್ಸು ಮತ್ತು ವಿಚಾರವನ್ನು ತೊಂದರೆಪಡಿಸುವಂತೆ ಆಗಬಾರದು. ಆತನ

ಸಾಮರ್ಥ್ಯಗಳನ್ನು ಉನ್ನತ ರಚನಾತ್ಮಕ ಮಟ್ಟಕ್ಕೆ ತಿರುಗಿಸಲು ಅದು ತಡೆಯಾಗಬಾರದು. ಅದು ಕೆಲಸ, ಕಲೆ, ಆರಾಧನೆಯೇ ಮೊದಲಾದ ಯಾವ ರಂಗವಾಗಿದ್ದರೂ ಸರಿಯೇ. ಹಾಗೆಯೇ ಅದು ಕಾನೂನುಬದ್ಧ ಮಾರ್ಗಗಳಿಗೆ ಅಡ್ಡಿಯುಂಟಾದಾಗ ಅಪರಾಧ ಕೃತ್ಯಗಳಿಗೆ ಅವರನ್ನು ದೂಡದಿರಲಿಕ್ಕಾಗಿದೆ. ಆದರೆ ಇಸ್ಲಾಮ್ ಅವರನ್ನು, ಉನ್ನತ ಮಾನವೀಯ ಮೌಲ್ಯಗಳನ್ನು ಕಡೆಗಣಿಸಿ ಸುಖಭೋಗಗಳಲ್ಲಿ ಮೈಮರೆತು ಭಾವನಾಲೋಕದಲ್ಲಿ ವಿಹರಿಸುವಂತೆ ಹಗ್ಗ ಬಿಚ್ಚಿ ಬಿಡುವುದಿಲ್ಲ. ಅಲ್ಲಿ ಪುರುಷನ ಕೆಲಸವು ದೇವಮಾರ್ಗದ ಹೋರಾಟವಾಗಿದೆ; ನಿತ್ಯ ಹೋರಾಟ. ಕುಟುಂಬವು ಸ್ತ್ರೀಯ ಹೋರಾಟರಂಗ. ಶಿಶುಪಾಲನೆ ಮತ್ತು ಗೃಹಾಡಳಿತ ಆಕೆಯ ಕೆಲಸ. ಇದು ಅಲ್ಲಿ ಉಭಯತ್ರರ ಧ್ಯೇಯವು ಕೇವಲ ಕೆಲವು ಜೀವನಾವಶ್ಯಕತೆಗಳು ಮತ್ತು ದೇಹೇಚ್ಛೆಗಳ ವ್ಯಾಪ್ತಿಗೆ ಸೀಮಿತವಾಗಬಾರದೆಂದಾಗಿದೆ.

ಇಸ್ಲಾಮೀ ಶಿಕ್ಷಣ ಪದ್ಧತಿಯು, ಮುಸ್ಲಿಮ್ ಸಮುದಾಯದ ಅಧಃಪತನಕ್ಕೆ ಕಾರಣವೇ?

ಖಂಡಿತ ಅಲ್ಲ. ಇಸ್ಲಾಮಿನ ಕುರಿತು ಹಾಗೆ ಆರೋಪಿಸಲು ಯಾರಿಗೂ ಧೈರ್ಯ ಬಾರದು. ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಚಾರಿತ್ರ್ಯ ಸಂಸ್ಕರಣೆಯ ಆಹ್ವಾನವೇ ತುಂಬಿವೆ. ಅವು ಮಾನಸಿಕ ತರಬೇತಿ, ಆತ್ಮ ನಿಯಂತ್ರಣ ಪಾಲನೆ ಮತ್ತು ಅನ್ಯರೊಡನೆ ನ್ಯಾಯ ಗೌರವದ ವರ್ತನೆ ಮತ್ತು ತನ್ನಂತೆ ಪರರನ್ನು ಪ್ರೀತಿಸುವ ನಿಯಮ ನಿರ್ದೇಶಗಳನ್ನು ಒಳಗೊಂಡಿದೆ.

ಆಧುನಿಕ ಬರೆಹಗಾರರು ಆಚಾರ ಸಂಪ್ರದಾಯಗಳನ್ನು ಟೀಕಿಸುತ್ತಾರೆ. ಸ್ತ್ರೀಯರ ಪ್ರಗತಿಯನ್ನು ಅವು ತಡೆದು ಪೈಶಾಚಿಕತೆ, ನಿಷ್ಕ್ರಿಯತೆ, ಸಂಕುಚಿತತೆ ಮತ್ತು ಅಜ್ಞಾನದ ಗೋಡೆಗಳೊಳಗೆ ಆಕೆಯನ್ನು ಬಂಧಿಸಿಡುವುದೆಂದೂ ಅವರು ಆರೋಪಿಸುತ್ತಾರೆ. ಆದರೆ ವಾಸ್ತವಿಕತೆಯೇನು?

ಆಚಾರಗಳು[1] ವಿಜ್ಞಾನವನ್ನು ತಡೆಯುವುದಿಲ್ಲ. ಉದ್ಯೋಗಕ್ಕೆ ಅಡ್ಡಿಯಾಗುವುದಿಲ್ಲ. ಸಮಾಜದಲ್ಲಿ ವ್ಯವಹರಿಸುವುದನ್ನು ವಿರೋಧಿಸುವುದಿಲ್ಲ. ಹೀಗಿರುತ್ತಾ, ಅವುಗಳಿಂದ ತೊಡಕೇನಿದೆ?

ಇಸ್ಲಾಮ್ ಕೇವಲ ನೈತಿಕ ಕೆಡುಕುಗಳನ್ನು, ನಗ್ನತಾ ಪ್ರದರ್ಶನ ಮತ್ತು ಸ್ತ್ರೀಯು ಅನಗತ್ಯವಾಗಿ ಬೀದಿಗಿಳಿಯುವುದನ್ನು ತಡೆಯುತ್ತದೆ. ಅವು ಸ್ತ್ರೀಯರ ಪ್ರಗತಿ ಮತ್ತು ಗೌರವ ಸಂಪಾದನೆಗಿರುವ ಏಕೈಕ ಮಾರ್ಗವೇ?

---

1. ಇಲ್ಲಿ ಆಚಾರವೆಂದರೆ, ಕಲಬೆರಕೆಯಿಲ್ಲದ ನೈಜ ಇಸ್ಲಾಮೀ ಸಂಪ್ರದಾಯ ಮತ್ತು ವಿಶ್ವಾಸಗಳೆಂದರ್ಥ. ಆದರೆ ಈ ಬರಹಗಾರರು ಜೊಳ್ಳು-ಕಾಳುಗಳನ್ನು ಬೇರ್ಪಡಿಸದೆ ಆರೋಪಿಸುತ್ತಾರೆ.

ವಿನಾಶದ ವಿಷಬೀಜದೊಂದಿಗೆ ಬೀದಿಗಿಳಿದು ತನ್ನ ದೇಹವನ್ನು ಓರ್ವ ತರುಣನ ಮುಂದೆ ಪ್ರದರ್ಶಿಸುವುದು. ಆತ ಕೇವಲ ದುಷ್ಟ ಮತ್ತು ಮಾಂಸದಾಹಿಯಾಗಿದ್ದು, ಸ್ತ್ರೀಯೆಂಬ ನೆಲೆಯಲ್ಲಿ ಆತನು ತನ್ನ ಅಸ್ತಿತ್ವವನ್ನು ಗೌರವಿಸಲು ಸಿದ್ಧನಿಲ್ಲವೆಂದು ಅನುಭವದಿಂದ ತಿಳಿದ ಬಳಿಕ ನವ ತರುಣನೊಬ್ಬನನ್ನು ಹುಡುಕುವುದು. ಆತನೊಂದಿಗಿನ ಸಂಬಂಧವೂ ಹಿತಕರವಲ್ಲವೆಂದು ಮನಗಂಡಾಗ ಇನ್ನೊಬ್ಬನನ್ನು ಸಮೀಪಿಸುವುದು... 'ಆಧುನಿಕ' ಸ್ತ್ರೀಯರು ಅಂಗೀಕರಿಸುವ ಈ ಮಾರ್ಗವೇ ಸ್ತ್ರೀಯ ವ್ಯಕ್ತಿತ್ವ ರಚನೆ ಮತ್ತು ಅನುಭವ ಗಳಿಂದ ಅದನ್ನು ಪೋಷಿಸುವ ಏಕೈಕ ಮಾರ್ಗವೆಂದು ಯಾರೂ ಹೇಳಲಾರರು. ಸಮಾಜದಲ್ಲಿ ಲೈಂಗಿಕ ಅರಾಜಕತೆಯ ಪ್ರಸಾರ ಹಾಗೂ 'ಆಚಾರ'ಗಳನ್ನು ಕೈ ಬಿಟ್ಟು ತಮ್ಮ ನೀಚ ಭಾವನೆಗಳನ್ನು ವಾಮ ಮಾರ್ಗಗಳಿಂದ ತಣಿಸಬಯಸುವವರ ಹೊರತು ಇನ್ನಾರಾದರೂ ಹಾಗೆ ಹೇಳಿಯಾರೇ?

ವಿದ್ಯಾಭ್ಯಾಸದ ನೀತಿಯೇನು? ಅದು ಜೀವನದ ಸಮಸ್ಯೆಗಳನ್ನು ತಾತ್ವಿಕವಾಗಿಯಾದರೂ ಮನವರಿಕೆ ಮಾಡಿಸದಿದ್ದೀತೇ?

ವಿವಾಹ! ಅದೊಂದು ಪವಿತ್ರ ವ್ಯಾವಹಾರಿಕ ಪರಿಜ್ಞಾನವಲ್ಲವೇ? ಅನುಭವಗಳ ಮೂಲಕ ಮನಸ್ಸನ್ನು ಪಕ್ವಗೊಳಿಸಿ, ಬುದ್ಧಿಯನ್ನು ವಿಕಾಸಗೊಳಿಸುವ ಕೆಲಸವು ಅದರಿಂದಾಗುವುದಿಲ್ಲವೇ?

ಈಜಿಪ್ಟ್‌ನಲ್ಲಿ ಓರ್ವ ಮುಸ್ಲಿಮೇತರ ಬರೆಹಗಾರರಿದ್ದಾರೆ.* ಇಸ್ಲಾಮನ್ನು ಪ್ರತ್ಯಕ್ಷ ವಾಗಿಯೂ ಪರೋಕ್ಷವಾಗಿಯೂ ವಾರಪತ್ರಿಕೆಯೊಂದರ ಸಂಚಿಕೆಗಳಲ್ಲಿ ನಿರಂತರ ಟೀಕಿಸು ವುದೇ ಅವರ ನಿತ್ಯ ವೃತ್ತಿ. ಒಮ್ಮೆ ಅವರು ಸ್ತ್ರೀಯರಿಗೆ ನೀಡಿದ ಉಪದೇಶವು ಹೀಗಿತ್ತು:

"ನಿಮ್ಮ ಪುರಾತನ ಆಚಾರಗಳನ್ನು ಕಿತ್ತೆಸೆಯಿರಿ. ಹೊರಗಿಳಿದು ಪುರುಷರೊಡನೆ ಧೈರ್ಯವಾಗಿ ಬೆರೆಯಿರಿ. ಫ್ಯಾಕ್ಟರಿಗಳಲ್ಲಿಯೂ ವ್ಯಾಪಾರ ಕೇಂದ್ರಗಳಲ್ಲಿಯೂ ಉದ್ಯೋಗಕ್ಕಾಗಿ ಸ್ಪರ್ಧಿಸಿ ಮುಂದೆ ಸಾಗಿರಿ - ಪರಿಸ್ಥಿತಿಯ ಅನಿವಾರ್ಯತೆಗಾಗಿಯಲ್ಲ, ಮಾತೃತ್ವ ನೀತಿ ಮತ್ತು ಮಾನವ ಸೃಷ್ಟಿಯ ಸಂರಕ್ಷಣೆಗಾಗಿ; ನಿಮ್ಮನ್ನು ಬಂಧಿಸಿಟ್ಟಿರುವ ಆಚಾರಗಳಿಗೆ ಸವಾಲೊಡ್ಡಲಿಕ್ಕಾಗಿ ಮಾತ್ರ!"

ಅದು ಸಾಲದೆಂಬಂತೆ ಅವರು ಹೀಗೂ ಹೇಳಿದರು: "ಬೀದಿಗಳಲ್ಲಿ ಕೆಳ ನೋಟ ಬೀರಿ ನಡೆಯುವಾಕೆಯು ಸ್ವಂತಿಕೆಯ ಬಗ್ಗೆ ಒಲವಿಲ್ಲದವಳಾಗಿದ್ದಾಳೆ. ಆಕೆ ಸಮಾಜ ಮತ್ತು

---

* ಆ ಲೇಖಕನ ಹೆಸರು ಸಲಾಮ್ ಮೂಸಾ. ತನ್ನ ಸುದೀರ್ಘ ಜೀವನ ಕಾಲದಲ್ಲಿ ಬರೆದ ಪ್ರತಿಯೊಂದು ಪಂಕ್ತಿಯನ್ನು ಅವರು ಇಸ್ಲಾಮಿನ ತೇಜೋವಧೆಗಾಗಿ ಬಳಸಿದರು. ಕ್ರೈಸ್ತ ಲೇಖಕ ಜೋರ್ಜ್ ಸೈದಾನ್ ಅವರ ಪಡಿಯಚ್ಚು. ಅವರು ಇಂದು ಕಾವೇರಿರುವ 'ಯುದ್ಧ'ದ ಮುಂಚೂಣಿಯಲ್ಲಿದ್ದಾರೆ.

ಪುರುಷನಿಗೆ ಹೆದರುವವಳಾಗಿದ್ದಾಳೆ. ಆದರೆ ಅನುಭವದಿಂದ ಮನಗಂಡಾಗ ಆಕೆ ಪಂಥಾಹ್ವಾನದಿಂದ ತಲೆಯೆತ್ತುವಳು. ಪುರುಷರನ್ನು ಧೈರ್ಯದಿಂದ ಎದುರಿಸಲೂ ಆಕೆಗೆ ಸಾಧ್ಯವಾಗುವುದು."

ಇಸ್ಲಾಮಿನ ಆರಂಭಿಕ ಹಂತದಲ್ಲಿ ಸಾಮಾನ್ಯ ರಾಜಕೀಯದಲ್ಲಿ ಪಾಲ್ಗೊಂಡು, ಸೇನೆಯನ್ನು ಮುನ್ನಡೆಸಿ ಯುದ್ಧರಂಗದಲ್ಲಿ ಹೋರಾಡಿದ್ದ ಹಝ್ರತ್ ಆಯಿಶಾರು(ರ) ಪರ್ದಾದ ಮರೆಯೊಳಗಿದ್ದು ಮಾತನಾಡುತ್ತಿದ್ದರೆಂದು ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ!

ಕೆಳನೋಟ ಬೀರುವ ಗುಣವು ಕೇವಲ ಸ್ತ್ರೀಯರ ವೈಶಿಷ್ಟ್ಯವಲ್ಲ. ಪ್ರವಾದಿ ಮುಹಮ್ಮದ್‌ರು(ಸ) ತರುಣಿಯರಿಗಿಂತ ಲಜ್ಜಾಶೀಲರಾಗಿದ್ದರೆಂದು ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ತನ್ನ ಸ್ವಂತಿಕೆಯ ಬಗ್ಗೆ ಪ್ರವಾದಿವರ್ಯರಿಗೆ(ಸ) ನಂಬಿಕೆಯಿರಲಿಲ್ಲವೇ? ಮಾನವ ಕುಲಕ್ಕೆ ತಾನು ತಂದ ರಾಯಭಾರದ ವಾಸ್ತವಿಕತೆಯನ್ನು ಅವರು ಮನಗಂಡಿರಲಿಲ್ಲವೇ? ಇಂತಹ ಬಾಲಿಶ ವಾದಗಳನ್ನು ಆರೋಪಕರು ಇನ್ನೆಷ್ಟು ಕಾಲ ಮುಂದುವರಿಸುವರೋ?

# ಇಸ್ಲಾಮ್ ಮತ್ತು ಶಿಕ್ಷಾ ಸಂಪ್ರದಾಯ

ಪ್ರಾಚೀನ ಕಾಲದಲ್ಲಿ ಯಾವುದೋ ಮರಳುಗಾಡಿನಲ್ಲಿ ರೂಢಿಯಲ್ಲಿದ್ದ ಕಿರಾತ ಶಿಕ್ಷಾ ಸಂಪ್ರದಾಯವನ್ನು ಇಂದು, ಈ 20ನೇ ಶತಮಾನದಲ್ಲಿ ಜ್ಯಾರಿಗೊಳಿಸಬೇಕೇ? ಕೇವಲ ಕಾಲು ದೀನಾರ್ ಕಳ್ಳತನಕ್ಕೆ ಕೈ ಕಡಿಯುವ ಶಿಕ್ಷೆಯೇ? ಅಪರಾಧಿಯನ್ನು ಸಮಾಜದ ಬಲಿಪಶುವೆಂದು ಪರಿಗಣಿಸಿ ಆತನನ್ನು ಶಿಕ್ಷಿಸದೆ ಸುಧಾರಿಸಬೇಕೆಂದು ಘೋಷಿಸುವ ಈ 20ನೇ ಶತಮಾನದಲ್ಲಿಯೂ?!

ಈ 20ನೇ ಶತಮಾನವು ಹತ್ತು ಸಾವಿರ ನಿರಪರಾಧಿಗಳನ್ನು ಒಂದೇ ಏಟಿಗೆ ಕೊಲ್ಲಲು ಅನುಮತಿಸಬಹುದು. ಆದರೆ ಪಾಪಿ ಮತ್ತು ಅಪರಾಧಿಯಾದ ಓರ್ವ ವ್ಯಕ್ತಿಯನ್ನು ವಧಿಸುವುದನ್ನು ಅದಕ್ಕೆ ಸಹಿಸಲಾಗುವುದಿಲ್ಲ!

20ನೇ ಶತಮಾನದ ನಾಗರಿಕತೆಯನ್ನು ನಾವು ಅದರ ಪಾಡಿಗೆ ಬಿಡೋಣ. ಅಪರಾಧ ಮತ್ತು ಶಿಕ್ಷೆಯ ಕುರಿತು ಇಸ್ಲಾಮಿನ ದೃಷ್ಟಿಕೋನವೇನೆಂದು ನೋಡೋಣ.

ಹಲವೊಮ್ಮೆ ವ್ಯಕ್ತಿಯು ಸಮಾಜದ ವಿರುದ್ಧ ನಡೆಸುವ ಹಸ್ತಕ್ಷೇಪವೇ ಅಪರಾಧವಾಗಿರುತ್ತದೆ.[1]

ಆದ್ದರಿಂದ ಅಪರಾಧ ಮತ್ತು ಶಿಕ್ಷೆಗೆ ಸಂಬಂಧಿಸಿದ ದೃಷ್ಟಿಕೋನವು, ಪ್ರತಿಯೊಂದು ಸಮುದಾಯವೂ ಅದರ ವ್ಯಕ್ತಿ ಮತ್ತು ಸಮಾಜದ ಸಂಬಂಧವನ್ನು ಯಾವ ರೀತಿಯಿಂದ ನೋಡುತ್ತಿದೆಯೆಂಬುದನ್ನು ಅವಲಂಬಿಸಿದೆ.

ಪಾಶ್ಚಾತ್ಯ ಭಂಡವಾಳಶಾಹೀ ರಾಷ್ಟ್ರಗಳಂತಹ 'ವ್ಯಕ್ತಿಸ್ವಾತಂತ್ರ್ಯವಾದೀ' ರಾಷ್ಟ್ರಗಳೂ ವ್ಯಕ್ತಿಯನ್ನು ಪಾವಿತ್ರ್ಯದ ಉತ್ತುಂಗಕ್ಕೇರಿಸಿ ಸಾಮಾಜಿಕ ಜೀವನದ ಕೇಂದ್ರಬಿಂದುವೆಂದು ಪರಿಗಣಿಸುತ್ತದೆ. ಮಾತ್ರವಲ್ಲ, ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಸಮಾಜವು ನಡೆಸುವ ಕ್ಷುಲ್ಲಕ ಹಸ್ತಕ್ಷೇಪವನ್ನೂ ಘೋರ ಪಾಪವೆಂದು ಭಾವಿಸಲಾಗುತ್ತದೆ. ಈ ದೃಷ್ಟಿಕೋನವು ಅಪರಾಧ ಮತ್ತು ಶಿಕ್ಷೆಯ ದೃಷ್ಟಿಕೋನದ ಮೇಲೆಯೂ ಪ್ರಭಾವ ಬೀರುತ್ತದೆ. ತನ್ನಿಮಿತ್ತ ಆ ರಾಷ್ಟ್ರಗಳು ಅಪರಾಧಿಗಳ ಬಗ್ಗೆ ಭಾರೀ ದಾಕ್ಷಿಣ್ಯ ತೋರುತ್ತವೆ. ವ್ಯಕ್ತಿಯು, ಅನಿಯಂತ್ರಿತವಾದ ದುಷ್ಟ ಸಾಮಾಜಿಕ ಪರಿಸ್ಥಿತಿ, ಮಾನಸಿಕ ಅಸ್ವಸ್ಥತೆ ಮತ್ತು ಆಂತರಿಕ

---

1. ವ್ಯಕ್ತಿಯ ಜೀವನಕ್ಕೆ ಭದ್ರತೆ ಒದಗಿಸದಿದ್ದರೆ, ಸಮಾಜವೇ ಅದಕ್ಕೆ ಹೊಣೆಯಾಗಿರುವುದೆಂದು ಇಸ್ಲಾಮ್ ಪ್ರಪ್ರಥಮವಾಗಿ ಘೋಷಿಸಿದೆ. ಹಾಗೆಯೇ ತನ್ನ ಹಕ್ಕುಗಳಿಗಾಗಿ ಸಮಾಜದ ವಿರುದ್ಧ ಹೋರಾಡುವ ಹಕ್ಕನ್ನೂ ಅದು ವ್ಯಕ್ತಿಗೆ ನೀಡಿದೆ.

ಸಂಘರ್ಷದ ಮಿಕವೆಂಬ ನೆಲೆಯಲ್ಲಿ ಆತನೊಡನೆ ಅಮಿತ ಔದಾರ್ಯ ತೋರುತ್ತದೆ. ಅದಕ್ಕಾಗಿ ಶಿಕ್ಷೆಯನ್ನು ಆದಷ್ಟು ಸರಳ ಗೊಳಿಸಲು ಪ್ರಯತ್ನಿಸುತ್ತದೆ. ನೈತಿಕ ಅಪರಾಧಗಳಿಗೆ ಅದನ್ನು ಪದೇಪದೇ ಸರಳಗೊಳಿಸಿ ಶಿಕ್ಷೆಯೇ ಇಲ್ಲದಂತಾಗಿದೆ.

ಇಲ್ಲಿ ಅಪರಾಧವನ್ನು ಸಮರ್ಥಿಸಲಿಕ್ಕಾಗಿ ಸುಪ್ತ ಮನೋವಿಶ್ಲೇಷಣಾ (Psycho-analysis)[1] ಶಾಸ್ತ್ರವು ನೆರವಾಗುತ್ತದೆ.

ಅಪರಾಧಿಗಳ ಬಗೆಗಿನ ನೀತಿಯ ಕ್ರಾಂತಿಕಾರೀ ಬದಲಾವಣೆಗಳಿಗೆ ಫ್ರ್ಯಾಡ್ ನಾಯಕತ್ವ ನೀಡಿದನು. ಆತನ ಸಿದ್ಧಾಂತದಂತೆ, ಸ್ವಚ್ಛಂದವಾಗಿ ವಿಹರಿಸಬೇಕಾದ ಲೈಂಗಿಕಾಸಕ್ತಿಯನ್ನು ಧರ್ಮ, ಸದಾಚಾರ ಮತ್ತು ನೈತಿಕ ಶಿಕ್ಷಣಗಳ ಮೂಲಕ ದಮನಿಸುವುದರಿಂದ ಉದ್ಭವಿಸುವ ಮಾನಸಿಕ ದೌರ್ಬಲ್ಯಗಳೇ ವ್ಯಕ್ತಿಗಳನ್ನು ಅಪರಾಧಗಳಿಗೆ ಪ್ರೇರೇಪಿಸುತ್ತದೆ. ಈ ವಾದವನ್ನು ಕಾಲಕ್ರಮೇಣ ಎಲ್ಲ ಮನೋವಿಶ್ಲೇಷಕ ವೈಚಾರಿಕ ಆಂದೋಲನಗಳು ಅನುಸರಿಸಿದುವು. ಆದರೆ ಜೀವನದ ಅಕ್ಷವು, ಲೈಂಗಿಕಾಸಕ್ತಿಯೆಂಬ ಫ್ರ್ಯಾಡ್‌ನ ಸಿದ್ಧಾಂತವನ್ನು ಅವರು ಅಂಗೀಕರಿಸಲಿಲ್ಲ. ಆ ವಾದದಂತೆ, ಅಪರಾಧಿ ತಾನು ಹುಟ್ಟಿ ಬೆಳೆದ ವಿಶಿಷ್ಟ ಪರಿಸರ ಮತ್ತು ಸಾಮಾನ್ಯ ಪರಿಸ್ಥಿತಿಗಳ ಪ್ರಭಾವದಿಂದ ಹೊರ ಬರಲಾಗದ ಕೇವಲ ಒಂದು ಆಟಿಕೆಯಾಗಿದ್ದಾನೆ. ಮಾನವನ ಮಾನಸಿಕ ಸಾಮರ್ಥ್ಯ ಮತ್ತು ವ್ಯವಹಾರಗಳಿಗೆ ಕೇವಲ 'ಮಾನಸಿಕ ಅನಿವಾರ್ಯ ಸ್ಥಿತಿ'ಯೆಂಬ ಯಾಂತ್ರಿಕ ಸ್ವಭಾವವಿರುವುದೆಂದು ಅವರು ನಂಬುತ್ತಾರೆ.

ತದ್ವಿರುದ್ಧವಾಗಿ ಸಮತಾವಾದಿ ರಾಷ್ಟ್ರಗಳಲ್ಲಿ ವ್ಯಕ್ತಿಗೆ ಯಾವ ಸ್ವಂತ ಅಸ್ತಿತ್ವವೂ ಇಲ್ಲ. ಆತನಿಗೆ ಸಮಾಜದ ವಿರುದ್ಧ ಹೋರಾಡಲೂ, ಧ್ವನಿಯೆತ್ತಲೂ ಹಕ್ಕಿಲ್ಲ. ಆದ್ದರಿಂದ ಸಮಾಜದ ವಿರುದ್ಧ ಸ್ವರವೆತ್ತುವವರನ್ನು ಮರಣದಂಡನೆ ಅಥವಾ ಗಡೀಪಾರು ಮುಂತಾದ ಕಠಿಣ ಶಿಕ್ಷೆಗೆ ಗುರಿಪಡಿಸಲಾಗುತ್ತದೆ.

ಕಮ್ಯೂನಿಸ್ಟ್ ಸಿದ್ಧಾಂತದಂತೆ ಆರ್ಥಿಕ ಕಾರಣಗಳೇ ಅಪರಾಧಗಳಿಗೆ ಪ್ರೇರಕವಾಗಿದೆ. ಆದರೆ ಫ್ರ್ಯಾಡ್ ಮತ್ತಿತರ ಮನೋವಿಜ್ಞಾನಿಗಳು ಹೇಳುವ ಮಾನಸಿಕ ಕಾರಣಗಳಲ್ಲ. ಆರ್ಥಿಕವಾಗಿ ಹಿಂದುಳಿದ ಸಮಾಜಗಳಲ್ಲಿ ಉತ್ಕೃಷ್ಟ ಗುಣಗಳು ಸಂಜಾತವಾಗಲಾರವು. ಆದ್ದರಿಂದ ಅಪರಾಧಿಗಳನ್ನು ಶಿಕ್ಷಿಸಬಾರದು. ಹಾಗಿದ್ದರೆ, ಸಮತಾವಾದದಲ್ಲಿ ಅಧಿಷ್ಠಿತವಾಗಿರುವ ಆರ್ಥಿಕ ವ್ಯವಸ್ಥೆಯಿರುತ್ತಾ, ಸೋವಿಯಟ್ ರಶ್ಯದಲ್ಲಿ ಅಪರಾಧಗಳು ಯಾಕೆ ಸಂಭವಿಸುತ್ತಿದೆಯೋ ನನಗೆ ತಿಳಿಯದು! ಅಲ್ಲಿ ನ್ಯಾಯಾಲಯ ಮತ್ತು ಸೆರೆಮನೆಗಳ ಅಗತ್ಯವೇನೋ?

---

1. ಮನೋರೋಗಿಗಳ ಭಾವನೆ ಮತ್ತು ಪೂರ್ವ ಚರಿತ್ರೆಗಳ ಬಗ್ಗೆ ವೈಜ್ಞಾನಿಕ ಪರಿಶೀಲನೆ ನಡೆಸಿ ರೋಗವನ್ನು ಗುರುತಿಸುವ ಫ್ರ್ಯಾಡ್ ಮುಂತಾದವರ ವೈಜ್ಞಾನಿಕ ವಿಧಾನ.

ಈ ಎರಡು ವಿಚಾರಧಾರೆಗಳಲ್ಲಿಯೂ ಸತ್ಯಾಂಶಗಳಿವೆ. ಅದಕ್ಕಿಂತ ಹೆಚ್ಚು ಅತಿಶಯೋಕ್ತಿಯಿದೆ. ವ್ಯಕ್ತಿಯ ನಿರ್ಮಾಣದಲ್ಲಿ ಪರಿಸ್ಥಿತಿಯ ಭಾರೀ ಪ್ರಭಾವ ಮತ್ತು ಪಾತ್ರವಿದೆ. ಹಲವೊಮ್ಮೆ ಪ್ರಜ್ಞಾಪೂರ್ವಕವಲ್ಲದ ಮಾನಸಿಕ ದೌರ್ಬಲ್ಯಗಳು ಅಪರಾಧಗಳಿಗೆ ಪ್ರೇರಕವಾಗಬಹುದು. ಆದರೆ ಮಾನವನು ಕೇವಲ ನಿಷ್ಕ್ರಿಯ ಮತ್ತು ಪರಿಸರದ ಆಟಿಕೆಯಾಗಿರುವಂತಹ ಜೀವಿಯಲ್ಲ. ವಿಶ್ಲೇಷಕ ಮನೋವಿಜ್ಞಾನಿಗಳ ಪ್ರಮಾದವೇನೆಂದರೆ, ಅವರು ಮಾನವನಲ್ಲಿ ಸುಪ್ತವಾಗಿರುವ ಕೇವಲ ಕ್ರಿಯಾತ್ಮಕ ಶಕ್ತಿಯನ್ನು ಗಮನಿಸಿ, ಆತನ ನಿಯಂತ್ರಣ ಶಕ್ತಿಯನ್ನು ನಿರ್ಲಕ್ಷಿಸಿಬಿಡುತ್ತಾರೆ. ವಾಸ್ತವದಲ್ಲಿ ಅದು ಮಾನವನ ಮನಸ್ಸಿನ ಅವಿಭಾಜ್ಯ ಅಂಗವಾಗಿದೆ. ಪ್ರಸ್ತುತ ಸಾಮರ್ಥ್ಯವೇ ಒಂದು ಮಗುವಿನ ಸ್ವಇಚ್ಛೆಗಳನ್ನು ನಿಯಂತ್ರಿಸುತ್ತದೆ. ಚಾಪೆಯಲ್ಲಿ ಮೂತ್ರಿಸುವ ರೂಢಿಯಿರುವ ಮಗುವು ಕ್ರಮೇಣ ಅನ್ಯರ ಪ್ರೇರಣೆಯಿಲ್ಲದೆಯೇ ಆ ಅಭ್ಯಾಸವನ್ನು ಬದಲಾಯಿಸುತ್ತದೆ. ಆ ನಿಯಂತ್ರಣ ಶಕ್ತಿಯೇ ಅದಕ್ಕೆ ಸ್ವಾಭಿಲಾಷೆ ಮತ್ತು ಅನಿಸಿಕೆಗಳಿಗೆ ವಿರುದ್ಧವಾಗಿ ಚಲಿಸುವ ಸ್ವನಿಯಂತ್ರಣ ಸ್ಥೈರ್ಯವನ್ನು ನೀಡುತ್ತದೆ.

ಹಾಗೆಯೇ ವ್ಯಕ್ತಿಯ ಭಾವನೆ ಮತ್ತು ವರ್ತನೆಗಳ ನಿರ್ಮಾಣದಲ್ಲಿ ಆರ್ಥಿಕ ಪರಿಸ್ಥಿತಿಗಳಿಗೂ ಪ್ರಮುಖ ಪಾತ್ರವಿದೆ. ಹಸಿವು ಕೆಲವೊಮ್ಮೆ ಅಪರಾಧಕ್ಕೂ, ಮಾನಸಿಕ ಸಂತುಲಿತತೆಯನ್ನು ಕೆಡಿಸುವ ಅಸೂಯೆಗೂ ತನ್ಮೂಲಕ ನೈತಿಕ ಅಧಃಪತನಕ್ಕೂ ಪ್ರೇರಕವಾಗಬಹುದು. ಆದರೆ ಕೇವಲ ಆರ್ಥಿಕ ಪರಿಸ್ಥಿತಿಯೇ ಮಾನವನ ವರ್ತನೆಗಳನ್ನು ನಿಯಂತ್ರಿಸುತ್ತದೆಂಬ ವಾದವು ಉತ್ಪ್ರೇಕ್ಷೆಯಾಗಿದೆ. ಜೀವನದ ವಾಸ್ತವಿಕತೆಗಳು ಅದನ್ನು ನಿಷೇಧಿಸುತ್ತದೆ. ಕಮ್ಯೂನಿಸ್ಟರ ವಾದದಂತೆ ಬಡತನ ಮತ್ತು ಹಸಿವಿನ ಗಂಧಗಾಳಿಯಿಲ್ಲದ ಸೋವಿಯಟ್ ರಶ್ಯದಲ್ಲಿಯೂ ಅಪರಾಧಗಳು ನಡೆಯುತ್ತಿರುವುದು ಅದಕ್ಕೆ ನಿದರ್ಶನವಾಗಿದೆ.

ಹಾಗಿದ್ದರೆ ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ: ಅಪರಾಧಕ್ಕೆ, ಅಪರಾಧಿಯು ಎಷ್ಟಂಶ ಹೊಣೆಯಾಗಿದ್ದಾನೆ? ಯಾವ ಆಧಾರದಲ್ಲಿ ಆತನಿಗೆ ಶಿಕ್ಷೆ ವಿಧಿಸಬೇಕು? ಅಥವಾ ವಿಧಿಸಬಾರದು?

ಈ ವಾಸ್ತವಿಕತೆಯನ್ನು ಗಮನಿಸಿ ಇಸ್ಲಾಮ್ ಧರ್ಮವು ಅಪರಾಧ ಮತ್ತು ಶಿಕ್ಷೆಯ ಸಮಸ್ಯೆಯನ್ನು ವ್ಯವಹರಿಸುತ್ತದೆ.

ಇಸ್ಲಾಮ್ ವಿನಾಕಾರಣ ಶಿಕ್ಷೆ ವಿಧಿಸಿ ಅದನ್ನು ಕಣ್ಣುಮುಚ್ಚಿ ಜ್ಯಾರಿಗೊಳಿಸಿ ಬಿಡುವುದಿಲ್ಲ. ಇಸ್ಲಾಮಿಗೆ ಲೋಕದ ಇತರೆಲ್ಲ ಸಿದ್ಧಾಂತಗಳಿಗಿಂತ ಭಿನ್ನವಾದ ದೃಷ್ಟಿಕೋನವಿದೆ. ಕೆಲವೊಮ್ಮೆ ಅದು ಭಂಡವಾಳಶಾಹೀ ಸಮಾಜಗಳ ಸಿದ್ಧಾಂತಕ್ಕೆ ಸರಿಹೊಂದಬಹುದು. ಇನ್ನು ಕೆಲವೊಮ್ಮೆ ಸರ್ವಾಧಿಕಾರೀ ಸಮಾಜವಾದಕ್ಕೆ ಸರಿಹೊಂದಬಹುದು. ಆದರೆ ಅದು ಅವೆರಡರ ಮಧ್ಯೆ ನ್ಯಾಯದ ತಕ್ಕಡಿಯನ್ನು ಎತ್ತಿ ಹಿಡಿಯುವುದು. ಪರಿಸರ ಮತ್ತು ಪರಿಸ್ಥಿತಿಗಳನ್ನು

ಏಕಕಾಲದಲ್ಲಿ ಗಮನಿಸುವುದು. ಅಪರಾಧದ ಬಗ್ಗೆ ಅದು ಮಾಡಿದ ವ್ಯಕ್ತಿ ಮತ್ತು ಅದು ಸಂಭವಿಸಿದ ಸಮಾಜದ ದೃಷ್ಟಿಯಿಂದ ಏಕಕಾಲದಲ್ಲಿ ವೀಕ್ಷಿಸುವುದು. ತರುವಾಯ ಸ್ಪಷ್ಟ ತಿಳುವಳಿಕೆ ಮತ್ತು ಯುಕ್ತಿಗನುಸಾರ ನ್ಯಾಯೋಚಿತ ಕ್ರಮವನ್ನು ನಿರ್ಧರಿಸುತ್ತದೆ. ಆ ಬಗ್ಗೆ ತಪ್ಪು ವಿಚಾರಧಾರೆಗಳತ್ತ ವಾಲುವುದಿಲ್ಲ. ಅಥವಾ ವ್ಯಕ್ತಿ ಯಾ ಸಮಾಜದ ಅಭೀಷ್ಟಗಳಿಗೆ ಮಣಿಯುವುದಿಲ್ಲ.

ಸಮಸ್ಯೆಯ ಗಂಭೀರತೆಯನ್ನು ತಿಳಿಯದೆ, ಕೇವಲ ಬಾಹ್ಯವಾಗಿ ಆಲೋಚಿಸುವವರಿಗೆ ಇಸ್ಲಾಮಿನ ಶಿಕ್ಷಾ ಸಂಪ್ರದಾಯವು ಕಿರಾತವೆಂದು ತೋರಬಹುದಾದರೂ ಅದು ವಿಧಿಸುವ ಶಿಕ್ಷೆಯು ಮಿತವಾಗಿದೆ. ಅಪರಾಧವೆಸಗಿದ ವ್ಯಕ್ತಿಯು ಅನಿವಾರ್ಯವಾಗಿ ಅಥವಾ ಇನ್ನಾವುದೇ ಸಮರ್ಥನೀಯ ಕಾರಣವಿಲ್ಲದೇ ಅಪರಾಧವೆಸಗಿರುವನೆಂದು ಖಾತ್ರಿಯಾದ ಬಳಿಕವೇ ಅದು ಶಿಕ್ಷೆ ವಿಧಿಸುತ್ತದೆ.

ಕಳ್ಳನ ಕೈ ಕಡಿಯಬೇಕೆಂದು ಇಸ್ಲಾಮಿನ ತೀರ್ಪು. ಆದರೆ ಕಳ್ಳತನಕ್ಕೆ ಹಸಿವೆಯೇ ಕಾರಣವೆಂಬ ಸಂದೇಹ ತೋರಿದರೆ ಅದು ಕೈ ಕಡಿಯಲು ಅನುಮತಿ ನೀಡುವುದಿಲ್ಲ. ವ್ಯಭಿಚಾರ ನಡೆಸುವ ಸ್ತ್ರೀ-ಪುರುಷರನ್ನು ಕಲ್ಲೆಸೆದು ಕೊಲ್ಲಬೇಕೆಂಬ ನಿಯಮವಿದೆ. ಆದರೆ, ಅವರು ವಿವಾಹಿತರಾಗಿದ್ದರೆ ಮಾತ್ರ ಅವರಿಗೆ ಆ ಶಿಕ್ಷೆ ಅನ್ವಯವಾಗುತ್ತದೆ. ಅದಕ್ಕೆ ಅಪರಾಧವನ್ನು ಕಣ್ಣಾರೆ ನೋಡಿದ ನಾಲ್ವರು ಪ್ರತ್ಯಕ್ಷದರ್ಶಿಗಳ ಸಾಕ್ಷ್ಯ ದೊರೆಯಬೇಕು. ಅಂದರೆ ವಿವಾಹಿತರಾಗಿರುತ್ತಾ ನಾಲ್ವರಿಗೆ ಕಾಣಿಸುವಂತೆ ಬಹಿರಂಗವಾಗಿ ವ್ಯಭಿಚಾರ ನಡೆಸಬೇಕು.

ಇಸ್ಲಾಮ್ ನಿಶ್ಚಯಿಸಿರುವ ಇತರೆಲ್ಲ ಶಿಕ್ಷಾ ವಿಧಿಗಳು ಈ ನೀತಿಯನ್ನೇ ಒಳಗೊಂಡಿವೆ. ಉಮರ್‌ರು(ರ) ದೃಢೀಕರಿಸಿದ ಒಂದು ಸ್ಪಷ್ಟ ತತ್ವವೇ ಅದಕ್ಕೆ ಆಧಾರವಾಗಿದೆ. ಅವರು ಇಸ್ಲಾಮಿನ ಗಣ್ಯ ಕಾನೂನು ತಜ್ಞರೂ ಇಸ್ಲಾಮಿ ಕಾನೂನುಗಳ ಜ್ಯಾರಿಯಲ್ಲಿ ನಿರ್ದಾಕ್ಷಿಣ್ಯರಾಗಿದ್ದ ಆಡಳಿತಗಾರರೂ ಆಗಿದ್ದರು.

ಬರಗಾಲಗಳಲ್ಲಿ ಕದ್ದವರ ಕೈ ಕಡಿಯಲು ಅವರು ಒಪ್ಪಲಿಲ್ಲ. ಕಳ್ಳತನಕ್ಕೆ ಹಸಿವು ಪ್ರೇರಕವಾಗಿರಬಹುದೆಂಬ ಸಂದೇಹದಿಂದ ಅವರು ಆ ಶಿಕ್ಷೆ ಜಾರಿಗೊಳಿಸಲಿಲ್ಲ.

ನಾವು ಇಲ್ಲಿ ಎತ್ತಿ ಹೇಳಬಯಸುವ ತತ್ವಕ್ಕೆ ಈ ಕೆಳಗಿನ ಘಟನೆಯು ಅತಿ ಸಮರ್ಥ ಉದಾಹರಣೆಯಾಗಿದೆ.

ಹಾತಿಬ್ ಬಿನ್ ಅಬೀ ಬಲಅರ ಪುತ್ರನ ಕೆಲವು ಗುಲಾಮರು ಮುಸೈನದ ಓರ್ವರ ಒಂಟೆಯೊಂದನ್ನು ಅಪಹರಿಸಿದರು. ಆ ವ್ಯಕ್ತಿಯು ಅವರನ್ನು ಉಮರ್‌ರ(ರ) ಮುಂದೆ ಹಾಜರುಪಡಿಸಿದರು. ಅವರು ತಪ್ಪೊಪ್ಪಿ ಕೊಂಡರು. ಆಗ ಉಮರ್‌ರು(ರ) ಕಸೀರ್ ಬಿನ್

ಸಲ್ಕೀಯವರೊಡನೆ ಅವರ ಕೈ ಕಡಿಯುವಂತೆ ಆಜ್ಞಾಪಿಸಿದರು. ಅವರು ಅಲ್ಲಿಂದ ಹೊರಟಾಗ ಮರಳಿ ಕರೆದರು. ತರುವಾಯ ಹೀಗೆಂದರು: "ಅಲ್ಲಾಹನಾಣೆ, ನೀವು ಅವರನ್ನು ದುಡಿಸಿ ಅವರನ್ನು ಹಸಿವೆಯಲ್ಲಿ ಕೆಡಹುತ್ತೀರಿ. ಅಂತಹ ಸನ್ನಿವೇಶದಲ್ಲಿ ಅಲ್ಲಾಹನು ನಿಷಿದ್ಧಗೊಳಿಸಿದ ವಸ್ತುಗಳನ್ನು ಭಕ್ಷಿಸುವುದೂ ಅವರಿಗೆ ಧರ್ಮ ಸಮ್ಮತವಾಗಿದೆ. ಈ ವಸ್ತುಸ್ಥಿತಿಯನ್ನು ನಾನು ಗಮನಿಸದಿರುತ್ತಿದ್ದರೆ ಅವರ ಕೈ ಕಡಿಯುತ್ತಿದ್ದೆ." ಆ ಬಳಿಕ ಹಾತಿಬ್‌ರ ಮಗನತ್ತ ತಿರುಗಿ ಉಮರ್(ರ) ಹೀಗೆಂದರು: "ಅವರನ್ನು ಶಿಕ್ಷಿಸದಿರುವ ಹಿನ್ನೆಲೆಯಲ್ಲಿ, ನಾನು ನಿನಗೆ ಪಾಠ ಕಲಿಯುವಂತಹ ಒಂದು' ಶಿಕ್ಷೆಯನ್ನು ವಿಧಿಸುತ್ತೇನೆ." ತರುವಾಯ ಅಪಹೃತ ಒಂಟೆಯ ಬೆಲೆಯನ್ನು ಮುಸೈನಾದವರೊಡನೆ ಕೇಳಿ ತಿಳಿದು, ಅದರ ಇಮ್ಮಡಿ ಮೊತ್ತವನ್ನು ದಂಡ ನೀಡುವಂತೆ ಹಾತಿಬ್‌ರ ಪುತ್ರನಿಗೆ ಉಮರ್(ರ) ಆಜ್ಞಾಪಿಸಿದರು.

ಇಲ್ಲಿ ಸಂದೇಹಾತೀತವಾದ ಸುಸ್ಪಷ್ಟ ನೀತಿಯೊಂದಿದೆ. ಅಪರಾಧಕ್ಕೆ ಪ್ರೇರಣೆ ನೀಡುವ ವಾತಾವರಣವಿರುವಾಗ ಶಿಕ್ಷೆ ಜ್ಯಾರಿಗೊಳಿಸಬಾರದೆಂಬುದೇ ಆ ನೀತಿ. "ಸಂದೇಹಾಸ್ಪದವಿರುವಾಗ ಶಿಕ್ಷೆಯನ್ನು ಕೈಬಿಡಬೇಕೆಂಬ" ಪ್ರವಾದಿ ವಚನವೇ ಅದಕ್ಕೆ ಸಾಕ್ಷಿಯಾಗಿದೆ.[1]

ಇಸ್ಲಾಮಿನ ಪ್ರತಿಯೊಂದು ಶಿಕ್ಷಾ ವಿಧಿಯನ್ನು ಕೂಲಂಕಷವಾಗಿ ಅವಲೋಕಿಸಿದರೆ ಅದರಲ್ಲಿರುವ ಮೂಲ ನೀತಿಯನ್ನು ತಿಳಿಯಬಹುದು. ಪ್ರಥಮವಾಗಿ ಅದು ಅಪರಾಧಕ್ಕೆಡೆಗೊಡುವ ಎಲ್ಲ ಮಾರ್ಗಗಳನ್ನೂ ಸಮಾಜದಲ್ಲಿ ಮುಚ್ಚಿಬಿಡುತ್ತದೆ. ಆ ಬಳಿಕ-ಮುಂಚೆಯಲ್ಲ-ಮಿತ ಮತ್ತು ನ್ಯಾಯಬದ್ಧವಾದ ಅದರ ಶಿಕ್ಷೆಯನ್ನು ಜ್ಯಾರಿಗೊಳಿಸುತ್ತದೆ. ಅದನ್ನೂ ವ್ಯಕ್ತಿಯನ್ನು ಅಪರಾಧ ಕೃತ್ಯಕ್ಕೆ ಪ್ರಚೋದಿಸುವ ಪರಿಸ್ಥಿತಿಯಿರಲಿಲ್ಲವೆಂದು ಮನಗಂಡ ಬಳಿಕವೇ ಕಾರ್ಯಗತಗೊಳಿಸುತ್ತದೆ. ಕಾರಣಾವಶಾತ್, ಸಮಾಜದಿಂದ ಅಪರಾಧ ಪ್ರೇರಕ ವಾತಾವರಣ ನಿರ್ಮೂಲನ ಅಸಾಧ್ಯವಾಗಿದ್ದರೆ ಆಗ ಅಪರಾಧವು ಸಂದೇಹಾಸ್ಪದವಾಗಿದ್ದರೆ ಶಿಕ್ಷೆಯನ್ನು ಕೈ ಬಿಡುವುದು. ಅಲ್ಲಿ ಆರೋಪಿಯನ್ನು ಕಾನೂನು ಬಿಟ್ಟುಬಿಡುವುದು. ಅಥವಾ ಶಿಸ್ತುಕ್ರಮವೆಂಬ ನೆಲೆಯಲ್ಲಿ ಸಾದಾ ಶಿಕ್ಷೆ ನೀಡಲಾಗುವುದು. ಆ ಶಿಸ್ತುಕ್ರಮವು ಅಪರಾಧದಲ್ಲಿ ಆರೋಪಿಯ ಪಾತ್ರಕ್ಕನುಸಾರವಾಗಿ ಛಡಿಯೇಟು ಅಥವಾ ಸೆರೆಮನೆವಾಸ ವಿಧಿಸಬಹುದು.

ಇಸ್ಲಾಮ್ ಪ್ರಥಮವಾಗಿ ಸಂಪತ್ತಿನ ನ್ಯಾಯಬದ್ಧ ವಿತರಣೆಗಾಗಿ ಪ್ರಯತ್ನಿಸುತ್ತದೆ. ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಲ್ಲಿ ಸಮಾಜದಲ್ಲಿ ಬಡತನ ಸಂಪೂರ್ಣ ನಿರ್ಮೂಲನವಾಗಿತ್ತು. ಸಾಮಾಜಿಕ ಜೀವನದಲ್ಲಿ ವ್ಯಕ್ತಿಯ ಸ್ಥಾನಮಾನ, ಮತ, ಜಾತಿ,

1. ಅಬ್ದುಲ್ಲಾಬಿನ್ ಅಬ್ಬಾಸ್‌ರ ನಿವೇದನೆ- "ಪ್ರವಾದಿಯಿಂದ ಲಭಿಸಿದ ಕೈದೀವಿಗೆಗಳು" ಎಂಬ ಕೃತಿಯ 'ಸಂದೇಹಾಸ್ಪದವಾಗಿದ್ದಾಗ ಶಿಕ್ಷೆ ಕೈಬಿಡಿರಿ' ಎಂಬ ಅಧ್ಯಾಯ ನೋಡಿರಿ.

ವರ್ಣ, ಭಾಷೆ ಇತ್ಯಾದಿ ಪಕ್ಷಪಾತವಿಲ್ಲದೇ ಸಮಾಜದ ಪ್ರತೀಯೊಬ್ಬ ಪೌರನ ಸಂರಕ್ಷಣೆಯು ತನ್ನ ಹೊಣೆಯೆಂದು ಸರಕಾರವು ತಿಳಿಯುತ್ತದೆ. ಸೂಕ್ತ ಉದ್ಯೋಗ ಸೌಲಭ್ಯ ಒದಗಿಸಿ ಸರಕಾರವು ಅವರನ್ನು ಸಂರಕ್ಷಿಸುತ್ತದೆ. ಇನ್ನು, ಉದ್ಯೋಗ ಸಾಮರ್ಥ್ಯವಿಲ್ಲದವರಿಗೆ ಅಥವಾ ಸಾಕಷ್ಟು ಉದ್ಯೋಗ ಸೌಲಭ್ಯಗಳಿಲ್ಲದಿದ್ದರೆ, ಅಂಥವರಿಗೆ ಸಾರ್ವಜನಿಕ ಬೊಕ್ಕಸದಿಂದ ನೆರವು ನೀಡಲಾಗುತ್ತದೆ. ಹೀಗೆ ಕಳ್ಳತನಕ್ಕೆ ಅವಕಾಶ ನೀಡುವ ಎಲ್ಲ ಬಿರುಕುಗಳನ್ನು ಮೊದಲೇ ಮುಚ್ಚಿಬಿಡುತ್ತದೆ. ಹಾಗೆಯೇ ಆರೋಪಿಯು ಯಾವುದೇ ಅನಿವಾರ್ಯ ಪರಿಸ್ಥಿತಿಯ ಒತ್ತಡದಿಂದ ಅಪರಾಧವೆಸಗಿಲ್ಲವೆಂಬುದನ್ನು ಸಂಪೂರ್ಣವಾಗಿ ಖಚಿತಪಡಿಸಿ ಕೊಳ್ಳುತ್ತದೆ.

ಲೈಂಗಿಕಾಸಕ್ತಿಯು ಮಾನವನ ನೈಸರ್ಗಿಕ ಹಂಬಲವಾಗಿದ್ದು, ಅದರ ಪ್ರಭಾವವು ತೀವ್ರವಾಗಿದೆಯೆಂದು ಇಸ್ಲಾಮ್ ಅರಿತಿದೆ. ಆದ್ದರಿಂದ ಅದರ ಉಪಶಮನಕ್ಕಾಗಿ ಇಸ್ಲಾಮ್ ಕಾನೂನುಬದ್ಧ ಮಾರ್ಗವನ್ನು ನಿರ್ದೇಶಿಸಿದೆ. ಅದುವೇ ವಿವಾಹ. ಯುವ ಪ್ರಾಯದಲ್ಲಿಯೇ ವಿವಾಹವಾಗಬೇಕೆಂದು ಇಸ್ಲಾಮ್ ವಿನಂತಿಸುತ್ತದೆ. ಅಗತ್ಯಬಿದ್ದರೆ ವಿವಾಹದ ಖರ್ಚನ್ನು ಸಾರ್ವಜನಿಕ ಬೊಕ್ಕಸದಿಂದ ನೀಡಲಾಗುತ್ತದೆ. ತನ್ಮೂಲಕ ಮಾನವನ ಕೋಮಲ ಭಾವನೆಗಳನ್ನು ಪ್ರಚೋದಿಸುವ ಎಲ್ಲ ಸನ್ನಿವೇಶಗಳಿಂದ ಸಮಾಜವನ್ನು ಪರಿಶುದ್ಧಗೊಳಿಸುತ್ತದೆ. ಮಾನವನ ಕ್ರಿಯಾಶಕ್ತಿಯನ್ನು ಒಳಿತಿನ ಹಾದಿಯಲ್ಲಿ ಬಳಸಿಕೊಳ್ಳುವ ಉನ್ನತ ಧ್ಯೇಯಗಳನ್ನೂ ನಿರ್ಣಯಿಸುತ್ತದೆ. ವಿರಾಮ ವೇಳೆಗಳನ್ನು ದೇವಸಂಪ್ರೀತಿ ಮತ್ತು ಪುಣ್ಯ ಸಂಪಾದನೆಯ ಪ್ರಶಸ್ತ ಹಾದಿಯಲ್ಲಿ ವಿನಿಯೋಗಿಸಬೇಕೆಂದು ನಿರ್ದೇಶಿಸಲಾಗಿದೆ. ಅಪರಾಧಕ್ಕೆ ಪ್ರೇರೇಪಿಸುವ ಸಕಲ ದಾರಿಗಳನ್ನು ಮುಚ್ಚಿಬಿಡುವುದೇ ಅದರ ಉದ್ದೇಶ. ಅದೇ ವೇಳೆ ಅಂಥವಾಗಿ ಶಿಕ್ಷೆಯನ್ನು ಜ್ಯಾರಿಗೊಳಿಸದಿರುವ ನೀತಿಯನ್ನೂ ಅಂಗೀಕರಿಸಿದೆ. ಸಮಾಜದ ಸಕಲ ಸಂರಕ್ಷಣಾ ಮೇರೆಯನ್ನು ಉಲ್ಲಂಘಿಸಿ, ಸಮಾಜದ ಗೌರವವನ್ನು ಕಳಂಕಿತಗೊಳಿಸಿ, ನಾಲ್ವರು ಪ್ರತ್ಯಕ್ಷದರ್ಶಿಗಳ ಮುಂದೆ ಬಹಿರಂಗವಾಗಿ ಪಾಶವೀ ಲೈಂಗಿಕ ಕ್ರೀಡೆಯಲ್ಲಿ ನಿರತರಾಗಿರುವರೆಂದು ಸಾಬೀತಾಗಬೇಕು. ಆಗ ಮಾತ್ರ ಶಿಕ್ಷೆ ಜ್ಯಾರಿಗೊಳಿಸಲಾಗುವುದು.

ಶಿಕ್ಷಾ ಸಂಪ್ರದಾಯಗಳ ಬಗ್ಗೆ ಹೇಳುವಾಗ, ಇಂದಿನ ಕಲುಷಿತ ಸಾಮಾಜಿಕ-ಆರ್ಥಿಕ-ನೈತಿಕ ಪರಿಸ್ಥಿತಿಗಳು ಮನದಲ್ಲಿ ಪ್ರಥಮವಾಗಿ ಮೂಡಬಹುದು. ಅವೆಲ್ಲವೂ ಯುವಕರನ್ನು ನ್ಯಾಯಬದ್ಧ ಲೈಂಗಿಕ ಸಂಬಂಧಗಳಿಂದ ದೂರಗೊಳಿಸಿ, ಅಪರಾಧ ಕೃತ್ಯಗಳ ಹತ್ತಿರಕ್ಕೆ ಸಾಗಿಸುವಂಥವುಗಳಾಗಿವೆ. ಆದರೆ ಇಸ್ಲಾಮಿನ ಸ್ವೀಕಾರವೂ ತಿರಸ್ಕಾರವೂ ಪರಿಪೂರ್ಣವಾಗಿರಬೇಕು. ಲೈಂಗಿಕಾಸಕ್ತಿಯನ್ನು ಉದ್ರೇಕಿಸುವ ಮತ್ತು ಮಾನವನನ್ನು ಅನೈತಿಕತೆಗೆ

ದಬ್ಬುವ ಇಂದಿನ ಯಾವ ಪೈಶಾಚಿಕ ಪ್ರೇರಣೆಗಳೂ ಇಸ್ಲಾಮಿ ಆಡಳಿತದ ಅಧೀನದಲ್ಲಿರಲಾರದು. ಅಲ್ಲಿ ನಗ್ನತೆ ಪ್ರದರ್ಶಿಸುವ ಸಿನೆಮಾ, ಪತ್ರಿಕೆ ಮತ್ತು ನೃತ್ಯ ನಾಟಕಾದಿಗಳಿಗೆ ಅನುಮತಿಯಿರಲಾರದು. ಜನರಿಗೆ ವಿವಾಹವು ಹೊರೆಯಾಗುವಂಥ ತೀವ್ರ ಬಡತನವಿರಲಾರದು. ಇಂತಹ ವಾತಾವರಣವನ್ನು ಒದಗಿಸಿದ ಬಳಿಕವೇ ಇಸ್ಲಾಮ್ ಜನರಿಂದ ಉತ್ತಮ ವರ್ತನೆಯನ್ನು ಅಪೇಕ್ಷಿಸುತ್ತದೆ. ಹಾಗಿದ್ದರೆ ಮಾತ್ರವೇ ಅದು ತನ್ನ ಶಿಕ್ಷಾ ಕ್ರಮವನ್ನು ಜ್ಯಾರಿಗೊಳಿಸುತ್ತದೆ.

ಇಸ್ಲಾಮಿನ ಇತರೆಲ್ಲ ಶಿಕ್ಷಾ ಕ್ರಮಗಳ ನೀತಿಯೂ ಇದೇ ಆಗಿದೆ. ಪ್ರಥಮವಾಗಿ ಅಪರಾಧಗಳಿಗೆ ಪ್ರೇರಕವಾಗುವ ಕಾರಣಗಳನ್ನು ಸಮಾಜದಿಂದ ನಿವಾರಿಸುತ್ತದೆ. ತರುವಾಯ ಸಂದೇಹಕ್ಕೆ ಆಸ್ಪದವಿದ್ದರೆ, ಮುಂಜಾಗ್ರತೆಗಾಗಿ ಶಿಕ್ಷೆಯನ್ನು ಕೈಬಿಡುತ್ತದೆ. ಲೋಕದಲ್ಲಿ ಇದಕ್ಕಿಂತ ನ್ಯಾಯಬದ್ಧವಾದ ಬೇರೆ ಪದ್ಧತಿಯಿದೆಯೇ?

ಇಸ್ಲಾಮಿನ ಶಿಕ್ಷಾ ಸಂಪ್ರದಾಯವನ್ನು ಜ್ಯಾರಿಗೊಳಿಸಿದರೆ ಅದು ವ್ಯಕ್ತಿಯ ನಿಂದನೆ ಮತ್ತು ಚಾರಿತ್ರ್ಯಹನನವೆಂದು ಪಾಶ್ಚಾತ್ಯರು ಟೀಕಿಸುವರೋ ಎಂಬ ಭೀತಿ ಮುಸ್ಲಿಮರಿಗಿದೆ. ವಾಸ್ತವದಲ್ಲಿ ಅಪರಾಧ ಮತ್ತು ಶಿಕ್ಷೆಯ ಇಸ್ಲಾಮಿ ದೃಷ್ಟಿಕೋನವನ್ನು ಅವರು ಚೆನ್ನಾಗಿ ಅರ್ಥಮಾಡಿಕೊಂಡಿಲ್ಲದಿರುವುದೇ ಸತ್ಯ. ನಮ್ಮ 'ನಾಗರಿಕ'ಶಿಕ್ಷಾ ಕಾನೂನುಗಳಂತೆ ಪ್ರಸ್ತುತ ಶಿಸ್ತುಕ್ರಮವನ್ನು ದಿನನಿತ್ಯ ಜ್ಯಾರಿಗೊಳಿಸಬೇಕಾದೀತೆಂದು ಅವರು ಭಾವಿಸುತ್ತಾರೆ. ಅದರಂತೆ ಇಸ್ಲಾಮಿ ಸಮಾಜದಲ್ಲಿ ಭೀಕರ ಹತ್ಯಾಕಾಂಡವನ್ನು ಊಹಿಸುತ್ತಾರೆ.-ಅಲ್ಲಿ ಒಬ್ಬರಿಗೆ ಚಾಟಿಯೇಟು ಬೀಳುತ್ತಿದೆ, ಇನ್ನೊಬ್ಬರನ್ನು ಕಲ್ಲೆಸೆದು ಕೊಲ್ಲಲಾಗುತ್ತಿದೆ! ಆದರೆ ವಾಸ್ತವದಲ್ಲಿ ಬಹಳ ಮಿತವಾದ ಈ ಶಿಕ್ಷಾ ಕ್ರಮವನ್ನು ಅಪರೂಪಕ್ಕೊಮ್ಮೆ ಜ್ಯಾರಿಗೊಳಿಸಬೇಕಾಗುತ್ತದೆ. ಕೆಲವೊಮ್ಮೆ ಜ್ಯಾರಿಗೊಳಿಸುವ ಪ್ರಮೇಯವೇ ಬಂದಿರಲಾರದು. ಇಸ್ಲಾಮಿ ಆಡಳಿತದ ನಾನ್ನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಕಳ್ಳತನದ ಶಿಕ್ಷೆಯನ್ನು ಕೇವಲ ಆರು ಬಾರಿ ಪ್ರಯೋಗಿಸಲಾಗಿರುವುದನ್ನು ನಾವು ಜ್ಞಾಪಿಸಬೇಕು. ಅದು ಜನರನ್ನು ಅಪರಾಧಗಳಿಂದ ಹಿಂಜರಿಸುವ ಒಂದು ಎಚ್ಚರಿಕೆಯಾಗಿದ್ದಿತು. ಶಿಕ್ಷೆಯನ್ನು ಜ್ಯಾರಿಗೊಳಿಸುವುದಕ್ಕಿಂತ ಮುಂಚೆ ಜನರನ್ನು ಅಪರಾಧ ಕೃತ್ಯಗಳಿಗೆ ಸೆಳೆಯುವ ಸನ್ನಿವೇಶಗಳನ್ನು ತೊಡೆದುಹಾಕುವ ಇಸ್ಲಾಮಿನ ಪ್ರಯತ್ನಗಳನ್ನು ನೋಡುವಾಗ, ಅಪರೂಪಕ್ಕೊಮ್ಮೆ ಜ್ಯಾರಿಯಾಗುವ ಈ ಶಿಕ್ಷಾ ಸಂಪ್ರದಾಯವು ಸಂಪೂರ್ಣ ನ್ಯಾಯೋಚಿತವೆಂದು ನಮಗೆ ಮನವರಿಕೆಯಾಗುತ್ತದೆ.

ಇಸ್ಲಾಮಿ ಶಿಕ್ಷಾ ಸಂಪ್ರದಾಯಗಳನ್ನು ಜ್ಯಾರಿಗೊಳಿಸಿದರೆ ಪಾಶ್ಚಾತ್ಯರು ಮತ್ತು ಪೌರ್ವಾತ್ಯರು ಭೀತಿ ಪಡುತ್ತಿರುವಂತಹ ಅವಾಂತರಗಳು- ಅವರು ಅಪರಾಧಿಗಳು

ಮತ್ತು ಸದಾಕಾಲ ಅಪರಾಧ ಕೃತ್ಯಗಳಲ್ಲಿಯೇ ಸ್ಥಿರವಾಗಿರದವರಾಗಿದ್ದರೆ, ಸಂಭವಿಸಲಾರದು.

ಈ ಎಲ್ಲ ವಿವರಣೆಗಳಿಂದ ಇಸ್ಲಾಮೀ ಶಿಕ್ಷಾ ಸಂಪ್ರದಾಯವು ಕೇವಲ ಕಾಲ್ಪನಿಕ ಮತ್ತು ಕಾರ್ಯಯೋಗ್ಯವಲ್ಲವೆಂದು ಕೆಲವರಿಗೆ ಅನಿಸಬಹುದು.

ಅದು ಸರಿಯಲ್ಲ. ಸ್ಪಷ್ಟವಾದ ಯಾವ ಪ್ರೇರಣೆಯೂ ಇಲ್ಲದೇ ಅಪರಾಧಕ್ಕೆ ಮುಂದಾಗುವವರನ್ನೂ ಅಪರಾಧ ಮನೋಭಾವದ ಜನರನ್ನೂ ಭೀತಿಗೊಳಿಸಲು ಪ್ರಸ್ತುತ ಶಿಕ್ಷೆ ಅಗತ್ಯವಿದೆ. ತಮ್ಮ ಅಪರಾಧಕ್ಕೆ ಏನೇ ಪ್ರೇರಣೆಯಿದ್ದರೂ ಈ ಶಿಕ್ಷೆಯ ಭೀತಿಯಿಂದಾಗಿ ಅಪರಾಧವೆಸಗುವುದಕ್ಕಿಂತ ಮುಂಚಿತವಾಗಿಯೇ ಅವರು ಹಲವು ಬಾರಿ ಆಲೋಚಿಸುವರು. ಪ್ರಾಯಶಃ ಸಹಜ ಭಾವನೆಗಳ ದಮನದಿಂದಾಗಿ ಅವರು ಹಾಗಾಗಿರಬಹುದು. ಸರಿ, ಹಾಗಿದ್ದರೆ ಸಭ್ಯ ಪ್ರಜೆಗಳ ಸಂಪೂರ್ಣ ಸಂರಕ್ಷಣೆಯ ಹೊಣೆ ವಹಿಸಿರುವ ಸಮಾಜವು, ಅವರ ಜೀವ, ಸೊತ್ತುವಿತ್ತ ಮತ್ತು ಅಭಿಮಾನಗಳಲ್ಲಿ ಅಕ್ರಮಿಗಳ ಹಸ್ತಕ್ಷೇಪ ನಡೆಯದಂತೆ ಶಾಂತ ವಾತಾವರಣವನ್ನು ನಿರ್ಮಿಸುವುದೂ ಅದರ ಕರ್ತವ್ಯವಾಗಿದೆ. ಬಾಹ್ಯ ಪ್ರೇರಕಗಳಿಲ್ಲದೇ ಅಪರಾಧದಲ್ಲಿ ಆಸಕ್ತಿ ತೋರುವ ಇಂತಹ ವ್ಯಕ್ತಿಗಳನ್ನು ತಜ್ಞ ಚಿಕಿತ್ಸೆಗೆ ಗುರಿ ಪಡಿಸುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಅವರು ಮನೋರೋಗಿಗಳೆಂದು ಖಾತ್ರಿಯಾದರೆ ಇಸ್ಲಾಮ್ ಅವರನ್ನು ಕೈಬಿಡಲಾರದು.

# ಇಸ್ಲಾಮ್ ಮತ್ತು ನಾಗರಿಕತೆ

**ಮಾ**ನವರು ಡೇರೆಗಳಲ್ಲಿ ವಾಸವಾಗಿದ್ದ ಸಾವಿರಾರು ವರ್ಷಗಳ ಹಿಂದಿನ ಪುರಾತನ ಯುಗಕ್ಕೆ ನಾವು ಮರಳಬೇಕೆಂದು ನಿಮ್ಮ ಅಪೇಕ್ಷೆಯೇ? ಸಹಸ್ರಾರು ವರುಷಗಳ ಹಿಂದೆ ಜೀವಿಸುತ್ತಿದ್ದ ಅನಾಗರಿಕ ಕಿರಾತ ಅರಬರಿಗೆ ಇಸ್ಲಾಮ್ ಸೂಕ್ತವಾಗಿತ್ತು. ಅದರ ಸೌಮ್ಯತೆ ಮತ್ತು ಸರಳತೆಯು ಅದು ಹುಟ್ಟಿ ಬೆಳೆದ ಹಳ್ಳಿ ವಾತಾವರಣಕ್ಕೆ ಅತ್ಯಂತ ಸಮಂಜಸವಾಗಿತ್ತು. ಆದರೆ ಅದು ಇಂದಿನ ನಾಗರಿಕ ಹಾಗೂ ಯಂತ್ರಯುಗಕ್ಕೆ ಯೋಗ್ಯವೇ? ಅದೂ ಸುಪರ್ ಸೋನಿಕ್ ವಿಮಾನ, ಹೈಡ್ರೋಜನ್ ಬಾಂಬ್ ಮತ್ತು ಚಲನಚಿತ್ರಗಳ ಈ ಯುಗದಲ್ಲಿ?!

ಅದು ಆಧುನಿಕ ನಾಗರಿಕತೆಯೊಂದಿಗೆ ಹೆಜ್ಜೆ ಹಾಕಲಾರದಂತಹ ಜಡ್ಡುಗಟ್ಟಿದ ಧರ್ಮ. ಜಗತ್ತಿನ ಇತರ ಜನರೊಡನೆ ನಾಗರಿಕತೆಯನ್ನು ತಲಪಬೇಕಾದರೆ ನಾವು ಪ್ರಸ್ತುತ ಧರ್ಮವನ್ನು ಕೈಬಿಡದೆ ನಿರ್ವಾಹವಿಲ್ಲ.

ಈ ಅಜ್ಞಾನಜನ್ಯ ಆರೋಪವನ್ನು ಕೇಳುವಾಗ 'ಸುಸಂಸ್ಕೃತ' ಆಂಗ್ಲೇಯನೋರ್ವನ ಕಥೆ ನೆನಪಾಗುತ್ತದೆ. ಅವರು ಈಜಿಪ್ಟಿನ ಕೃಷಿಕರ ಸುಧಾರಣೆಗಾಗಿ ಕಳೆದೆರಡು ವರುಷಗಳಿಂದ ವಿಶ್ವಸಂಸ್ಥೆಯ ಪ್ರತಿನಿಧಿಯಾಗಿ ಈಜಿಪ್ಟ್‌ನಲ್ಲಿ ನೇಮಕಗೊಂಡಿದ್ದರು.[1] ಅಥವಾ ಪಾಶ್ಚಾತ್ಯ ಭಂಡವಾಳಶಾಹೀ ಲೋಕವು ಈಜಿಪ್ಟನ್ನು ದೇವನಿಗಾಗಿ ಪ್ರೀತಿಸುತ್ತಿದೆಯೇ ವಿನಾ ಈ ರಾಷ್ಟ್ರಗಳ ಮೇಲಿರುವ ಆರ್ಥಿಕ ಸಾಮ್ರಾಜ್ಯಶಾಹಿತ್ವದ ಮುಷ್ಠಿ ಬಿಗಿಗೊಳಿಸಲಿಕ್ಕಲ್ಲವೆಂದು ಅವರಿಗೆ ಮನವರಿಕೆ ಮಾಡಿಕೊಡುವುದೂ ಅವರ ಕೆಲಸವಾಗಿತ್ತು.!

ವಿಶ್ವಸಂಸ್ಥೆಯ ಪ್ರತಿನಿಧಿಗಳಿಗೆ ಪ್ರಜೆಗಳ ಮೇಲೆ ಬಹಳ ಪ್ರೀತಿಯಿದ್ದರೂ ಅವರ ಭಾಷೆಯನ್ನು ಮಾತ್ರ ಕಲಿತಿರಲಿಲ್ಲ. ಆದ್ದರಿಂದ ಸರಕಾರವು ಅವರ ನೆರವಿಗಾಗಿ ದ್ವಿಭಾಷಿಗಳನ್ನು ನೇಮಿಸಿತ್ತು. ನಾನು ಪ್ರಸ್ತುತ 'ಸುಸಂಸ್ಕೃತ' ಆಂಗ್ಲೇಯ ಪ್ರತಿನಿಧಿಯ ದ್ವಿಭಾಷಿಯಾಗಿದ್ದೆ.

ನಾನು ಆರಂಭದಿಂದಲೇ ಅವರೊಡನೆ ಮುಚ್ಚುಮರೆಯಿಲ್ಲದೇ ವ್ಯವಹರಿಸುತ್ತಿದ್ದೆ. ಒಮ್ಮೆ ನಾನು ಹೇಳಿದೆ: 'ನಿಮ್ಮನ್ನು ನಾವು ದ್ವೇಷಿಸುತ್ತೇವೆ. ನಿಮ್ಮ ಸೇನೆಯು ನಮ್ಮ ಪೌರ್ವಾತ್ಯ ರಾಷ್ಟ್ರಗಳಲ್ಲಿ ಯಾವುದಾದರೊಂದರಲ್ಲಿ ಉಳಿದಿರುವ ತನಕ ನಾವು ನಿಮ್ಮನ್ನು

---

1. 1955ರಲ್ಲಿ ಈ ಗ್ರಂಥವು ಪ್ರಥಮವಾಗಿ ಪ್ರಕಾಶನಗೊಂಡಿದೆ.

ದ್ವೇಷಿಸುವೆವು. ಈಜಿಪ್ಟ್, ಪೆಲೆಸ್ತೀನ್ ಹಾಗೂ ಸಾಮ್ರಾಜ್ಯತ್ವದ ಮೂಲಕ ನೀವು ತಳವೂರಿ ಕಲುಷಿತಗೊಳಿಸಿರುವ ಇತರ ರಾಷ್ಟ್ರಗಳ ಬಗೆಗಿನ ನಿಮ್ಮ ನೀತಿಯೇ ಅದಕ್ಕೆ ಕಾರಣ.'

ತುಂಬಾ ಹೊತ್ತು ಅವರು ನನ್ನನ್ನೇ ದಿಟ್ಟಿಸಿ ನೋಡಿದರು. ಅನಂತರ ಪ್ರಶ್ನಿಸಿದರು: "ನೀವು ಕಮ್ಯೂನಿಸ್ಟರೇ?"

ನಾನು ಹೇಳಿದೆ: ಅಲ್ಲ; ನಾನೋರ್ವ ಮುಸ್ಲಿಮ್. ಪಶ್ಚಿಮದ ನಿಮ್ಮ ಭಂಡವಾಳಶಾಹೀ ಸಂಸ್ಕೃತಿ ಮತ್ತು ಪೂರ್ವದ ಕಮ್ಯೂನಿಝುಮ್‌ಗಿಂತ ಇಸ್ಲಾಮ್ ಶ್ರೇಷ್ಠವೆಂದು ನಾನು ನಂಬುತ್ತೇನೆ. ಅದು ಮಾನವಕುಲವು ಕಂಡರಿತ ಪದ್ಧತಿಗಳಲ್ಲಿ ಅತ್ಯಂತ ಶ್ರೇಷ್ಠವಾಗಿದೆ. ಅದು ಜೀವನದ ಎಲ್ಲ ರಂಗಗಳನ್ನು ವ್ಯಾಪಿಸಿರುವ ಸಂತುಲಿತ ಮತ್ತು ಪವಿತ್ರ ಪದ್ಧತಿಯಾಗಿದೆ.

ನಮ್ಮಿರ್ವರೊಳಗೆ ಮೂರು ಗಂಟೆಗಳ ಬಿಸಿ ಬಿಸಿ ಚರ್ಚೆ ನಡೆಯಿತು. ಕೊನೆಗೆ ಅವರು ನನ್ನನ್ನು ನೋಡಿ ಹೀಗೆಂದರು: "ಇಸ್ಲಾಮಿನ ಕುರಿತು ನೀವು ಹೇಳಿರುವ ವಿಷಯವು ಪ್ರಾಯಶ: ನಿಜವಾಗಿರಬಹುದು. ಆದರೆ ಆಧುನಿಕ ನಾಗರಿಕತೆಯ ಸತ್ಫಲಗಳನ್ನು ಸವಿಯುವುದರಿಂದ ತಡೆಯುವುದನ್ನು ನಾನು ಮೆಚ್ಚುವುದಿಲ್ಲ. ನಾನು ವಿಮಾನಯಾನ, ರೇಡಿಯೋ ಶ್ರವಣ ಮತ್ತು ಸಂಗೀತ ರಸವನ್ನು ಆಗ್ರಹಿಸುತ್ತೇನೆ!"

ಆಶ್ಚರ್ಯಚಕಿತನಾಗಿ ನಾನು ಪ್ರಶ್ನಿಸಿದೆ: "ಆ ಸೌಲಭ್ಯಗಳಿಂದೆಲ್ಲ ನಿಮ್ಮನ್ನು ಯಾರು ತಡೆಯುತ್ತಾರೆ?"

"ನಾನು ಡೇರೆಗಳಿಗೆ ಮರಳಬೇಕೆಂದು ಇಸ್ಲಾಮ್ ಬಯಸುತ್ತದಲ್ಲವೇ?"- ಅವರು ಉತ್ತರಿಸಿದರು.

******

ಇದು ಈ ಧರ್ಮದ ಇತಿಹಾಸವನ್ನು ತಿಳಿದಿರುವ ಯಾವೊಬ್ಬನೂ ಹೇಳಲಾರದ ಮೂರ್ಖತನದ ಆರೋಪವಾಗಿದೆ. ಹಾಗಲ್ಲದಿದ್ದರೆ ಇಸ್ಲಾಮ್ ನಾಗರಿಕತೆಯ ಹಾದಿಗೆ ಯಾವಾಗ, ಎಲ್ಲಿ ತಡೆಯೊಡ್ಡಿದೆ? ಅನಾಗರಿಕ ಜನಾಂಗವೊಂದರಲ್ಲಿ ಇಸ್ಲಾಮ್ ಅವತೀರ್ಣಗೊಂಡಿತು. ಆ ಜನಾಂಗದ ಅನಾಗರಿಕ ಸ್ವಭಾವ ಮತ್ತು ಕಠಿಣ ಹೃದಯದ ಬಗ್ಗೆ ಕುರ್‌ಆನ್ ಹೀಗೆ ಹೇಳಿದೆ: "ಹಳ್ಳಿಗಾಡಿನ ಅರಬರು ಸತ್ಯನಿಷೇಧ ಮತ್ತು ಕಪಟತೆಯಲ್ಲಿ ಸ್ಥಿರಗೊಂಡಿದ್ದರು. ಅಲ್ಲಾಹನು ಆತನ ಪ್ರವಾದಿಗೆ ಅವತೀರ್ಣಗೊಳಿಸಿದ ನೀತಿ-ನಿಯಮಗಳನ್ನು ತಿಳಿಯದಿರಲು ಅವರು ಹೆಚ್ಚು ಯೋಗ್ಯರಾಗಿದ್ದರು." ಕಠೋರ

ಹೃದಯದ ಆ ಕಿರಾತ ಜನಾಂಗವನ್ನು ಮಾನವರಾಗಿ ಪರಿವರ್ತಿಸಿರುವುದೇ ಕುರ್‌ಆನ್‌ನ ಅತೀದೊಡ್ಡ ಪವಾಡವಾಗಿದೆ. ಅವರು ದಿವ್ಯ ಸನ್ಮಾರ್ಗವನ್ನು ಪ್ರಾಪ್ತಗೊಳಿಸಿ, ಪಾಶವೀ ಮಟ್ಟದಿಂದ ಮಾನವೀಯತೆಯ ಉನ್ನತ ಮಟ್ಟಕ್ಕೇರಿದರಲ್ಲದೆ ಮಾನವಕುಲದ ಮಾರ್ಗ ದರ್ಶಿಗಳೂ ಆದರು. ಜನಮನದ ಸುಧಾರಣೆ ಮತ್ತು ಜನರನ್ನು ನಾಗರಿಕರನ್ನಾಗಿಸುವುದರಲ್ಲಿ ಈ ಧರ್ಮದ ಅದ್ಭುತ ಸಾಮರ್ಥ್ಯಕ್ಕೆ ಅದೊಂದೇ ಉದಾಹರಣೆ ಧಾರಾಳ ಸಾಕು.

ಆದರೆ, ಇಸ್ಲಾಮ್ ಕೇವಲ ಉದಾತ್ತ ಮಾನಸಿಕ ಸುಧಾರಣಾ ಚಟುವಟಿಕೆಗಳಿಂದಲೇ ಸಂತೃಪ್ತವಾಗುವುದಿಲ್ಲ. ಆ ಕೆಲಸಕ್ಕೂ ಕಠಿಣ ಶ್ರಮದ ಅಗತ್ಯವಿದೆ. ಅದು ಎಲ್ಲ ನಾಗರಿಕತೆ ಮತ್ತು ಸಂಸ್ಕೃತಿಗಳ ಧ್ಯೇಯವೂ ಆಗಿದೆ. ಭಾವನೆ ಮತ್ತು ವಿಚಾರಗಳ ಗಹನವಾದ ಈ ಸುಧಾರಣೆಯಿಂದಲೇ ಇಸ್ಲಾಮ್ ಸಾಕು ಮಾಡುವುದಿಲ್ಲ. ಬದಲಾಗಿ ಜೀವನದ ಹಾಸುಹೊಕ್ಕಾಗಿ ಜನರು ಅಂಗೀಕರಿಸುವ ನಾಗರಿಕತೆಯ ಎಲ್ಲ ಅಂಶಗಳನ್ನು ಇಸ್ಲಾಮ್ ಅದರೊಂದಿಗೆ ಪರಿಗಣಿಸುತ್ತದೆ. ಅದು ರೋಮ್, ಪರ್ಶಿಯ ಮುಂತಾದ, ತಾನು ಜಯಿಸಿದ ರಾಷ್ಟ್ರಗಳಲ್ಲಿ ಸಂಪರ್ಕಿಸಿ ಎಲ್ಲ ನಾಗರಿಕ ಸಂಸ್ಕೃತಿಗಳನ್ನೂ ಅಂಗೈ ಮೇಲಿಟ್ಟು ತಿಕ್ಕಿ ನೋಡಿತು. ಅವುಗಳಲ್ಲಿ ಮಾನವ ಹಿತಕ್ಕೆ ಅಡ್ಡಿಯಾಗದ ಹಾಗೂ ಏಕದೇವ ವಿಶ್ವಾಸಕ್ಕೆ ವಿರುದ್ಧವಾಗದ ಎಲ್ಲ ನಾಗರಿಕ ಸಂಸ್ಕೃತಿಗಳನ್ನು ಮೈಗೂಡಿಸಿ ಸ್ವಂತ ಬಣ್ಣ ನೀಡಿತು. ಗ್ರೀಕರ ಬಳಿಯಿದ್ದ ವೈದ್ಯಶಾಸ್ತ್ರ, ಖಗೋಳಶಾಸ್ತ್ರ, ದೇಹಶಾಸ್ತ್ರ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ತತ್ವಶಾಸ್ತ್ರ ಮುಂತಾದ ಸಕಲ ವೈಜ್ಞಾನಿಕ ಆಂದೋಲನಗಳನ್ನೂ ದತ್ತು ತೆಗೆದುಕೊಂಡಿತು. ಹೀಗೆ ವೈಜ್ಞಾನಿಕ ಸಂಶೋಧನೆ ಮತ್ತು ವೈಜ್ಞಾನಿಕ ಪ್ರಗತಿಯಲ್ಲಿ ವಿಶೇಷ ಆಸಕ್ತಿ ಮತ್ತು ಪ್ರಬುದ್ಧ ಅಧ್ಯಯನದ ಹೊಸ ಅಧ್ಯಾಯಗಳನ್ನು ಬರೆದು ಸೇರಿಸಿತು. ತತ್ಪರಿಣಾಮವಾಗಿ ಸ್ಪೈನ್‌ನಲ್ಲಿ ವಿಜ್ಞಾನಗಳ ಬೃಂದಾವನವೇ ಬೆಳೆಯಿತು. ವೈಜ್ಞಾನಿಕ ಸಂಶೋಧನೆ ಮತ್ತು ವೈಜ್ಞಾನಿಕ ಪ್ರಗತಿಯಲ್ಲಿ ಆಧುನಿಕ ಯೂರೋಪು ಸಾಧಿಸಿದ ಯಶಸ್ಸುಗಳಿಗೆ ಪ್ರೇರಕವಾದ ನವೋದಯವು ಸ್ಪೈನ್‌ನ ಕೊಡುಗೆಯಾಗಿದ್ದಿತು! ಹೀಗಿರುತ್ತಾ, ಮಾನವಕುಲಕ್ಕೆ ಉಪಕಾರಿಯಾದ ಸಂಸ್ಕೃತಿಯ ಮುಂದೆ ಇಸ್ಲಾಮ್ ಯಾವಾಗ ಮತ್ತು ಎಲ್ಲಿ ತಡೆ ನಿರ್ಮಿಸಿದೆ?

******

ಆಧುನಿಕ ಪಾಶ್ಚಾತ್ಯ ನಾಗರಿಕತೆಗಳ ಬಗೆಗಿನ ಇಸ್ಲಾಮಿನ ನಿಲುಮೆಯು ಗತಕಾಲೀನ ನಾಗರಿಕತೆಗಳ ಬಗೆಗಿದ್ದಂತೆಯೇ ಇದೆ. ಅದು ಕಲ್ಯಾಣಕಾರಿಯಾಗಿರುವುದೆಲ್ಲವನ್ನು ಸ್ವೀಕರಿಸುವುದು, ಹಾನಿಕರವಾದುದೆಲ್ಲವನ್ನು ತಿರಸ್ಕರಿಸುವುದು. ಭೌತಿಕ ಅಥವಾ ಲೌಕಿಕ

ಅಗಲಿಕೆಯನ್ನು ಅದು ಪ್ರೋತ್ಸಾಹಿಸುವುದಿಲ್ಲ. ಪ್ರೋತ್ಸಾಹಿಸಲಾರದು. ಅದಕ್ಕೆ ಅನ್ಯ ಸಂಸ್ಕೃತಿಗಳೊಡನೆ ವೈಯಕ್ತಿಕ ಅಥವಾ ಕೋಮು ದ್ವೇಷವಿಲ್ಲ. ಅದು ಮಾನವಕುಲದ ಏಕತೆ ಮತ್ತು ವಿಶ್ವ ಭ್ರಾತೃತ್ವವನ್ನು ಬಯಸುತ್ತದೆ.

ಆದ್ದರಿಂದ, 'ಆಧುನಿಕ'ರೆಂದು ಹೇಳಿಕೊಳ್ಳುವ ಕೆಲವು ಅಲ್ಪಜ್ಞಾನಿಗಳು ಆರೋಪಿಸುವಂತೆ, ಆಧುನಿಕ ನಾಗರಿಕತೆಯ ಸತ್ಫಲಗಳನ್ನು ಸವಿಯುವುದಕ್ಕೆ ಇಸ್ಲಾಮ್ ಅಡ್ಡಗೋಡೆಯಾಗಿದೆಯೆಂಬ ಭೀತಿ ತೀರಾ ಬಾಲಿಶ. ತಮ್ಮ ಮನೆ, ಫ್ಯಾಕ್ಟರಿ ಮತ್ತು ಬಯಲು ಹಾಗೂ ಜೀವನದ ಇತರೆಲ್ಲ ರಂಗಗಳಲ್ಲಿ ಬಳಸುವ ಯಂತ್ರ ಸಾಮಾಗ್ರಿಗಳ ಮೇಲೆ ಬಿಸ್ಮಿಲ್ಲಾಹಿ....... ಬರೆಯಬೇಕೆಂದು ಯಾವ ಮುಸಲ್ಮಾನನೂ ಹಠ ಹಿಡಿಯಲಾರನು. ಅವುಗಳ ಬಳಕೆಯು ದೇವನಾಮ ಮತ್ತು ಆತನ ಮಾರ್ಗದಲ್ಲಾಗಿರಬೇಕೆಂದೇ ಅವರ ಬಯಕೆಯಾಗಿರುವುದು. ಯಾವುದೇ ಯಂತ್ರಕ್ಕೆ ಸ್ವಯಂ ಒಂದು ವಿಶಿಷ್ಟ ದೇಶ, ವರ್ಗ ಅಥವಾ ಮತ ಎಂಬುದಿಲ್ಲ. ಆದರೆ ಅವುಗಳನ್ನು ಬಳಸುವ ಧ್ಯೇಯವು ಅವೆಲ್ಲಕ್ಕೂ ಅನ್ವಯವಾಗುತ್ತದೆ. ಒಂದು ಬಂದೂಕು ಸ್ವಯಂ ವಿಶಿಷ್ಟ ಜಾತಿ ಅಥವಾ ಧರ್ಮವಿಲ್ಲದ ಒಂದು ಉಪಕರಣವಾಗಿದೆ. ಆದರೆ ಓರ್ವನು ಅದನ್ನು ಅಕ್ರಮಕ್ಕಾಗಿ ಬಳಸಿದರೆ ಅವನು ಮುಸ್ಲಿಮನಾಗಿರಲಾರನು. ಇಸ್ಲಾಮಿನಲ್ಲಿ ಅದರ ಬಳಕೆಯ ನಿರ್ಬಂಧವು ವೈರಿಯಿಂದ ರಕ್ಷಣೆ ಅಥವಾ ಭೂಮಿಯಲ್ಲಿ ದೇವವಾಣಿಯನ್ನು ಉನ್ನತಗೊಳಿಸುವುದಾಗಿದೆ. ಸಿನೆಮಾ ಸ್ವಯಂ ಮಾನವಕುಲದ ಒಂದು ಸಾಧನೆಯಾಗಿದೆ. ಒಳಿತಿನ ಹಾದಿಯಲ್ಲಿ ಮಾನವರ ಹೋರಾಟವನ್ನೂ ಉನ್ನತ ಮಾನವೀಯತೆಯನ್ನೂ ಪವಿತ್ರ ಭಾವನೆಗಳನ್ನೂ ಪ್ರದರ್ಶಿಸಲಿಕ್ಕಾಗಿ ಓರ್ವ ಮುಸ್ಲಿಮನು ಅದನ್ನು ಬಳಸಿಕೊಳ್ಳಬಹುದು. ಬದಲಾಗಿ ಮಾನವಕುಲವನ್ನು ಆಮೂಲಾಗ್ರವಾಗಿ ಪೀಡಿಸಿರುವ ಆಧ್ಯಾತ್ಮಿಕ, ವೈಚಾರಿಕ ಮತ್ತು ನೈತಿಕ ಪಿಡುಗುಗಳು ಹಾಗೂ ನಗ್ನದೇಹ ಪ್ರದರ್ಶನಕ್ಕಾಗಿ ಯಾರಾದರೂ ಅದನ್ನು ಬಳಸಿದರೆ ಅವನು ಮುಸ್ಲಿಮನಾಗಲಾರನು. ನಗ್ನ ಚಿತ್ರಗಳ ದೋಷವು ಕೇವಲ ದುಷ್ಟ ಭಾವನೆಗಳ ಪ್ರಚೋದನೆಗೆ ಸೀಮಿತವಲ್ಲ. ಅವು ಜೀವನದ ಮೌಲ್ಯವನ್ನು ಕೆಡಿಸುವುದರೊಂದಿಗೆ, ಅದನ್ನು ಮಾನವಕುಲದ ಉತ್ಕೃಷ್ಟ ನಿರ್ಮಾಣಕ್ಕೆ ಯೋಗ್ಯವಲ್ಲದ ನಿಕೃಷ್ಟ ಹಾಗೂ ಪೊಳ್ಳು ಧ್ಯೇಯಗಳಿಗೆ ಸೀಮಿತಗೊಳಿಸುತ್ತದೆ.

ಹೀಗೆ ಮಾನವಕುಲಕ್ಕೆ ಪ್ರಯೋಜನಕಾರಿಯಾದ ವೈಜ್ಞಾನಿಕ ಸಾಧನೆಗಳನ್ನು ಅಂಗೀಕರಿಸುವುದಕ್ಕೆ ಇಸ್ಲಾಮೀ ಆಂದೋಲನವು ಅಡ್ಡಿಯಾಗುವುದಿಲ್ಲ. ಅದು ಲೋಕದ ಯಾವ ಮೂಲೆಯದಾಗಿದ್ದರೂ ಸರಿ. ಮಾತ್ರವಲ್ಲ ಮುಸ್ಲಿಮರು ಫಲಕಾರಿಯಾದ

ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಲು ಕರ್ತವ್ಯಬದ್ಧರಾಗಿದ್ದಾರೆ. ಪ್ರವಾದಿ(ಸ) ಹೇಳಿದರು:"ವಿದ್ಯಾಭ್ಯಾಸ ಕಡ್ಡಾಯವಾಗಿದೆ." ವಿದ್ಯೆ ಎಂಬ ಸಾಮಾನ್ಯ ಪದದಲ್ಲಿ ಸಕಲ ಜ್ಞಾನಗಳೂ ಅಡಕವಾಗಿವೆ. ಪ್ರವಾದಿವರ್ಯರ ಈ ಕರೆಯಲ್ಲಿ ಜ್ಞಾನದ ಎಲ್ಲ ಮೂಲಗಳೂ ಒಳಗೊಂಡಿವೆ.

ಯಾವುದೇ ನಾಗರಿಕತೆಯು ಮಾನವಕುಲಕ್ಕೆ ಪ್ರಯೋಜನಕಾರಿಯಾಗಿರುವ ತನಕ ಇಸ್ಲಾಮ್ ಅದಕ್ಕೆ ಅಡ್ಡಿ ಮಾಡುವುದಿಲ್ಲ. ಆದರೆ ಸಂಸ್ಕೃತಿಯೆಂದರೆ, ಮದ್ಯಪಾನ, ಜೂಜಾಟ, ಅನೈತಿಕತೆ, ಸಾಮ್ರಾಜ್ಯಶಾಹಿತ್ವ ಮತ್ತು ಜನರನ್ನು ಗುಲಾಮರಾಗಿಸುವುದೆಂದಾದರೆ ಆ ನಾಗರಿಕತೆಗೆ ಇಸ್ಲಾಮ್ ತಡೆಯೊಡ್ಡುವುದು. ಆ ಮಹಾ ವಿಪತ್ತುಗಳಿಂದ ಮಾನವಕುಲವನ್ನು ರಕ್ಷಿಸುವುದೇ ಆ ತಡೆಯ ಉದ್ದೇಶ.

# ಇಸ್ಲಾಮ್ ಮತ್ತು ಪ್ರತಿಗಾಮಿತ್ವ

ನಮ್ಮ ವಿಚಾರ ಚಿಂತನೆಗಳನ್ನು ಜಡಗೊಳಿಸ ಬಯಸುತ್ತೀರಾ? ಈ ಕಾಲದಲ್ಲಿ ಅಪ್ರಸಕ್ತ ಮತ್ತು ಆಧುನಿಕ ಜೀವನಕ್ಕೆ ಅಯೋಗ್ಯವಾದ ಪದ್ಧತಿಗಳಿಗೆ ನಮ್ಮನ್ನು ಅಂಟಿಸಲು ಪ್ರಯತ್ನಿಸುವಿರಾ? ಒಂದಾನೊಂದು ಕಾಲದಲ್ಲಿ ಒಂದು ವಿಶಿಷ್ಟ ಜನಾಂಗಕ್ಕಾಗಿ ರಚಿತವಾದ ಕಾಲಹರಣಗೊಂಡ ಮೌಲ್ಯಗಳು ಮತ್ತು ಪ್ರಗತಿ ಹಾಗೂ ಬೆಳವಣಿಗೆಗೆ ಅಡ್ಡಗೋಡೆಯಾಗಿರುವ ಪ್ರತಿಗಾಮಿ ಆಂದೋಲನದ ವಕ್ತಾರರನ್ನಾಗಿ ನಮ್ಮನ್ನು ಬದಲಾಯಿಸ ಬಯಸುತ್ತೀರಾ?

ಇಂದಿಗೂ ನೀವು ಬಡ್ಡಿ ನಿಷಿದ್ಧವೆಂದು ದೃಢವಾಗಿ ನಂಬುತ್ತೀರಲ್ಲವೇ? ಅದು ಆಧುನಿಕ ಲೋಕದಲ್ಲಿ ತೀರಾ ಅತ್ಯಗತ್ಯವಾಗಿದೆ. ಝಕಾತ್ ಸಂಗ್ರಹಿಸಿ ಸ್ಥಾನೀಯವಾಗಿ ವಿತರಣೆ ಮಾಡಬೇಕೆಂದು ನೀವು ವಾದಿಸುತ್ತೀರಲ್ಲವೇ? ಅದು ಆಧುನಿಕ ರಾಷ್ಟ್ರಗಳ ಆಡಳಿತ ಕ್ರಮಕ್ಕೆ ಎಂದೆಂದಿಗೂ ಸರಿಹೊಂದದ ಪ್ರಾಚೀನ ಸಂಪ್ರದಾಯವಾಗಿದೆ. ಮಾತ್ರವಲ್ಲ ಇಂತಿಂತಹ ವ್ಯಕ್ತಿಗಳು ಅದನ್ನು ನಮಗೆ ನೀಡಿರುವರೆಂಬ ಪ್ರಜ್ಞೆಯನ್ನು ಬಡವರ ಮನದಲ್ಲಿ ಸದಾ ಉಳಿಸಿ, ಅವರನ್ನು ಹೀನಗೊಳಿಸುವ ವ್ಯವಸ್ಥೆಯಾಗಿದೆ.

ಮದ್ಯಪಾನ, ಜೂಜಾಟ, ಸ್ತ್ರೀ-ಪುರುಷರ ಸ್ವಚ್ಛಂದ ಮಿಲನ, ಸಾಮೂಹಿಕ ನೃತ್ಯ, ಅನೈತಿಕ ಸಂಬಂಧ ಇತ್ಯಾದಿಗಳನ್ನು ಕೈಬಿಡಬೇಕೆಂದು ನೀವು ಹಠ ಹಿಡಿಯುತ್ತೀರಲ್ಲವೇ? ಅವೆಲ್ಲವೂ ಆಧುನಿಕ ಕಾಲದ ಅನಿವಾರ್ಯ ಸಾಮಾಜಿಕ ಬೇಡಿಕೆಗಳಾಗಿವೆ. ಅವುಗಳ ಉಪೇಕ್ಷೆ ಅಥವಾ ನಿಯಂತ್ರಣ ಅಸಾಧ್ಯ. ಯಾಕೆಂದರೆ, ಅವೆಲ್ಲವೂ ಸ್ವಾಭಾವಿಕವಾಗಿ ನಡೆಯಬೇಕಾದ ವಿಕಾಸ ಪ್ರಕ್ರಿಯೆಗಳಾಗಿವೆ.

******

ಅವರ ಈ ಹೇಳಿಕೆಯು ಒಂದು ದೃಷ್ಟಿಯಿಂದ ಸರಿಯಾಗಿದೆ. ಆದರೆ ಇನ್ನೊಂದು ದೃಷ್ಟಿಯಿಂದ ಸಂಪೂರ್ಣ ಅಸಂಬದ್ಧವಾಗಿದೆ.

ನಿಜ, ಇಸ್ಲಾಮ್ ಬಡ್ಡಿಯನ್ನು ನಿಷೇಧಿಸುತ್ತದೆ. ಆದರೆ ಬಡ್ಡಿಯು ಸಾಮಾಜಿಕ ಅನಿವಾರ್ಯತೆಯೆಂಬ ವಾದವು ಸರಿಯಲ್ಲ. ಇಂದು ಜಗತ್ತಿನಲ್ಲಿ ಬಡ್ಡಿ ಆಧಾರಿತವಾಗಿರದ ಎರಡು ಆರ್ಥಿಕ ಪದ್ಧತಿಗಳಿವೆ; ಕಮ್ಯೂನಿಝುಮ್ ಮತ್ತು ಇಸ್ಲಾಮ್. ಅವೆರಡರ ಮಧ್ಯೆ ಬುನಾದಿ ಮತ್ತು ತತ್ವಗಳಲ್ಲಿ ಅಜಗಜಾಂತರವಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಕಮ್ಯೂನಿಝುಮ್‌ಗೆ ಅದರ ಸಿದ್ಧಾಂತ ಮತ್ತು ಆರ್ಥಿಕ ವ್ಯವಸ್ಥೆಯನ್ನು ಜ್ಯಾರಿಗೊಳಿಸುವುದಕ್ಕೆ

ಅಗತ್ಯವಿರುವ ಅಧಿಕಾರವಿದೆ. ಇಸ್ಲಾಮ್ ಅದನ್ನು ಇನ್ನೂ ಸಾಧಿಸಿಲ್ಲ. ಅದು ಸಾಮರ್ಥ್ಯ ಗಳಿಕೆಯ ಹಾದಿಯಲ್ಲಿದೆ. ಅದು ಸಹಜ ರೀತಿಯಲ್ಲಿ ಅತ್ತಕಡೆ ಸಾಗುತ್ತಿದೆ. ವಿವಿಧ ಮುಸ್ಲಿಮ್ ರಾಷ್ಟ್ರಗಳಲ್ಲಿ ನಡೆಯುತ್ತಿರುವ ಸಂಘರ್ಷಗಳು ಅದನ್ನೇ ಸೂಚಿಸುತ್ತಿವೆ. ಅವು ಒಂದು ಹೊಸ ಇಸ್ಲಾಮೀ ಜಾಗೃತಿಯ ಸಂದೇಶವನ್ನು ಪರೋಕ್ಷವಾಗಿ ಸಾರಿ ಹೇಳುತ್ತಿವೆ.

ಇಸ್ಲಾಮೀ ಆಡಳಿತವು ಸ್ಥಾಪನೆಗೊಂಡಾಗ ಅದರ ಬಡ್ಡಿ ರಹಿತ ಆರ್ಥಿಕ ವ್ಯವಸ್ಥೆ ಜ್ಯಾರಿಯಾಗುವುದು. ಆಗ ಯಾವ ಆರ್ಥಿಕ ಅನಿವಾರ್ಯತೆಯೂ ಅದಕ್ಕೆ ಅಡ್ಡಿಯಾಗುವುದಿಲ್ಲ. ಆದ್ದರಿಂದ ಬಡ್ಡಿಯ ಆಧುನಿಕ ಲೋಕವು ಎಂದೆಂದೂ ವಿಮೋಚನೆ ಪಡೆಯಲಾಗದಂತಹ ಅನಿವಾರ್ಯತೆಯಲ್ಲ. ಅದು ಕೇವಲ ಭಂಡವಾಳಶಾಹೀ ಜಗತ್ತಿನ ಅನಿವಾರ್ಯತೆಯಾಗಿದೆ. ಯಾಕೆಂದರೆ, ಬಡ್ಡಿಯಿಲ್ಲದೇ ಭಂಡವಾಳಶಾಹೀ ಆರ್ಥಿಕ ಪದ್ಧತಿ ಉಳಿಯಲಾರದು. ಆದರೂ, ಭಂಡವಾಳಶಾಹೀ ರಾಷ್ಟ್ರಗಳ ಡಾ|ಸ್ಕೇಚ್[1] (Schacht Hjalmer) ರಂತಹ ಪ್ರಖ್ಯಾತ ಅರ್ಥಶಾಸ್ತ್ರಜ್ಞರು ಬಡ್ಡಿಯ ವಿರುದ್ಧ ಎಚ್ಚರಿಕೆ ನೀಡಿದ್ದಾರೆ. ತಲೆಮಾರುಗಳು ಸಂದಂತೆ ಸಂಪತ್ತು ಸಮಾಜದ ಕೆಲವಾರು ಮಂದಿಯಲ್ಲಿ ಕೇಂದ್ರೀಕೃತವಾಗಿ, ಕ್ರಮಾನುಗತವಾಗಿ ಅದು ಸಮಾಜದ ಬಹುವಂಶ ಜನರಿಗೆ ದೊರೆಯದೆ, ಜನಸಾಮಾನ್ಯರು, ಕೆಲವೇ ಮಂದಿ ಶ್ರೀಮಂತರ ಆಶ್ರಿತರು ಮತ್ತು ಗುಲಾಮರಾಗುವರೆಂದು ಅವರು ಎಚ್ಚರಿಸಿದ್ದಾರೆ. ಇದರ ವಾಸ್ತವಿಕತೆಯನ್ನು ಆಧುನಿಕ ಭಂಡವಾಳಶಾಹೀ ಜಗತ್ತಿನಲ್ಲಿ ನಾವು ಕಣ್ಣಾರೆ ಕಾಣಬಹುದು. ಅದಕ್ಕೆ ಅರ್ಥಶಾಸ್ತ್ರದ ವಿಶೇಷ ಪರಿಜ್ಞಾನ ಅಗತ್ಯವಿಲ್ಲ. ಭಂಡವಾಳಶಾಹೀ ಪದ್ಧತಿಯ ಎರಡು ಆಧಾರಸ್ಥಂಭಗಳಾಗಿರುವ ಬಡ್ಡಿ ಮತ್ತು ಅಕ್ರಮ ದಾಸ್ತಾನನ್ನು ನಿಷೇಧಿಸಿರುವುದೇ ಇಸ್ಲಾಮಿನ ದಿವ್ಯತೆಗೆ ಸಾಕ್ಷಿಯಾಗಿದೆ. ಭಂಡವಾಳ ಶಾಹಿತ್ವವು ಹುಟ್ಟುವ ಸಹಸ್ರಾರು ವರ್ಷಗಳ ಹಿಂದೆಯೇ ಇಸ್ಲಾಮ್ ಆ ನೀತಿಯನ್ನು ಕೈಗೊಂಡಿದೆ. ಯಾಕೆಂದರೆ ಈ ಧರ್ಮವನ್ನು ಅವತೀರ್ಣಗೊಳಿಸಿರುವ ಅಲ್ಲಾಹನು ಎಲ್ಲ ಮಾನವ ಜನಾಂಗಗಳನ್ನೂ ಏಕ ಕಾಲದಲ್ಲಿ ವೀಕ್ಷಿಸುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಆರ್ಥಿಕ ಜಗತ್ತಿನಲ್ಲಿ ಬಡ್ಡಿಯ ಮಹಾ ದುರಂತಗಳನ್ನು, ಸರ್ವಜ್ಞ ಮತ್ತು ಸೂಕ್ಷ್ಮಜ್ಞನಾದ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿದ್ದಾನೆ. ಮಾನವಕುಲದಲ್ಲಿ ಅದು ಭುಗಿಲೆಬ್ಬಿಸುವ ದ್ವೇಷ, ಮತ್ಸರಗಳು ಬೇರೆಯೇ ಇವೆ.

ಬಡ್ಡಿಯನ್ನು ಕಟುವಾಗಿ ನಿಷೇಧಿಸಿದೆಯೆಂಬ ಕಾರಣಕ್ಕಾಗಿ ಓರ್ವ ಲೇಖಕರು ವಾರಪತ್ರಿಕೆಯೊಂದರಲ್ಲಿ ಇಸ್ಲಾಮಿಗೆ ನಿರಂತರ ಎಚ್ಚರಿಕೆ ನೀಡುತ್ತಿದ್ದಾರೆ. ಅದೇ ವೇಳೆ ಬಡ್ಡಿರಹಿತ ಬುನಾದಿಗಳಲ್ಲಿರುವ ಸಮಾಜವಾದೀ ಸಿದ್ಧಾಂತಗಳನ್ನು ಅವರು ನಂಬುತ್ತಾರೆ. ಆದರೆ, ಭಂಡವಾಳಶಾಹಿತ್ವವೂ ಬಡ್ಡಿಯ ದುಷ್ಪರಿಣಾಮಗಳನ್ನು ಮನಗಂಡು ಅದರಿಂದ

---

1. ಪ್ರಸಿದ್ಧ ಜರ್ಮನ್ ಬ್ಯಾಂಕಿಂಗ್ ತಜ್ಞ

ಮುಕ್ತವಾಗಲಿಕ್ಕಾಗಿ ಸಮಾಜವಾದದವೆಡೆಗೆ ಸಾಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಹಾಗಿದ್ದರೆ, ಇದು ಓರ್ವರು ಪ್ರಜ್ಞಾಪೂರ್ವಕವಾಗಿ ಅರಿತು ಅಂಗೀಕರಿಸುವ ಸಿದ್ಧಾಂತದ ಸಮಸ್ಯೆಯಲ್ಲ. ಕೇವಲ ಇಸ್ಲಾಮನ್ನು ಖಂಡಿಸುವ ಆಗ್ರಹವಾಗಿದೆ.

ಚಿಕ್ಕಂದಿನಲ್ಲಿ ಧಾರ್ಮಿಕ ಸಂಘಟನೆಯೊಂದಿಗೆ ಸಂಬಂಧವಿದ್ದ ಓರ್ವ 'ಮುಸ್ಲಿಮ್' ಸಚಿವನ ಕಥೆಯೂ ಹೀಗೆಯೇ ವಿಸ್ಮಯಕಾರಿಯಾಗಿದೆ. ಭಂಡವಾಳಶಾಹೀ ಶಕ್ತಿಗಳ ಸಂತೃಪ್ತಿಗಾಗಿ ಅವರು ಸ್ವತಃ "ಇಸ್ಲಾಮ್ ಒಂದು ಜಡ್ಡುಗಟ್ಟಿದ ಧರ್ಮವಲ್ಲ; ಅದರ ಬಡ್ಡಿ ವ್ಯವಸ್ಥೆಯ ಮರು ಪರಿಶೀಲನೆ ನಡೆಸುವ ಕಾಲವೀಗ ಪಕ್ವವಾಗಿದೆ; ಹಾಗಾದರೆ ಮಾತ್ರ ಅದಕ್ಕೆ ಆಧುನಿಕ ಕಾಲಕ್ಕೆ ತಕ್ಕಂತೆ 'ಬೆಳೆಯಲು' ಸಾಧ್ಯವಿದೆ!" ಹೀಗೆ ಭಂಡವಾಳಶಾಹೀ ಶಕ್ತಿಗಳ ಸಂತೃಪ್ತಿಗಾಗಿ ಅಲ್ಲಾಹನ ಕ್ರೋಧವನ್ನು ಖರೀದಿಸುತ್ತಿದ್ದಾರೆ. ಅದಕ್ಕಾಗಿ ಆರ್ಥಿಕ ವಿಕಾಸವನ್ನು ಸಾದರ ಸ್ವಾಗತಿಸುತ್ತಿದ್ದಾರೆ. ಆ ವ್ಯಕ್ತಿಯು ಪ್ರಾಮಾಣಿಕವಾಗಿ ಆ ಮಾತುಗಳನ್ನು ಹೇಳಿದ್ದರೆ ಆ ವಿಷಯದ ಬಗ್ಗೆ ಅವರು ಮಹಾ ತಿಳಿಗೇಡಿಯಾಗಿದ್ದಾರೆ! ಹಾಗೆಯೇ ಬಡ್ಡಿಯನ್ನು ಸಂಪೂರ್ಣ ನಿಷೇಧಿಸಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿ, ಆ ಬಗ್ಗೆ ಸತ್ಯವನ್ನು ಬಹಿರಂಗವಾಗಿ ಹೇಳುತ್ತಿದ್ದ ಅಝ್ಹರ್‌ನ ಓರ್ವ ಶೇಖ್‌ರು, ಅವರಿಗೆ ಆ ಹುದ್ದೆ ದೊರೆತ ಬಳಿಕ ಮಾತುಗಳ ಅರ್ಥ ಬದಲಿಸಿ ಬಡ್ಡಿಯ ಪರವಾಗಿ ಹೇಳಲಾರಂಭಿಸಿದ್ದಾರೆ.

ನಮ್ಮ ಮಟ್ಟಿಗೆ ಬಡ್ಡಿಯು ಒಂದು ಹೀನ ಅನಿವಾರ್ಯ ಸ್ಥಿತಿಯಾಗಿದೆ. ಯಾಕೆಂದರೆ ನಮ್ಮ ಆರ್ಥಿಕ ಪದ್ಧತಿಯು ಈಗ ವಿದೇಶಿ ನೆರವನ್ನು ಅವಲಂಬಿಸಿಕೊಂಡಿದೆ. ಆ ಅನಿವಾರ್ಯ ಸ್ಥಿತಿ ಯಿರುವ ತನಕ ಅದನ್ನು ಅವಲಂಬಿಸುವುದು ಅಥವಾ ಅದನ್ನು ಮನಃ ಪೂರ್ವಕವಾಗಿ ಅಂಗೀಕರಿಸಿ ಪ್ರಗತಿ ಸಾಧಿಸುವುದು, ಇವೆರಡೂ ಭಿನ್ನ ವಿಷಯಗಳಾಗಿವೆ. ಮುಸ್ಲಿಮ್‌ಲೋಕದಾದ್ಯಂತ ನಮ್ಮ ಆರ್ಥಿಕ ಪದ್ಧತಿಗೆ ಸ್ವಾತಂತ್ರ್ಯ ದೊರಕಿ ನಮ್ಮ ಸ್ವಂತ ಕಾಲುಗಳಲ್ಲಿ ನಿಲ್ಲಲು ಶಕ್ತರಾಗಿ, ಲೋಕದ ಸಂಬಂಧವು ವಿಧೇಯತೆಯ ಬದಲಾಗಿ ಸ್ವತಂತ್ರ ಬುನಾದಿಯಲ್ಲಿ ಅಧಿಷ್ಠಿತವಾಗುವ ದಿನ........ ನಾವು ನಮ್ಮ ಆರ್ಥಿಕ ಪದ್ಧತಿಯನ್ನು ಇಸ್ಲಾಮಿ ಬುನಾದಿಯಲ್ಲಿಕಟ್ಟಿ ಬೆಳೆಸುವೆವು. ಬಡ್ಡಿಯನ್ನು ನಿಷೇಧಿಸುವೆವು. ಆಗ ಆಧುನಿಕ ಯುಗದ ಅತಿನೂತನ ಆರ್ಥಿಕ ಪದ್ಧತಿಯ ಪಕ್ವಾರರೆಂಬ ನೆಲೆಯಲ್ಲಿ ನಾವು ಲೋಕದ ಅತ್ಯಂತ ಪ್ರಗತಿಪರ ಮತ್ತು ಮುಂದುವರಿದವರೆಂದು ಪರಿಗಣಿಸಲ್ಪಡುವೆವು!

******

ಝಕಾತ್‌ನ ಕುರಿತು ಯಾವ ಸಂದೇಹವೂ ಉಳಿಯದಂತೆ ಹಿಂದಿನ ಒಂದು ಅಧ್ಯಾಯದಲ್ಲಿ ನಾವು ಸುಸ್ಪಷ್ಟವಾಗಿ ವಿವರಿಸಿದ್ದೇವೆ. ಅದು ಬಡವರಿಗೆ ತೋರುವ ಔದಾರ್ಯವೇ? ಅಥವಾ ಕಾನೂನು ನಿರ್ಮಾಪಕನಾದ ಅಲ್ಲಾಹನ ಆಜ್ಞೆಯಂತೆ ನೀಡಲಾಗುವ

ಹಕ್ಕೇ? ಎಂಬುದನ್ನು ಅದರಲ್ಲಿ ನಾವು ವಿವರವಾಗಿ ಪ್ರತಿಪಾದಿಸಿದ್ದೇವೆ.

ಝಕಾತಿನ ಪ್ರಾದೇಶಿಕತೆಯನ್ನು ಇಲ್ಲಿ ಆರೋಪಿಸಲಾಗಿದೆ. ಅರ್ಥಾತ್ ಅದನ್ನು ಸಂಗ್ರಹಿಸಿದ ಪ್ರದೇಶವಲ್ಲಿಯೇ ವಿತರಣೆ ಮಾಡಲಾಗುತ್ತದೆಂಬ ವಿಷಯ. ವಾಸ್ತವದಲ್ಲಿ ಈ 'ಧೀಮಂತ'ರ ಹುಂಬತನವು ಹಾಸ್ಯಾಸ್ಪದವಾಗಿದೆ. 'ನಾಗರಿಕ' ಪಾಶ್ಚಾತ್ಯ ಲೋಕದಿಂದ ಏನಾದರೂ ಪದ್ಧತಿ ಬಂದರೆ ಅದು ಅವರಿಗೆ ಪ್ರಗತಿಯ ಪರಾಕಾಷ್ಠೆ ಮತ್ತು 'ಸಂಸ್ಕೃತಿ'ಯ ಉತ್ತುಂಗ ಶಿಖರವಾಗುತ್ತದೆ. ಆದರೆ ಅದೇ ಪದ್ಧತಿಯು ಇಸ್ಲಾಮಿ ಹಾದಿಯಿಂದ ಬಂದಾಗ ಅದು ಅವರಿಗೆ ಪ್ರತಿಗಾಮಿ ಮತ್ತು ಅಯೋಗ್ಯವೆನಿಸುತ್ತದೆ.

ಅಮೇರಿಕದ ಆಡಳಿತ ಸುಧಾರಣೆಗಳ ಅಂತಿಮ ಪರಿಣಾಮವು ಸಂಪೂರ್ಣ ವಿಕೇಂದ್ರೀಕರಣವಾಗಿದೆ. ಪ್ರತಿಯೊಂದು ಗ್ರಾಮವೂ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕವಾಗಿ ಸ್ವತಂತ್ರ ಘಟಕವಾಗಿದ್ದು, ನಗರ ಮತ್ತು ರಾಜ್ಯಗಳು ಅಂತಿಮವಾಗಿ ಅಮೇರಿಕದ ಸಂಯುಕ್ತ ರಾಷ್ಟ್ರಗಳ ಕೇಂದ್ರಾಳ್ವಿಕೆಗೆ ಒಳಪಟ್ಟಿರುವುದು. ಈ ಸ್ವತಂತ್ರ ಘಟಕಗಳು ಪಂಚಾಯತ್ ಮಂಡಳಿಯ ನಿರ್ಣಯದಂತೆ ವಿವಿಧ ರೀತಿಯ ತೆರಿಗೆಗಳನ್ನು ವಸೂಲು ಮಾಡುತ್ತವೆ. ತರುವಾಯ ಅದನ್ನು ಆಯಾ ಗ್ರಾಮಗಳಲ್ಲಿಯೇ ಅದರ ಶೈಕ್ಷಣಿಕ, ಆರೋಗ್ಯ, ಸಾರಿಗೆ ಇತ್ಯಾದಿ ಸಮಾಜಸೇವೆಯ ಅಗತ್ಯಗಳಿಗಾಗಿ ವೆಚ್ಚ ಮಾಡುತ್ತವೆ. ಅದರಿಂದ ಸ್ಥಾನೀಯ ಅಗತ್ಯಗಳನ್ನು ಪೂರೈಸಿ ಉಳಿದ ಹಣವನ್ನು ನಗರದ ಅಥವಾ ರಾಜ್ಯದ ಅಧಿಕಾರಿಗಳಿಗೆ ಒಪ್ಪಿಸುತ್ತಾರೆ. ಕೆಳ ಘಟಕಗಳಿಗೆ ಏನಾದರೂ ಹಣದ ಕೊರತೆಯುಂಟಾದರೆ ಕೇಂದ್ರದಿಂದ ನೆರವನ್ನು ಕೋರುತ್ತದೆ. ಇದು ಸ್ವಯಂ ಬಹಳ ಉತ್ತಮವಾದ ಆಡಳಿತ ಕ್ರಮವಾಗಿದೆ. ಯಾಕೆಂದರೆ ಆಯಾ ಪ್ರದೇಶದ ಸಮಸ್ಯೆಗಳ ಕುರಿತು ಅಲ್ಲಿನವರಿಗೆ ತಿಳಿದಿರುವಷ್ಟು ನಿಖರವಾಗಿ ತಿಳಿದಿರದ ಕೇಂದ್ರ ಸರಕಾರದ ಮೇಲೆ ಕೆಲಸದ ಹೊಣೆ ಹೇರದೆ ಅದನ್ನು ವಿಭಜಿಸಿ ಕೇಂದ್ರೀಕರಿಸಲಾಗುತ್ತದೆ.

ನಮ್ಮ 'ಬುದ್ಧಿಜೀವಿಗಳು' ಈ ಪದ್ಧತಿಯನ್ನು ಬಹಳ ಸಂಭ್ರಮೋಲ್ಲಾಸದಿಂದ ಸ್ವಾಗತಿಸುತ್ತಾರೆ. ವಾಸ್ತವದಲ್ಲಿ 'ಪ್ರತಿಗಾಮಿ' ಇಸ್ಲಾಮ್ ಧರ್ಮವು 1400 ವರುಷಗಳ ಹಿಂದೆಯೇ ಅದನ್ನು ಕಂಡುಹಿಡಿದಿತ್ತು. ಇಸ್ಲಾಮ್ ತೆರಿಗೆ ಸಂಗ್ರಹ ಮತ್ತು ವಿತರಣೆಯನ್ನು ಸ್ಥಾನೀಯಗೊಳಿಸಿತು. ಮಿಗತೆ ಹಣವನ್ನು ಸಾರ್ವಜನಿಕ ಬೊಕ್ಕಸಕ್ಕೆ ಸಲ್ಲಿಸಬೇಕೆಂದೂ ಕೊರತೆ ಹಣವನ್ನು ಅಲ್ಲಿಂದ ಪಡೆದುಕೊಳ್ಳಬೇಕೆಂದೂ ಆದೇಶಿಸಿತು. ಅದು ಉದ್ಯೋಗ ವಿಭಜನೆ ಮತ್ತು ಆಡಳಿತ ವಿಕೇಂದ್ರೀಕರಣಕ್ಕಾಗಿ ಇಸ್ಲಾಮ್ ಅಂಗೀಕರಿಸಿದ ಸಿದ್ಧಾಂತವಾಗಿದೆ.

ಇದನ್ನೇ ಆಧುನಿಕ 'ಬುದ್ಧಿ ಜೀವಿಗಳು' ಪ್ರತಿಗಾಮಿಯೆಂದು ಬೊಬ್ಬಿಡುತ್ತಿದ್ದಾರೆ.

ಝಕಾತ್‌ನ ವಿತರಣೆಯ ಕುರಿತು ನಾವು ಈ ಹಿಂದೆ ಹೇಳಿದ್ದೇವೆ. ಝಕಾತ್‌ನ ಹಕ್ಕುದಾರರಿಗೆ ಅದನ್ನು ನಾಣ್ಯ ಅಥವಾ ಧಾನ್ಯಗಳ ರೂಪದಲ್ಲಿಯೇ ನೀಡಬೇಕೆಂದಿಲ್ಲ.

ವಿದ್ಯಾಲಯ, ಆಸ್ಪತ್ರೆ ಮತ್ತು ಸಮಾಜಸೇವೆಗಳ ರೂಪದಲ್ಲಿಯೂ ಅದನ್ನು ಪೂರೈಸಬಹುದಾಗಿದೆ.

ಆಧುನಿಕ ಸಮಾಜದಲ್ಲಿ ನಾವು ಇಸ್ಲಾಮನ್ನು ರೂಢಿಗೊಳಿಸಿದರೆ, ಸ್ವಂತ ಅಧಿಕಾರವಿರುವ ಸ್ಥಾನೀಯ ಘಟಕಗಳು ಸ್ಥಾಪಿಸಲ್ಪಡುವುವು. ಪ್ರಸ್ತುತ ಘಟಕಗಳು ಜಿಲ್ಲಾ ಕೇಂದ್ರ, ರಾಜ್ಯ, ರಾಷ್ಟ್ರ, ಜಾಗತಿಕ ಮುಸ್ಲಿಮ್ ಸರಕಾರ ಮತ್ತು ಅಂತಿಮವಾಗಿ ವಿಶಾಲ ವಿಶ್ವದೊಂದಿಗೆ ಸಂಬಂಧ ಹೊಂದಿರುವುದು. ಆಗ ಈ 'ಆಧುನಿಕ'ರನ್ನು ಅಚ್ಚರಿಪಡಿಸುವ ಎಲ್ಲ ಜನಾಂಗಗಳಿಗಿಂತ ನಾವು ಮುಂದುವರಿದವರಾಗುವೆವು.

*****

ಮದ್ಯ, ಜೂಜಾಟ ಮತ್ತು ಸ್ತ್ರೀ-ಪುರುಷರ ಮುಕ್ತ ಮಿಲನವನ್ನು ಇಸ್ಲಾಮ್ ವಿರೋಧಿಸುತ್ತಿದೆ ನಿಜ. ಪ್ರಗತಿಪರರೆಂದು ಹೇಳುತ್ತಿರುವ ಸ್ತ್ರೀ-ಪುರುಷರು ಎಷ್ಟೇ ಬೊಬ್ಬಿರಿದರೂ ಆ ನಿಷೇಧದಲ್ಲಿಯೇ ಇಸ್ಲಾಮ್ ಸ್ಥಿರವಾಗಿರುವುದು!

ಆ ಕುರಿತು ಚರ್ಚೆಯು ತುಂಬಾ ದೀರ್ಘವಾಗಬಹುದು. ಆದರೂ ಸುಲಭ ರೀತಿಯಲ್ಲಿ ನಾವು ಆ ಸಮಸ್ಯೆಯ್ನು ವಿವೇಚಿಸೋಣ.

ಮದ್ಯದ ಮಟ್ಟಿಗೆ ಅದರ ಅಮಲಿನಲ್ಲಿ ಮುಳುಗಿರುವ ಫ್ರಾನ್ಸಿನ ಉದಾಹರಣೆಯೇ ಧಾರಾಳ ಸಾಕು, ಅಲ್ಲಿನ ಸಂಸತ್ಸದಸ್ಯೆಯೋರ್ವರು ಮದ್ಯ ನಿಷೇಧಕ್ಕಾಗಿ ಸ್ವರವೆತ್ತಿದ್ದಾರೆ!! ಆಧುನಿಕ ಕಾಲದ ಮದ್ಯಪಾನ ಪ್ರಿಯರಿಗೆ ಅದುವೇ ಉತ್ತರ ನೀಡುತ್ತದೆ.

ಮದ್ಯಪಾನ ಚಟವು ರೋಗ ಪೀಡಿತ ಸಮಾಜದ ಅಥವಾ ರೋಗಪೀಡಿತ ವ್ಯಕ್ತಿಯ ಲಕ್ಷಣವಾಗಿದೆ. ತೀವ್ರ ವರ್ಗಬೇಧವಿರುವ ಸಮಾಜದಲ್ಲಿ ಒಂದು ವಿಭಾಗವು ಪ್ರಜ್ಞಾವಂತಿಕೆಯನ್ನು ಮರಗಟ್ಟಿಸುವಂತಹ ಸುಖಾಡಂಬರದ ಗುಂಗಿನಲ್ಲಿರುತ್ತದೆ. ಅಲ್ಲಿ ಅವರಿಗೆ ಕೃತಕ ಉತ್ತೇಜಕಗಳ ಆಗತ್ಯವಿರುತ್ತದೆ. ಇನ್ನೊಂದು ವಿಭಾಗವು ಹಸಿವು ಬಡತನಗಳ ನಿತ್ಯ ಸಂಕಟದಲ್ಲಿ ತೊಳಲಾಡುತ್ತಿರಬಹುದು. ಜೀವನದ ಕಹಿ ಅನುಭವಗಳಿಂದ ಮುಕ್ತಿ ಪಡೆಯಲು ಕೆಲವು ಮಾದಕ ವಸ್ತುಗಳನ್ನು ಅವಲಂಬಿಸಬೇಕಾಗುವುದು. ಮರ್ದನ, ಬೆದರಿಕೆ ಮತ್ತು ವಿಚಾರ ಸ್ವಾತಂತ್ರ್ಯಗಳಿಗೆ ಅಡ್ಡಿಯಿರುವ ಸಮಾಜದಲ್ಲಿ ಅಸ್ತಿತ್ವವನ್ನು ಉಳಿಸಿಕೊಳ್ಳುವ ಹೋರಾಟದಲ್ಲಿ ಭಾವನೆಗಳನ್ನು ಜಡಗೊಳಿಸುವ ಜೀವನ! ಭೂತಾಕಾರದ ಬೃಹತ್ ಯಂತ್ರಗಳ ಭೀಕರ ಸದ್ದುಗಳು ಆತನ ವ್ಯಾಕುಲತೆಯನ್ನು ಮತ್ತಷ್ಟು ಹೆಚ್ಚಿಸುತ್ತವೆ. ಕಚೇರಿಗಳ ನಾಲ್ಕು ಗೋಡೆಗಳೊಳಗೆ ಗಂಟೆಗಟ್ಟಲೆ ಬೈಠಕ್ ಆತನ ಉಸಿರುಗಟ್ಟಿಸುತ್ತದೆ........

ಇಂತಹ ಸಮಾಜಗಳು ಯಾತನೆಗಳಿಲ್ಲದ ಒಂದು ಸ್ವಪ್ನಲೋಕದ ನಿರ್ಮಾಣಕ್ಕಾಗಿ ಮದ್ಯ ಮತ್ತು ಮಾದಕ ವಸ್ತುಗಳ ಮೊರೆ ಹೋಗುತ್ತವೆ.

ಆದರೆ ಪ್ರಸ್ತುತ ಕಾರಣಗಳು ಅದರ ಅಸ್ತಿತ್ವಕ್ಕೆ ಸಮರ್ಥನೆಯಾಗುವುದಿಲ್ಲ. ಅದರ ಅಸ್ತಿತ್ವವು ಸಮಾಜದ ರೋಗ ಲಕ್ಷಣವನ್ನು ಸೂಚಿಸುತ್ತದೆ. ಅದನ್ನು ನಿರ್ಮೂಲನಗೊಳಿಸುವ ಕರೆಯೂ ಆಗಿದೆ. ಮದ್ಯವನ್ನು ನಿಷೇಧಿಸಿರುವ ಇಸ್ಲಾಮ್ ಅದರ ಪ್ರೇರಕಗಳನ್ನೂ ಮರೆತಿಲ್ಲ. ಅದು ಪ್ರಥಮವಾಗಿ ಅಂತಹ ಪ್ರೇರಕಗಳ ನಿರ್ಮೂಲನಕ್ಕಾಗಿ ಪ್ರಯತ್ನಿಸಿತು. ತರುವಾಯ ನಿಷೇಧವನ್ನು ಜ್ಯಾರಿಗೊಳಿಸಿತು. ಆರ್ಥಿಕ, ಸಾಮಾಜಿಕ, ರಾಜಕೀಯ, ವೈಚಾರಿಕ, ನೈತಿಕ ಮತ್ತು ಶಾರೀರಿಕ ಶಿಸ್ತಿನ ಮೂಲಕ ಮಾನಸಿಕ ರೋಗಗಳನ್ನು ಇಸ್ಲಾಮ್ ಯಾವ ರೀತಿಯಲ್ಲಿ ಶುಶ್ರೂಷಿಸಿದೆಯೆಂದು, ಇಸ್ಲಾಮನ್ನು ವಿಮರ್ಶಿಸುವುದಕ್ಕಿಂತ ಮುಂಚೆ 'ಆಧುನಿಕ ನಾಗರಿಕತೆಯ' ವಕ್ತಾರರೊಮ್ಮೆ ಅವಲೋಕಿಸಲಿ.

ಹಾಗೆಯೇ ಕೆಲವು ಅಲ್ಪ ಮತಿಗಳಿಗಲ್ಲದೆ ಜೂಜಾಟದ ಬಗ್ಗೆ ಸದಭಿಪ್ರಾಯವಿಲ್ಲ. ಆದ್ದರಿಂದ ಆ ಬಗ್ಗೆ ಹೆಚ್ಚೇನೂ ಹೇಳುವ ಅಗತ್ಯವಿಲ್ಲ.

ಸ್ತ್ರೀ-ಪುರುಷರ ಸ್ವತಂತ್ರ ಮಿಲನದ ಕುರಿತು ಇಂದು ಭಾರೀ ವಾಗ್ವಾದ ಕೇಳಿಬರುತ್ತಿದೆ.

"ನಾವು ಎಷ್ಟರ ತನಕ ಈ ಹಿಂದುಳಿದ ಸ್ಥಿತಿಯಲ್ಲಿ ಜೀವಿಸಬೇಕು ನಾವು ಪ್ರಗತಿ ಮತ್ತು ನಾಗರಿಕತೆಯ ಹಾದಿಗೆ ಎಷ್ಟುಕಾಲ ತಡೆಯಾಗಿರಬೇಕು?' ಫ್ರೆಂಚ್ ನಾಗರಿಕತೆಗೆ 'ಶುಭಾಶಯಗಳು!' ಇದೋ ಅಲ್ಲಿ ಈರ್ವರು ಪ್ರಣಯಿಗಳು ಅಲೌಕಿಕ ಪ್ರೇಮದ ಆನಂದೋಲ್ಲಾಸದಲ್ಲಿಸರ್ವಸ್ವವನ್ನೂ ಮರೆತು, ನಡುಬೀದಿಯಲ್ಲಿ ಆಲಂಗಿಸಿ ಚುಂಬಿಸುತ್ತಿದ್ದಾರೆ! ಬೀದಿಯಲ್ಲಿ ಸಂಚರಿಸುವ ಜನಸ್ತೋಮವಾಗಲಿ, ನೈತಿಕ ಪ್ರಜ್ಞೆಯ ಒತ್ತಡವಾಗಲಿ ಅವರಿಗೆ ತೊಂದರೆಯಾಗುವುದಿಲ್ಲ. ಈ ಮನೋಹರ ಮತ್ತು ಕಲಾಪೂರ್ಣ 'ಸನ್ನಿವೇಶ'ವನ್ನು ದಾರಿಹೋಕರು ಅರ್ಧದಲ್ಲಿಯೇ ಕೆಡಿಸದಿರಲೆಂದು ಪೊಲೀಸರು ಅವರ ರಕ್ಷಣೆಗೆ ತಲಪುತ್ತಾರೆ. ಯಾರಾದರೂ ಆ ಜೋಡಿಯನ್ನು ಕೆಣಕಿದರೆ, ಸ್ವಯಂ ನಿಂದನೆ ಮತ್ತು ಅಪಹಾಸ್ಯಕ್ಕೀಡಾಗ ಬೇಕಾಗುವುದು!

ಅಮೇರಿಕನ್ ನಾಗರಿಕತೆಗೂ "ಶುಭವಾಗಲಿ!"

ಅಲ್ಲಿನ ಜನರು ಮುಚ್ಚುಮರೆಯಿಲ್ಲದೇ ಎಲ್ಲವನ್ನೂ ಬಹಿರಂಗವಾಗಿಯೇ ಮಾಡುತ್ತಾರೆ. ಕಪಟತೆ ಮತ್ತು ವಂಚನೆಯೇನಂದರಿಯದವರು ! ಅವರು 'ಸೆಕ್ಸ್'ಎಂದರೆ ದೇಹಶಾಸ್ತ್ರದ ಒಂದು ಬೇಡಿಕೆಯೆಂದು ಭಾವಿಸಿದರು. ಆ ಅನಿವಾರ್ಯ ಬೇಡಿಕೆಯನ್ನು ಅಂಗೀಕರಿಸಿದರು. ಅದರ ಹಾದಿಯನ್ನು ಸುಗಮಗೊಳಿಸಿದರು. ಅದಕ್ಕೆ ಅವರು ಸಮಾಜದ ಪ್ರೋತ್ಸಾಹ ಮತ್ತು ಸಂರಕ್ಷಣೆ ನೀಡಿದರು. ಪರಸ್ಪರ ಪ್ರೇಮಿಸುವ ಯುವಕ-ಯುವತಿಯರು ಯಾವ ಸಂದರ್ಭದಲ್ಲಿ ಬೇಕಿದ್ದರೂ ಒಟ್ಟಿಗೆ ಹೋಗಬಹುದು. ಒಟ್ಟಿಗೆ ಉಳಕೊಳ್ಳಬಹುದು. ಏಕಾಂತದಲ್ಲಿ ರಮಿಸಬಹುದು. 'ಅಗತ್ಯ'ಗಳನ್ನು ಪೂರೈಸಬಹುದು. ಹೀಗೆ ದೇಹ, ಮನಸ್ಸು ಮತ್ತು ನರಗಳ 'ಬಿಗು'ವನ್ನು ಸಡಿಲುಗೊಳಿಸಬಹುದು. ಅದರಿಂದಾಗಿ ಅವರಿಗೆ ಮರುದಿನ

ಬೆಳಿಗ್ಗೆ ಉತ್ಸಾಹದಿಂದ ಕೆಲಸಕ್ಕೆ ಹೋಗಲು ಸಾಧ್ಯವಾಗುವುದು. ಹೆಚ್ಚು ಉತ್ಪಾದಿಸಿ, ಜೀವನ ಸೌಲಭ್ಯಗಳನ್ನು ಸಾಧಿಸಿ ಸಮಾಜದೊಂದಿಗೆ ಮುನ್ನಡೆಯಲೂ ಅವರಿಗೆ ಸಾಧ್ಯವಾಗುವುದು.

ಹೌದು! ಜರ್ಮನರ ಪ್ರಥಮ ಪ್ರಹಾರಕ್ಕೆ ಫ್ರಾನ್ಸ್ ಮುಗ್ಗರಿಸಿ ಬಿತ್ತು. ಅದಕ್ಕೆ ಯುದ್ಧ ಸಿದ್ಧತೆ ಮತ್ತು ಲೌಕಿಕ ಸವಲತ್ತುಗಳ ಕೊರತೆ ಕಾರಣವಾಗಿರಲಿಲ್ಲ. ಬದಲಾಗಿ ಅದು ಕಾಯ್ದುಕೊಳ್ಳುವ ಯಾವ ಮಾನಮರ್ಯಾದೆಗಳೂ ಇಲ್ಲದಂತಹ ಜನತೆಯಾಗಿದ್ದಿತು. ದುರ್ಭಾವನೆಗಳ ಸಾಗರದಲ್ಲಿ ಮುಳುಗಿದ್ದ ಜನತೆ! ಲೈಂಗಿಕ ಸುಖಭೋಗಗಳಲ್ಲಿ ಮೈಮರೆತಿದ್ದ ಆ ಜನತೆಗೆ, ಯುದ್ಧ ಮತ್ತು ಬಾಂಬೆಸೆತಗಳಿಂದ ಪ್ಯಾರೀಸಿನ ರಮ್ಯ ನಾಟ್ಯಾಲಯಗಳು ನಾಶವಾದೀತಲ್ಲವೇ ಎಂಬ ಭೀತಿ ಮಾತ್ರವಿತ್ತು. ನಾಗರಿಕತೆ ಸಿದ್ಧಿಸಿದವರು ನಮ್ಮನ್ನು ಆ ಹೊಲಸಿಗೆ ಆಹ್ವಾನಿಸುತ್ತಿದ್ದಾರೆಯೇ? ಅಥವಾ ಅವರು ಸ್ವಯಂ ವಂಚಿತರಾಗಿದ್ದಾರೆಯೇ? ತಾವೇನು ಬೊಗಳುತ್ತಿರುವೆವೆಂದು ಅವರಿಗೆ ಸ್ವಯಂ ತಿಳಿದಿಲ್ಲವೇ?

ಪೌರ್ವಾತ್ಯ ಲೋಕದ ಅಜ್ಞಾನಿ ಜನಾಂಗವು ಕನಸು ಕಾಣುತ್ತಿರುವ ಅಮೇರಿಕ....... ಅಲ್ಲಿನ ಒಂದು ನಗರದಲ್ಲಿ ನಡೆಸಲಾದ ಸಮೀಕ್ಷೆಯಂತೆ, ಪ್ರೌಢ ಶಾಲೆಯ 38 ಶೇ. ವಿದ್ಯಾರ್ಥಿನಿಯರು ಗರ್ಭಿಣಿಯರಾಗಿರುವರೆಂದು ತಿಳಿದುಬಂದಿದೆ. ಈ ನಿಟ್ಟಿನಲ್ಲಿ ಕಾಲೇಜು ವಿದ್ಯಾರ್ಥಿನಿಯರ ಶೇಕಡಾಂಶ ಕಡಿಮೆಯಿದೆ. ಯಾಕೆಂದರೆ ಅವರಿಗೆ ಅನುಭವ ಮತ್ತು ಗರ್ಭನಿರೋಧ ವಸ್ತುಗಳ ಬಳಕೆಯ ಜ್ಞಾನ ಅಧಿಕವಿದೆ.

ಆಧುನಿಕ 'ಪ್ರಗತಿಗಾಮಿ'ಗಳು ನಮ್ಮನ್ನು ಅದರತ್ತ ಕರೆಯುತ್ತಿದ್ದಾರೆಯೇ?...

ನರನಾಡಿಗಳ ಲೈಂಗಿಕ ಒತ್ತಡವನ್ನು ಶಮನಿಸುವುದು ಒಂದು ಉತ್ತಮ ಧ್ಯೇಯವೇ ಆಗಿದೆ. ಆ ಬಗ್ಗೆ ಇಸ್ಲಾಮ್ ತೀವ್ರ ಗಮನ ಹರಿಸಿದೆ. ಯಾಕೆಂದರೆ ಮಾನವನ ಲೈಂಗಿಕಾಸಕ್ತಿಯು, ಉತ್ಪಾದನೆಯನ್ನು ಕುಂಠಿತಗೊಳಿಸುವುದೆಂದೂ ಜೀವನವನ್ನು ಶಾರೀರಿಕ ಬೇಡಿಕೆಗಳಿಗೆ ಸೀಮಿತಗೊಳಿಸುವುದೆಂದೂ ಪ್ರಗತಿಗೆ ಅಡ್ಡಿಯಾಗುವುದೆಂದೂ ಅಮೇರಿಕವು ತಿಳಿಯುವುದಕ್ಕಿಂತ ಮುಂಚಿತವಾಗಿಯೇ ಇಸ್ಲಾಮ್ ಅರಿತುಕೊಂಡಿತ್ತು. ಆದರೆ ಉತ್ತಮ ಧ್ಯೇಯಸಾಧನೆಗಾಗಿ ಉತ್ತಮ ಮಾರ್ಗಗಳನ್ನು ಅವಲಂಬಿಸಬೇಕು. ಯುವಕ ಯುವತಿಯರನ್ನು ಪಶು ಸಮಾನಗೊಳಿಸಿ, ಲೈಂಗಿಕ ಅರಾಜಕತೆಯೆಡೆಗೆ ಉರುಳು ಬಿಚ್ಚಿಬಿಡುವ ಮೂಲಕ ಸಮಾಜವನ್ನು ಕೆಡಿಸುವ ಮಾರ್ಗ ಯೋಗ್ಯವಲ್ಲ. ಇವರು ಭಾವಿಸಿರುವಂತೆ ಲೈಂಗಿಕ ಅರಾಜಕತೆಯಿಂದ ಅಮೇರಿಕದ ಉತ್ಪಾದನಾರಂಗದಲ್ಲಿ ಪ್ರಗತಿಯುಂಟಾಗಿದ್ದರೆ, ಅದು ಲೌಕಿಕ ಉತ್ಪಾದನೆಯೆಂಬುದನ್ನು ಅವರು ಪ್ರಥಮವಾಗಿ ತಿಳಿದಿರಬೇಕು. ಅದರಲ್ಲಿ ಜೀವಂತ ಮಾನವನು ಹೊರದೂಡಲ್ಪಟ್ಟು ಯಂತ್ರ ಮಾನವನು ರಂಗವನ್ನು ಆಕ್ರಮಿಸುವ ದಿನ ದೂರವಿಲ್ಲ. ಇನ್ನು ಆಚಾರ-ವಿಚಾರಗಳ ಬಗ್ಗೆ ಹೇಳುವುದಿದ್ದರೆ, ಆ ರಾಷ್ಟ್ರವು

ಆಧುನಿಕ ಮಾನವನು ನೋಡಿರುವುದರಲ್ಲಿ ಅತ್ಯಂತ ನಿಕೃಷ್ಟವಾದ ಗುಲಾಮ ಸಂಪ್ರದಾಯವನ್ನು ನೀಗ್ರೋಗಳ ಮೇಲೆ ಹೇರಿದೆ. ಸಾಮ್ರಾಜ್ಯತ್ವ ಎಂತಹ ಹಿತಾಸಕ್ತಿಗಳನ್ನೂ ಅದು ಬೆಂಬಲಿಸುತ್ತದೆ. ಪಾಶವೀ ಭೋಗಲಾಲಸೆಯಲ್ಲಿ ವ್ಯಕ್ತವಾಗುವ ಮಾನಸಿಕ ಅಧಃಪತನವನ್ನೂ ವಸಾಹತು ಶಾಹಿತ್ವ ಮತ್ತು ವರ್ಣಭೇದದಲ್ಲಿ ಪ್ರಕಟವಾಗುವ ಮಾನಸಿಕ ಅಧಃಪತನವನ್ನೂ ಪ್ರತ್ಯೇಕಿಸಿ ತಿಳಿಯುವುದು ಕಷ್ಟಸಾಧ್ಯ. ಅವೆರಡೂ 'ನಾಗರಿಕರು' ತಲುಪಬಾರದಂತಹ ಅಧಃಪತನವಾಗಿದೆ.

ಹಾಗಾದರೆ ಕೋಮಲಾಂಗಿನಿಯಾದ ತರುಣಿಯೋರ್ವಳು ಪ್ರೇಕ್ಷಕರ ಕಣ್ಸೆಳೆಯುವಂತೆ ಪ್ರೇಮ ಸುಗಂಧ ಬೀರಿ ಬೀದಿಗಿಳಿಯುವುದು ತುಂಬಾ ಅಪ್ಯಾಯಮಾನ ನೋಟವೇ ಸೈ. ಸಂದೇಹವಿಲ್ಲ. ವೈವಿಧ್ಯಮಯ ಭಕ್ಷ್ಯ ಭೋಜನವು ಸದಾ ಒಂದೇ ರೀತಿಯ ನೀರಸ ಆಹಾರಕ್ಕಿಂತ ಎಷ್ಟೋ ರುಚಿಕರ!

ಆದರೆ ನಾವು ಪ್ರಥಮವಾಗಿ ನಮ್ಮ ಧ್ಯೇಯಗಳನ್ನು ಖಚಿತಪಡಿಸಿಕೊಳ್ಳಬೇಕು. ಜೀವನದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಸಾಧ್ಯವಿದ್ದಷ್ಟು ಆಡಂಬರ, ಮೋಜು ಮತ್ತು ಸಂತೋಷ ಪಡೆಯುವುದೇ ನಮ್ಮ ಜೀವನದ ಮುಖ್ಯ ಧ್ಯೇಯವೇ? ಸುಖ-ಸವಲತ್ತುಗಳನ್ನು ಸವಿಯಬಾರದೆಂದು ಈ ತನಕ ಯಾರೂ ಹೇಳಿಲ್ಲ. ಸುಖಾನಂದಗಳು 20ನೇ ಶತಮಾನದ ಪಾಶ್ಚಾತ್ಯ ರಾಷ್ಟ್ರಗಳ ಸಂಶೋಧನೆಯೂ ಅಲ್ಲ. ಹಿಂದೆ ಗ್ರೀಕ್, ಪರ್ಶಿಯ ಮತ್ತು ರೋಮ್‌ಗಳು ಅದನ್ನರಿತು ಮೂಗಿನ ತನಕ ಮುಳುಗಿ ಅನುಭವಿಸಿದ್ದುವು. ತರುವಾಯ ಏನಾಯಿತು? ಈ ರಾಷ್ಟ್ರಗಳು ಒಂದೊಂದಾಗಿ ಸುಖಾಡಂಬರಗಳಲ್ಲಿ ಮೈಮರೆತಾಗ ಸ್ವಾಭಾವಿಕವಾಗಿ ದುಡಿಮೆ ಮತ್ತು ಉತ್ಪಾದನೆಯ ನಿಷ್ಠೆ ಕಡಿಮೆಯಾಯಿತು. ಜೀವನವನ್ನು ಗೌರವಪೂರ್ವಕ ನೋಡಲಾಗಲಿಲ್ಲ. ಫ್ರಾನ್ಸ್‌ನಲ್ಲಿಯೂ ಹಾಗೆಯೇ ಆಯಿತು. ಕಾಲಚಕ್ರದ ಉರುಳುವಿಕೆಯಲ್ಲಿ ಅದು ಎಲ್ಲೆಡೆ ಸಂಭವಿಸಿತು. ಅದು ಭೂಮಿಯಲ್ಲಿ ದೇವನ ಕಾರ್ಯಾಚರಣೆಯಾಗಿತ್ತು. "ದೇವನ ಕಾರ್ಯಾಚರಣೆಯಲ್ಲಿ ಯಾವೊಂದು ಬದಲಾವಣೆಯೂ ನಿನಗೆ ಕಾಣಿಸಲಾರದು."

(ಕುರ್‌ಆನ್)

ಪಾಶ್ಚಾತ್ಯ ಲೋಕಕ್ಕೆ ಶಿಕ್ಷಣ, ದುಡಿಮೆ, ಉದ್ಯೋಗ, ಉತ್ಪಾದನೆಗಳ ತೀವ್ರ ಯತ್ನದಿಂದ ಆಧುನಿಕ ಯುಗದಲ್ಲಷ್ಟೇ ಭೌತಿಕಶಕ್ತಿಯು ಲಭ್ಯವಾಯಿತು. ಆದರೂ ಪ್ರಸ್ತುತ ಭಾವನೆ ಮತ್ತು ಅಭಿಲಾಷೆಗಳ ಪ್ರವಾಹದಲ್ಲಿ ಅವುಗಳಿಂದ ಹಲವು ವಿಷಯಗಳು ಕೊಚ್ಚಿಹೋದುವು. ಹಲವು ಬುಡ ಶಿಥಿಲವಾಗಿ ನಿಂತಿವೆ. ಆದರೆ ನಮಗೆ ಯಾವ ಶಕ್ತಿಯೂ ಲಭ್ಯವಿಲ್ಲ. ಕಳೆದೆರಡು ಶತಮಾನಗಳಿಂದ ನಮ್ಮ ಸಾಮಾಜಿಕ-ರಾಜಕೀಯ ಪರಿಸ್ಥಿತಿಗಳು ನಮಗೆ ಅನುಕೂಲವಾಗಿಲ್ಲ. ಹೀಗಿರುತ್ತಾ, ಪ್ರಾಚೀನತೆ ಮತ್ತು ಪ್ರತಿಗಾಮಿತ್ವದ ಆರೋಪದಿಂದ ಮುಕ್ತರಾಗಲಿಕ್ಕಾಗಿ ನಾಗರಿಕತೆ ಮತ್ತು ಪ್ರಗತಿಯ ಹೆಸರಿನಲ್ಲಿ ಸುಖಾಡಂಬರಗಳಲ್ಲಿ ತಲ್ಲೀನರಾಗುವುದರಿಂದ ನಮಗೇನು ಪ್ರಯೋಜನವಾದೀತು?

ತನ್ಮೂಲಕ ವಿನಾಶ ಮತ್ತು ಅಧಃಪತನವಷ್ಟೇ ಸಾಧಿತವಾಗಬಹುದು. ನಾವು ಪ್ರಗತಿಯ ಹಾದಿಯಲ್ಲಿ ಮುಂದೆ ಸಾಗಿದಂತೆಯೇ ದಾರಿ ಬದಿಯಲ್ಲಿ ಕುಸಿದು ಬೀಳುತ್ತಿದ್ದೇವೆ. ಬರೆಹಗಾರರು ಮತ್ತು ಸ್ವತಂತ್ರ ಚಿಂತಕರು ಆಚಾರ ಸಂಪ್ರದಾಯಗಳನ್ನು ತೊರೆಯಲಿಕ್ಕಾಗಿ ಯಾವುದೇ ನೆಪದಿಂದ ಕರೆ ನೀಡುತ್ತಿದ್ದರೂ, ಅವರು ತಿಳಿದೋ ತಿಳಿಯದೆಯೋ ಸಾಮ್ರಾಜ್ಯತ್ವದ ಹಗ್ಗ ಎಳೆಯುತ್ತಿದ್ದಾರೆ. ಸಾಮ್ರಾಜ್ಯಶಾಹೀ ಶಕ್ತಿಗಳು ಈ ಬರೆಹಗಾರರನ್ನು ಮತ್ತು ಚಿಂತಕರನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. ಸಮಾಜದ ನೈತಿಕ ಸದಾಚಾರಗಳನ್ನು ಕೆಡಿಸಿ, 'ಪ್ರತಿಷ್ಠೆ' ಮತ್ತು ಸುಖಾನಂದದ ಹೆಸರಿನಲ್ಲಿ ಯುವ ಜನಾಂಗವನ್ನು ಸಡಿಲುಬಿಟ್ಟು, ನಿರ್ವಹಿಸುತ್ತಿರುವ ಸೇವೆಯನ್ನೂ ಅವರು ಚೆನ್ನಾಗಿ ಅರಿತಿದ್ದಾರೆ. ಪತ್ರಿಕೆ, ಗ್ರಂಥ, ಪ್ರಸಾರ ಮತ್ತು ಆಡಳಿತ ಯಂತ್ರದ ಮೂಲಕ ಅವರು ಪ್ರಜ್ಞಾಪೂರ್ವಕ ಅಥವಾ ಅನೈಚ್ಛಿಕವಾಗಿ ನಿರ್ವಹಿಸುತ್ತಿರುವ ಸೇವೆಗಳಿಗೆ ಸೂಕ್ತ ಪ್ರತಿಫಲವನ್ನೂ ನೀಡುತ್ತಲಿದ್ದಾರೆ.

ಅವರು ನಮ್ಮೊಡನೆ ಹೇಳುತ್ತಾರೆ:ನೀವು ನಾಗರಿಕ ಸ್ತ್ರೀಯನ್ನೊಮ್ಮೆ ನೋಡಿರಿ....... ಆಕೆಯು ಕೇವಲ ಹೆಣ್ಣೆಂಬ ಸ್ಥಾನದಿಂದ ಸಕಲ ಸಾಮರ್ಥ್ಯಗಳನ್ನು ಹೊಂದಿರುವ ಸ್ತ್ರೀಯೆಂಬ ಮಟ್ಟಕ್ಕೇರಿದ್ದಾಳೆ. ಆಕೆಯು ಇಂದು ಸಾಮಾಜಿಕ ಜೀವನಕ್ಕೆ ಸ್ವಂತ ಕೊಡುಗೆ ನೀಡಬಲ್ಲ ಸ್ವತಂತ್ರ ಮಾನವ ಅಸ್ತಿತ್ವವಾಗಿದ್ದಾಳೆ!-

ಸ್ತ್ರೀಯು ಸ್ವತಂತ್ರವಾಗಿ ಸಾಮಾಜಿಕ ರಂಗಕ್ಕಿಳಿಯುವ ಕುರಿತು ಇಸ್ಲಾಮ್ ಮತ್ತು ಸ್ತ್ರೀ ಎಂಬ ಅಧ್ಯಾಯದಲ್ಲಿ ನಾವು ಚರ್ಚೆ ನಡೆಸಿದ್ದೇವೆ. ಆಕೆಯ ರಂಗ ಪ್ರವೇಶ ಮತ್ತು ಸಾಮಾಜಿಕ ವಿಲಯನದಿಂದಾಗಿ ಆಕೆಗೆ ಗೃಹಾಡಳಿತ ಮತ್ತು ಶಿಶು ಪರಿಪಾಲನೆಗಾಗಿ ಮನೆಯಲ್ಲಿದ್ದಾಗ ಅಲಭ್ಯವಾಗಿದ್ದ ಅನೇಕ ಅನುಭವಗಳನ್ನು ನೀಡಿದೆ. ಆದರೆ ನಾವಿಲ್ಲಿ ಒಂದು ಪ್ರಶ್ನೆ ಕೇಳ ಬಯಸುತ್ತೇವೆ. ಈ ಹೊಸ ಅನುಭವದಿಂದ ಸ್ತ್ರೀಗೆ ಏನು ಲಾಭವಾಯಿತು.? ಅಥವಾ ಒಂದೆಡೆಯಿಂದ ಸಾಧಿಸಿದ ಲಾಭಕ್ಕೆ ಇನ್ನೊಂದೆಡೆಯಿಂದ ಹಾನಿ ತಟ್ಟೀತೇ? ನಾನು ಪುನಃ ಪ್ರಶ್ನಿಸಲೇ? ಈ ಅನುಭವ ಜ್ಞಾನವು ಮಾನವೀಯತೆಗೆ ಏನನ್ನು ಸಾಧಿಸಿಕೊಟ್ಟಿತು? ಅದರಿಂದಲೂ ಒಂದೆಡೆಯಿಂದಾದ ಸಾಧನೆಯು ಮತ್ತೊಂದೆಡೆಯಿಂದ ನಷ್ಟವಾಗಲಿಲ್ಲವೇ?

ಇಂದು ಪಾಶ್ಚಾತ್ಯ ಲೋಕದಲ್ಲಿ ಸ್ತ್ರೀಯು ಪುರುಷನ ಉತ್ತಮ ಸಂಗಾತಿಯಾಗಿದ್ದಾಳೆ. ಪುರುಷನೊಂದಿಗೆ ಸಲಿಗೆ ಬೆಳೆಸಿ, ಆತನೊಂದಿಗೆ ಪ್ರೇಮ ಸಲ್ಲಾಪಗಳಲ್ಲಿ ನಿರತಳಾಗಿ ಆತನ ಲೈಂಗಿಕ ಬೇಡಿಕೆಗಳನ್ನು ಪೂರೈಸುತ್ತಾಳೆ. ಆತನ ಅನೇಕ ಸಮಸ್ಯೆಗಳಲ್ಲಿ ಸಹಭಾಗಿಯಾಗುತ್ತಾಳೆ. ಆದರೆ ಆಕೆಗೆ ಉತ್ತಮ ಪತ್ನಿ ಅಥವಾ ಉತ್ತಮ ಮಾತೆಯಾಗಲು ಇಂದಿಗೂ ಸಾಧ್ಯವಾಗಿಲ್ಲ. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಮೊರೆಯಿಡುವವರಿಗೆ ಈ ವಾಸ್ತವಿಕತೆಯನ್ನು ನಿರಾಕರಿಸಲಸಾಧ್ಯ. ನಮ್ಮ ವಾದವನ್ನು ಸಮರ್ಥಿಸುವ ಈ ಅಂಕಿ-ಅಂಶಗಳನ್ನು ನೋಡಿರಿ:

ಅಮೇರಿಕದ ವಿವಾಹ ವಿಚ್ಛೇದನ ಮಟ್ಟವು ಶೇಕಡಾ 40ಕ್ಕೆ ತಲಪಿದೆ. ಇದು ಕುತೂಹಲಕಾರಿ ಮತ್ತು ಭಯಾನಕ ಮಟ್ಟವಾಗಿದೆ. ಯೂರೋಪಿನಲ್ಲಿ ವಿವಾಹ ವಿಚ್ಛೇದನ ಮಟ್ಟವು ಇದಕ್ಕಿಂತ ಕೆಳಗಿದೆ. ಆದರೆ "ಗುಪ್ತ ಪ್ರಣಯವು" ಪತಿ-ಪತ್ನಿಯರು ಪರಸ್ಪರ ತಿಳಿದಿರುವ ಸಾಮಾನ್ಯ ವ್ಯವಹಾರವಾಗಿದೆ. ಸ್ತ್ರೀಯು ಉತ್ತಮ ಪತ್ನಿಯೋರ್ವಳಾಗಿದ್ದರೆ ಅಥವಾ ಕುಟುಂಬದಲ್ಲಿ ಅಚಲವಾಗಿದ್ದು ಅದರ ಸಂರಕ್ಷಣೆಯ ಕಾಳಜಿಯಿರುತ್ತಿದ್ದರೆ ಅಮೇರಿಕದಲ್ಲಿ ವಿವಾಹ ವಿಚ್ಛೇದನವು ಈ ಮಟ್ಟಕ್ಕೆ ಏರುತ್ತಿರಲಿಲ್ಲ. ಯೂರೋಪಿನಲ್ಲಿ ನಾವು ಕಂಡಂತೆ ವಿವಾಹ ಸಂಬಂಧ ಮತ್ತು ಗೃಹ ವಾತಾವರಣದಿಂದ ಸ್ತ್ರೀಯು ದೂರ ಓಡುತ್ತಿರಲಿಲ್ಲ. ಮಾತೃತ್ವದ ಕುರಿತು ನಾವು ಈಗಾಗಲೇ ಹೇಳಿದ್ದೇವೆ. ಆಕೆಯು, ಆಧುನಿಕ ಸ್ತ್ರೀಗೆ ಹೊಸ ಅನುಭವಗಳನ್ನು ನೀಡಿದ ಉದ್ಯೋಗದಲ್ಲಿ ನಿರತಳಾದಾಗ ಮಾತೃತ್ವದ ಹೊಣೆ ನಿರ್ವಹಣೆಗೆ ಅಗತ್ಯವಿರುವ ಮಾನಸಿಕ ಮತ್ತು ದೈಹಿಕ ಸ್ಥೈರ್ಯವು ಅಲಭ್ಯವಾಗುತ್ತದೆ. ದುಡಿದು ಬಳಲಿದ ಸ್ತ್ರೀಯೋರ್ವಳ ನರಗಳಿಗೆ ನೈಜ ಮಾತೃತ್ವ ನಿರ್ವಹಣೆಯ ಶಕ್ತಿಯಿರಲಾರದು. ಹೆಚ್ಚಿನ ಹೊಣೆನಿರ್ವಹಿಸುವ ಮಾನಸಿಕ ಬಲವೂ ಆಕೆಗಿರಲಾರದು.

ಆನಂದ ಮತ್ತು ಘನತೆಯನ್ನು ಹೊರತು ಪಡಿಸಿದರೆ ಮಾನವಕುಲಕ್ಕೆ ಬೇರೆ ಯಾವ ಲಾಭವಾಯಿತು? ಪಾರ್ಲಿಮೆಂಟ್ ಮತ್ತು ಸಚಿವ ಸಂಪುಟದಲ್ಲಿರುವ ಕೆಲವಾರು ಸ್ತ್ರೀಯರಿಗೆ ಜಾಗತಿಕ ಸಮಸ್ಯೆಗಳ ಪರಿಹಾರ ಸಾಧ್ಯವಾಯಿತೇ? ಕಚೇರಿ ಮತ್ತು ಕಾರ್ಖಾನೆ ಹಾಗೂ ವ್ಯಾಪಾರೀ ಕೇಂದ್ರಗಳ ಯಾವ ಸಮಸ್ಯೆಗಳು ಪರಿಹಾರವಾಗಿವೆ? ಪಾರ್ಲಿಮೆಂಟಿನಲ್ಲಿ ಭಾಷಣ ಮತ್ತು ಕಚೇರಿಗಳಲ್ಲಿ ಅಧಿಕೃತ ಕೆಲಸದ ಹೊರತು ಸ್ತ್ರೀಯರಿಗೆ ಯೋಗ್ಯವಾದ ಬೇರೆಯಾವ ಕೆಲಸವೂ ಇಲ್ಲವೇ? ನಿರ್ದಿಷ್ಟ ಧ್ಯೇಯದಿಂದ ಸಂತಾನಗಳನ್ನು ಸರಿಯಾದ ರೀತಿಯಲ್ಲಿ ಬೆಳೆಸಿ, ಅವರನ್ನು ಕಳವಳ ಮತ್ತು ನಿರ್ಲಕ್ಷ್ಯಕ್ಕೆ ಬಲಿಯಾಗದ ಉತ್ತಮ ಪೌರರನ್ನಾಗಿ ಮಾಡುವುದು; ಇದು ಸಮಾಜದಲ್ಲಿ ಸ್ತ್ರೀಯು ನಿರ್ವಹಿಸಬೇಕಾದಂತಹ ಕಾರ್ಯವಲ್ಲವೇ? ಪಾರ್ಲಿಮೆಂಟ್ ಭವನದಲ್ಲಿ ಕೈಚಪ್ಪಾಳೆ, ನೃತ್ಯ, ವೇದಿಕೆ ಮತ್ತು ಸಾರ್ವಜನಿಕ ಕೂಟಗಳಲ್ಲಿ ಪ್ರೀತ್ಯಾದರಗಳು ಲಭಿಸುವಾಗ ಸ್ತ್ರೀಯು ಆನಂದಾತಿರೇಕದಿಂದ ಸ್ವಯಂ ಮೈಮರೆಯುತ್ತಾಳೆ. ಆದರೆ ತತ್ಪರಿಣಾಮವಾಗಿ ಮಾತೃಪಾಲನೆಯಿಲ್ಲದಂತಹ ಅನಾಥ ಮಾನವ ಪೀಳಿಗೆ ಬೆಳೆಯುವುದಿದ್ದರೆ ಆ ಉಲ್ಲಾಸ ಆನಂದಗಳಿಗೆ ಈ ಜೀವನದಲ್ಲಿ ಯಾವ ಬೆಲೆಯಿದೆ? ಅದು ಮಾನವ ಹೃದಯಗಳನ್ನು ಆಂತರಿಕ ಸಂಘರ್ಷಗಳಿಂದ ಸಂರಕ್ಷಿಸುವ ಪ್ರೀತಿಯ ಒರತೆಯನ್ನು ಕಂಡು ಹಿಡಿಯಲಾಗದ ಪೀಳಿಗೆಯಾಗಬಹುದು. ತನ್ನ ಜೀವನ ಮತ್ತು ಸಾಮರ್ಥ್ಯಗಳನ್ನು ಮಾನವೀಯತೆಯ ನಿರ್ಮಾಣಕ್ಕಾಗಿ ಮುಡಿಪಾಗಿಟ್ಟ ಓರ್ವ ಮಾತೆಗಲ್ಲದೆ ಆ ರೀತಿಯ ಬೀಜವನ್ನು ಚಿಗುರಿಸಲು ಸಾಧ್ಯವಿಲ್ಲ!

ನಾವು ಸ್ತ್ರೀಯರೊಂದಿಗೆ ಕಟುವಾಗಿ ವರ್ತಿಸಬಾರದೆಂಬುದು ನಿಜ. ಜೀವನದ ಸುಖಭೋಗ ಮತ್ತು ಸ್ವಾಭಿಮಾನಗಳಿಂದ ಆಕೆಯನ್ನು ತಡೆಯುವುದೂ ಸರಿಯಲ್ಲ. ಆದರೆ

ಸ್ತ್ರೀ ಯಾ ಪುರುಷನಿಗೆ ಜೀವನದಲ್ಲಿ ಯಥೇಷ್ಟ ಸುಖ ಅನುಭವಿಸಲು ಅಥವಾ ಸ್ವೇಚ್ಛೆಯಂತೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಮಗೆ ಜೀವನದಲ್ಲಿ ಅವಕಾಶವೆಲ್ಲಿದೆ? ಅಹಂಕಾರ ತಲೆಗೇರಿದಾಗ ನಾವು ಸ್ವಾರ್ಥಚಿಂತನೆಯಿಂದ ಎಲ್ಲವನ್ನೂ ಮರೆತು ಬಿಡುತ್ತೇವೆ, ಅದರ ಪರಿಣಾಮವೇನಾಗುವುದು? ಅದು ನಮ್ಮನ್ನು ಸಂಕಷ್ಟ ಮತ್ತು ದೌರ್ಭಾಗ್ಯಕ್ಕೆ ಎಸೆಯುತ್ತದೆ. ನಮ್ಮ ದುರ್ನಡತೆ ಮತ್ತು ಅಹಂಕಾರಗಳಿಂದ ನಾವು ತೊಳಲಾಡುತ್ತೇವೆ! ಹೀಗಲ್ಲವೇ ಪರಿಣಾಮ? ಈ ಸಂಕಷ್ಟಕ್ಕೀಡಾದ ಪೀಳಿಗೆಯಲ್ಲಿ ಸ್ತ್ರೀಯರೂ ಪುರುಷರೂ ಇದ್ದಾರೆ. ಭೂಮಿಯ ಶಾಶ್ವತ ವರ್ಗವೆಂಬ ನೆಲೆಯಲ್ಲಿ ಅದರ ಕೆಲವಾರು ಮಂದಿಯ ಭೋಗವಿಲಾಸಗಳಿಗಾಗಿ ಭಾವೀ ಪೀಳಿಗೆಗಳನ್ನು ದುರಂತ ಕೂಪಕ್ಕೆ ಎಸೆಯಬೇಕೇ? ಅದು ಸ್ತ್ರೀ ಸ್ವಾತಂತ್ರ್ಯ ಸಮಸ್ಯೆಯ ಪರಿಹಾರ ಮಾರ್ಗವೇ?

ಮಾನವಕುಲವನ್ನು ಪೀಳಿಗೆಗಳಾಗಿ ವಿಂಗಡಿಸದೆ ಒಂದು ಶ್ರೇಣಿಯೆಂದು ಭಾವಿಸುವ ಇಸ್ಲಾಮೀ ದೃಷ್ಟಿಕೋನವು ಆಕ್ಷೇಪಾರ್ಹವಾಗಿದೆಯೇ? ಪ್ರತಿಯೊಂದು ಪೀಳಿಗೆಯೂ ಸುದೀರ್ಘವಾದ ಆ ಶ್ರೇಣಿಯ ಅಬೇಧ್ಯ ಕೊಂಡಿಗಳಾಗಿವೆ. ಸಮಸ್ತ ಪೀಳಿಗೆಗಳ ಕಲ್ಯಾಣವೇ ಅದರ ಧ್ಯೇಯ. ಪುರುಷ ಸಮೂಹದ ಸುಖಾಭಿಲಾಷೆಗಳಿಗನುಗುಣವಾಗಿ ಉಳಿದ ಪೀಳಿಗೆಗಳನ್ನು ಗಂಡಾಂತರಕ್ಕೆ ದೂಡಲು ಅದು ಸಿದ್ಧವಿಲ್ಲ.

ಇಸ್ಲಾಮ್ ಸುಖಭೋಗದ ಎಲ್ಲ ಮಾರ್ಗ ಮತ್ತು ರೂಪಗಳನ್ನು ನಿಷೇಧಿಸುತ್ತಿದ್ದರೆ ಅದನ್ನು ಆಕ್ಷೇಪಿಸಬಹುದಾಗಿತ್ತು. ಹಾಗೆಯೇ ನೈಸರ್ಗಿಕ ಭಾವನೆಗಳ ಪೋಷಣೆಯನ್ನು ತಡೆದು ಅವುಗಳನ್ನು ದಮನಿಸುತ್ತಿದ್ದರೆ ಖಂಡಿತ ಅದನ್ನು ಆಕ್ಷೇಪಿಸಬಹುದಾಗಿದ್ದಿತು.

ಆದರೆ ಇಸ್ಲಾಮ್ ಹಾಗೆ ಮಾಡಿದೆಯೇ? ಇದರ ಉತ್ತರವನ್ನು ಮುಂದಿನ ಅಧ್ಯಾಯದಲ್ಲಿ ನೋಡೋಣ.

❖

# ಇಸ್ಲಾಮ್ ಮತ್ತು ಇಂದ್ರಿಯ ನಿಗ್ರಹ

ಪಾಶ್ಚಾತ್ಯ ಮನೋವಿಜ್ಞಾನಿಗಳು ಧರ್ಮದ ಕುರಿತು ಹೀಗೆನ್ನುತ್ತಾರೆ: ಧರ್ಮವು ಮಾನವನ ಜೈವಿಕ ಶಕ್ತಿಯನ್ನು ನಿಗ್ರಹಿಸಿ, ಅಪರಾಧ ಪ್ರಜ್ಞೆಯಿಂದ ಆತನ ಜೀವನವನ್ನು ಸಂಕುಚಿತಗೊಳಿಸುತ್ತದೆ. ಮುಖ್ಯವಾಗಿ, ಆ ಅಪರಾಧ ಪ್ರಜ್ಞೆಗೆ ಎಲ್ಲ ಧರ್ಮ ವಿಶ್ವಾಸಿಗಳೂ ಗುರಿಯಾಗಿದ್ದಾರೆ. ನಾವು ಮಾಡುವ ಪಾಪಗಳಿಂದ ಮುಕ್ತಿ ಪಡೆಯಬೇಕಾದರೆ ಜೀವನದ ಸುಖಗಳನ್ನೆಲ್ಲ ತ್ಯಜಿಸಬೇಕೆಂದು ಅವರು ನಂಬುತ್ತಾರೆ. ಧರ್ಮವನ್ನು ಅವಲಂಬಿಸಿದ್ದ ಸುದೀರ್ಘ ಕಾಲದಲ್ಲಿ ಯೂರೋಪು ಅಂಧಕಾರದಲ್ಲಿ ಮುಳುಗಿತ್ತು. ಧರ್ಮದ ಪೊಳ್ಳು ಬಂಧನಗಳನ್ನು ಕಡಿದುಕೊಂಡಾಗ ಅದು ಮಾನಸಿಕ ಸ್ವಾತಂತ್ರ್ಯ ಗಳಿಸಿತು. ಉದ್ಯೋಗ ಮತ್ತು ಉತ್ಪಾದನಾ ರಂಗದಲ್ಲಿ ಯೂರೋಪು ಶೀಘ್ರವಾಗಿ ಮುನ್ನಡೆಯಿತು.

ಅವರು ಪ್ರಶ್ನಿಸುತ್ತಾರೆ: "ಹೀಗಿರುತ್ತಾ ನಾವು ಪುನಃ ಧರ್ಮದೆಡೆಗೆ ಮರಳಬೇಕೆಂದು ಒತ್ತಾಯಿಸುತ್ತೀರಾ? ಪ್ರಗತಿಪರರಾದ ನಾವು ಸ್ವತಂತ್ರಗೊಳಿಸಿದ ಮಾನವ ಮನಸ್ಸನ್ನು ಸಂಕೋಲೆಗಳಿಂದ ಬಂಧಿಸಿ, ಉಕ್ಕೇರುತ್ತಿರುವ ಯುವಶಕ್ತಿಯನ್ನು ಹಲಾಲ್-ಹರಾಮ್‌ಗಳ ವಜ್ರಮುಷ್ಟಿಯಲ್ಲಿ ಬಿಗಿದು ಉಸಿರುಗಟ್ಟಿಸಲಿಕ್ಕಾಗಿ ಪ್ರಯತ್ನಿಸುತ್ತೀರಾ?"

*****

ಯೂರೋಪು ಅದರ ಧರ್ಮದ ಕುರಿತು ಏನು ಬೇಕಿದ್ದರೂ ಹೇಳಲಿ. ನಮಗೆ ಅದು ಸಮಸ್ಯೆಯಲ್ಲ. ಯಾಕೆಂದರೆ ಧರ್ಮದ ಕುರಿತು ನಾವಿಲ್ಲಿ ಚರ್ಚಿಸುತ್ತಿಲ್ಲ. ಕೇವಲ ಇಸ್ಲಾಮ್ ನಮ್ಮ ಚರ್ಚಾ ವಿಷಯವಾಗಿದೆ.

ಇಸ್ಲಾಮ್ ಜೈವಿಕ ಶಕ್ತಿಯನ್ನು ನಿಗ್ರಹಿಸುತ್ತಿದೆಯೇ? ಇಲ್ಲವೇ ಎಂಬುದನ್ನು ವಿಶ್ಲೇಷಿಸುವುದಕ್ಕಿಂತ ಮುಂಚೆ ನಿಗ್ರಹವೆಂದರೇನೆಂದು ನೋಡೋಣ. ಯಾಕೆಂದರೆ, ಪಾಮರರು ಮತ್ತು ಅನುಕರಿಸುವವರ ಮಾತಂತಿರಲಿ, ವಿದ್ಯಾವಂತರೇ ನಿಗ್ರಹ ಎಂಬ ಪದವನ್ನು ಅಪಾರ್ಥಮಾಡಿ, ತಪ್ಪಾಗಿ ಬಳಸುತ್ತಿದ್ದಾರೆ.

ಹೆಚ್ಚಿನವರು ಭಾವಿಸಿರುವಂತೆ, ನಿಗ್ರಹವೆಂದರೆ ನೈಸರ್ಗಿಕ ಕ್ರಿಯೆಗಳಿಂದ ದೂರವುಳಿಯುವುದಲ್ಲ. ಭಾವನೆಗಳ ದಮನವೂ ಅಲ್ಲ. ಬದಲಾಗಿ ಸಹಜ ಭಾವನೆಗಳನ್ನು ಹೀನವೆಂದು ಭಾವಿಸುವುದರಿಂದ ಅದು ಉದ್ಭವಿಸುತ್ತದೆ. ಮಾನವ ಮನದಲ್ಲಿ ಅಂತಹ ಭಾವನೆಗಳು ಅಂಕುರಿಸುವುದನ್ನೂ ಮನಸ್ಸು ಅದರಲ್ಲಿ ಲೀನವಾಗುವುದನ್ನೂ ತಪ್ಪೆಂದು ನಂಬುವುದು. ಈ ಅರ್ಥದಲ್ಲಿ ನಿಗ್ರಹವು ಸುಪ್ತ ಮನಸ್ಸಿಗೆ ಸಂಬಂಧಿಸಿದ ಸಮಸ್ಯೆಯಾಗಿದೆ.

ನೈಸರ್ಗಿಕ ಕ್ರಿಯೆಯ ಈಡೇರಿಕೆಯಿಂದ ಅದು ಪರಿಹಾರವಾಗಲಾರದು. ಈ ಕ್ರಿಯೆಯು ಹೀನ ಮತ್ತು ನಿಷಿದ್ಧವೆಂದು ನಂಬುವ ಮಾನವನು, ಅದನ್ನು ದಿನಂಪ್ರತಿ ಇಪ್ಪತ್ತುಬಾರಿ ಪುನರಾವರ್ತಿಸಿದರೂ ಆತನು 'ನಿಗ್ರಹ'ವನ್ನು ಅನುಭವಿಸುತ್ತಾನೆ. ಯಾಕೆಂದರೆ ಪ್ರತಿಬಾರಿಯೂ ಆತನು ಮಾಡಿದ ಮತ್ತು ಮಾಡಬೇಕಾಗಿದ್ದ ಕ್ರಿಯೆಗಳು ಆತನ ಮನಸ್ಸಿನಲ್ಲಿ ಸಂಘರ್ಷಿಸುತ್ತವೆ. ಪ್ರಜ್ಞೆ ಮತ್ತು ಸುಪ್ತಪ್ರಜ್ಞೆಗಳ ಈ ಜಗ್ಗಾಟವೇ ಮಾನಸಿಕ ಅಸ್ವಸ್ಥತೆ ಮತ್ತು ಸಂಕೀರ್ಣತೆಗೆ ಪ್ರೇರಕವಾಗುತ್ತದೆ. ಇಂದ್ರಿಯ ನಿಗ್ರಹಕ್ಕೆ ನೀಡಿರುವ ಈ ವ್ಯಾಖ್ಯಾನವು ನಮ್ಮ ಸ್ವಂತದ್ದಲ್ಲ. ಜೀವನವನ್ನು ಸಂಪೂರ್ಣವಾಗಿ ಇಂತಹ ವಿಷಯಗಳ ಅಧ್ಯಯನಕ್ಕಾಗಿ ವ್ಯಯಿಸಿದ 'ಫ್ರಾಯ್ಡ್' ನೇ ಹಾಗೆ ಹೇಳಿದ್ದಾನೆ. ಮಾನವ ಶಕ್ತಿಯನ್ನು ನಿಗ್ರಹಿಸುತ್ತದೆಂಬ ಕಾರಣಕ್ಕಾಗಿ ಧರ್ಮವನ್ನು ಉಗ್ರವಾಗಿ ಖಂಡಿಸಿದ್ದಂತಹ ಫ್ರಾಯ್ಡ್! ಆತನು ತನ್ನ Three Contributions to the Sexual Theory (ಲೈಂಗಿಕ ಸಿದ್ಧಾಂತಕ್ಕೆ ಮೂರು ಕೊಡುಗೆಗಳು) ಎಂಬ ಗ್ರಂಥದ 82ನೇ ಪುಟದಲ್ಲಿ ಹೀಗೆ ಬರೆದಿದ್ದಾನೆ: ಸುಪ್ತಪ್ರಜ್ಞೆಯ ಮಟ್ಟದಲ್ಲಿರುವ ಈ ನಿಗ್ರಹ ಮತ್ತು ನೈಸರ್ಗಿಕ ಕರ್ಮ ಚ್ಯುತಿಗಳಲ್ಲಿರುವ ಈ ಅಜಗಜಾಂತರವನ್ನು ಸ್ಪಷ್ಟಗೊಳಿಸಬೇಕಾದುದು, ನಮ್ಮ ಕರ್ತವ್ಯವಾಗಿದೆ. ಎರಡನೇಯದು ಕೇವಲ 'ಕರ್ಮ ನಿರ್ವಹಣೆ'ಯಾಗಿದೆ.

ಇಂದ್ರಿಯ ನಿಗ್ರಹವೆಂದರೆ ನೈಸರ್ಗಿಕ ಭಾವನೆಗಳನ್ನು ಮ್ಲೇಚ್ಛವೆಂದು ಪರಿಗಣಿಸುವುದಾಗಿದೆಯೇ ಹೊರತು ಕರ್ಮವನ್ನು ಒಂದು ನಿರ್ದಿಷ್ಟ ಅವಧಿಯ ತನಕ ಮುಂದೂಡುವುದಲ್ಲವೆಂದು ನಮಗೆ ಇದರಿಂದ ವ್ಯಕ್ತವಾಯಿತು. ಇನ್ನು ನಾವು ಇಸ್ಲಾಮಿನಲ್ಲಿರುವ 'ನಿಗ್ರಹ'ವನ್ನು ಪರಿಶೀಲಿಸೋಣ.

ಸಹಜ ಭಾವನೆಗಳನ್ನರಿತು, ಅಂಗೀಕರಿಸಿ, ಪ್ರಜ್ಞೆ ಮತ್ತು ಚಿಂತನೆಯಲ್ಲಿ ಅದರ ಸ್ಥಾನವನ್ನು ಇಸ್ಲಾಮಿನಂತೆ ವ್ಯವಸ್ಥೆಗೊಳಿಸಿದ ಧರ್ಮ ಲೋಕದಲ್ಲಿ ಬೇರೊಂದಿಲ್ಲ. ಕುರ್‌ಆನ್ ಹೇಳುತ್ತದೆ: "ಜನರಿಗೆ ಇಂದ್ರಿಯಾಭಿಲಾಷೆಗಳಾದ- ಸ್ತ್ರೀಯರು, ಮಕ್ಕಳು, ಚಿನ್ನ- ಬೆಳ್ಳಿಗಳರಾಶಿ, ಉತ್ತಮ ಕುದುರೆಗಳು, ಜಾನುವಾರುಗಳು ಮತ್ತು ಕೃಷಿ ಭೂಮಿ- ಇವುಗಳನ್ನು ಅತ್ಯಾಕರ್ಷಕವಾಗಿ ಮಾಡಲಾಗಿದೆ..." (ಆಲೆಇಮ್ರಾನ್: 14)

ಪ್ರಸ್ತುತ ವಾಕ್ಯದಲ್ಲಿ ಲೌಕಿಕ ಸುಖಗಳ ಎಲ್ಲ ವರ್ಗಗಳನ್ನೂ ಎತ್ತಿ ಹೇಳಲಾಗಿದೆ. ಇಸ್ಲಾಮ್ ಅವುಗಳನ್ನು ಅಂಗೀಕರಿಸಿ ಮಾನವ ದೃಷ್ಟಿಯಲ್ಲಿ ಅವು ಆಕರ್ಷಕ ವಾಸ್ತವಿಕತೆಗಳೆಂದು ಒಪ್ಪಿದೆ. ಸ್ವಂತ ನೆಲೆಯಲ್ಲಿ ಅವುಗಳನ್ನು ವಿರೋಧಿಸುವುದಿಲ್ಲ. ಆ ಸುಖಭೋಗಗಳ ಕುರಿತು ಆಲೋಚಿಸುವುದು ತಪ್ಪೆಂದೂ ಭಾವಿಸುವುದಿಲ್ಲ.

ಆದರೆ ಮಾನವರು ಈ ಸುಖಭೋಗಗಳ ಹಿಂದೆ, ಆತ್ಮ ನಿಯಂತ್ರಣ ವಿಲ್ಲದೇ

ಅವುಗಳ ಗುಲಾಮರಾಗುವುದಕ್ಕೆ ಇಸ್ಲಾಮ್ ಅನುಮತಿಸುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಜೀವನದ ಬುನಾದಿಯು ಭದ್ರವಾಗಿರಲಾರದು. ನಿರಂತರ ಪ್ರಗತಿಯತ್ತ ಸಾಗುತ್ತಿರುವ ಮಾನವಕುಲಕ್ಕೆ ಅದರ ಶುದ್ಧ ಪ್ರಕೃತಿಯಲ್ಲಿ ಉಳಿಯಲೂ ಸಾಧ್ಯವಿಲ್ಲ. ಸುಖಾನಂದಗಳಲ್ಲಿ ಮೈಮರೆತರೆ ಅದರ ಜೀವಶಕ್ತಿಯೆಲ್ಲವೂ ಸೋರಿ ಹೋಗುವುದು. ಅದು ಅಧೋಗತಿಗೆ ಮರಳಿ ಪಾಶವೀ ಅಧಃಪತನಕ್ಕೆ ಪ್ರೇರಕವಾಗಬಹುದು.

ನಿಜ. ಇಸ್ಲಾಮ್ ಮಾನವರನ್ನು ಪಶುಮಟ್ಟಕ್ಕೆ ಇಳಿಯಗೊಡುವುದಿಲ್ಲ. ಆದರೆ ಇದಕ್ಕೂ ಸುಪ್ತ ಮನಸ್ಸಿನ ನಿಗ್ರಹಕ್ಕೂ ಭಾರೀ ವ್ಯತ್ಯಾಸವಿದೆ. ಅರ್ಥಾತ್ ಇಂತಹ ಭಾವನೆಗಳನ್ನು ಸ್ವಯಂ ಹೀನವೆಂದು ಭಾವಿಸಿ, ಪಾವಿತ್ರ್ಯ ಮತ್ತು ಶ್ರೇಷ್ಠತೆಗಾಗಿ ಆ ಭಾವನೆಗಳಿಂದಲೂ ದೂರವಿರಲು ಪ್ರಯತ್ನಿಸುವಂತಹ ನಿಗ್ರಹ.

ಮಾನವ ಮನದೊಂದಿಗೆ ಇಸ್ಲಾಮಿನ ಧೋರಣೆ ಹೀಗಿದೆ: ಎಲ್ಲ ನೈಸರ್ಗಿಕ ಭಾವನೆಗಳನ್ನು ಇಸ್ಲಾಮ್ ಮೂಲಭೂತವಾಗಿ ಅಂಗೀಕರಿಸುತ್ತದೆ. ಅದು ಸುಪ್ತಪ್ರಜ್ಞೆಯ ಮಟ್ಟದಲ್ಲಿಯೇ ಅವನ್ನು ನಿಗ್ರಹಿಸುವುದಿಲ್ಲ. ಒಂದು ಸೂಕ್ತ ಮಿತಿಯ ತನಕ ಸುಖ ಸವಿಯಲು ಅದು ಅನುಮತಿಸುತ್ತದೆ. ಅದೇ ವೇಳೆ ವ್ಯಕ್ತಿ ಯಾ ಸಮಾಜಕ್ಕೆ ಹಾನಿಕರವಾಗದಿರಲಿಕ್ಕಾಗಿ ಒಂದು ನಿರ್ದಿಷ್ಟ ಮಿತಿಯಲ್ಲಿ ಅವುಗಳನ್ನು ನಿಯಂತ್ರಿಸುತ್ತದೆ.

ಸುಖಭೋಗಗಳಲ್ಲಿ ಮುಳುಗುವುದರಿಂದ ವ್ಯಕ್ತಿಯ ಜೈವಿಕ ಶಕ್ತಿಯು ಅದರ ಸ್ವಾಭಾವಿಕ ಬೆಳವಣಿಗೆಯನ್ನು ತಲಪುವುದಕ್ಕಿಂತ ಮುಂಚೆಯೇ ನಿಂತು ಬಿಡುತ್ತದೆ. ಆತನು ಅವುಗಳ ದಾಸ ಮತ್ತು ಆಜ್ಞಾನುವರ್ತಿಯಾಗಿ ಮಾರ್ಪಡುತ್ತಾನೆ. ಅದು ಆತನ ಗಮನ ಮತ್ತು ಪರಿಶ್ರಮದ ಏಕೈಕ ವಿಚಾರವಾಗುವುದು. ಮಾತ್ರವಲ್ಲದೇ ಕಾಲಕ್ರಮೇಣ ಅದು ಆತನ ಮುಗಿಯದ ಪೀಡೆ ಮತ್ತು ಶಾಪವಾಗಿ ಪರಿಣಮಿಸುವುದು. ಅದು ಶಮನಿಸಲಾಗದ ಅಶಾಂತ ದಾಹವಾಗಿ ಅವನನ್ನು ಕಾಡುವುದು.

ಸಮಾಜದ ಬೆಳವಣಿಗೆಗಾಗಿ ಸೃಷ್ಟಿಕರ್ತನು ದಯಪಾಲಿಸಿದ ಜೈವಿಕ ಶಕ್ತಿಯು ನಂದಿ ಹೋಗುವುದು. ಒಂದು ತಾತ್ಕಾಲಿಕ ಧ್ಯೇಯಕ್ಕಾಗಿ ಶ್ರೇಷ್ಠವಾದ ಅನೇಕ ಧ್ಯೇಯಗಳನ್ನು ಕಡೆಗಣಿಸಲಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಕೌಟುಂಬಿಕ ಸಂಬಂಧಗಳು ನಾಶವಾಗುತ್ತವೆ. ಸಾಮಾಜಿಕ ಸಂಬಂಧಗಳು ಅಡಿಮೇಲಾಗುತ್ತವೆ. ಮಾನವೀಯ ಸಂಬಂಧಗಳು ಕೆಟ್ಟು ಸಮಾಜವನ್ನು ಪರಸ್ಪರ ಜೋಡಿಸುವ ಸಾಮಾನ್ಯ ಧ್ಯೇಯ ಅಥವಾ ಕೊಂಡಿಯಿಲ್ಲದೇ ನೂರಾರು ಚೂರುಗಳಾಗಿ ಛಿನ್ನಬಿನ್ನವಾಗುತ್ತದೆ.

ಈ ವಿನಾಶವನ್ನು ತಡೆಯುವ ನಿರ್ದಿಷ್ಟ ಮಿತಿಯೊಳಗಿದ್ದು ಜೀವನದ ಸುಖ ಭೋಗಿಸಲು ಇಸ್ಲಾಮ್ ಒಪ್ಪಿಗೆ ನೀಡುತ್ತದೆ. ಮಾತ್ರವಲ್ಲದೇ ಅದಕ್ಕೆ ಸ್ಪಷ್ಟ ಆಹ್ವಾನ ನೀಡುತ್ತದೆ. ಇಸ್ಲಾಮ್ ಕಟು ಭಾಷೆಯಲ್ಲಿ ಹೀಗೆ ಪ್ರಶ್ನಿಸುತ್ತದೆ:

"(ಪ್ರವಾದಿಗಳೇ) ಹೇಳಿರಿ: ಅಲ್ಲಾಹನು ತನ್ನ ದಾಸರಿಗಾಗಿ ಹೊರ ತಂದಿರುವ ಆ ವಸ್ತ್ರಾಲಂಕಾರಗಳನ್ನೂ ಪರಿಶುದ್ಧ ಆಹಾರ ಸಾಮಾಗ್ರಿಗಳನ್ನೂ ಅವರಿಗೆ ನಿಷಿದ್ಧ ಗೊಳಿಸಿದವನಾರು? (ಅಲ್ ಅಅ್‌ರಾಫ್: 32)

"ಐಹಿಕ ಜೀವನದಲ್ಲಿ ನಿನ್ನ ಪಾಲನ್ನು ನೀನು ಮರೆತು ಬಿಡಬಾರದು." (ಅಲ್ ಕಸಸ್: 77)

"ನಾವು ನಿಮಗೆ ದಯಪಾಲಿಸಿರುವ ಶುದ್ಧ ವಸ್ತುಗಳನ್ನು ಉಣ್ಣಿರಿ (ಅಲ್ ಅಅ್‌ರಾಫ್:160)

"ನೀವು ತಿನ್ನಿರಿ, ಕುಡಿಯಿರಿ, ಮತ್ತು ಮಿತಿಮೀರಬೇಡಿರಿ."(ಅಲ್ ಅಅ್‌ರಾಫ್: 31)

ಅಲ್ಲದೇ ಲೈಂಗಿಕ ಪ್ರಜ್ಞೆಯನ್ನು ಅಂಗೀಕರಿಸಿ-ಅದು ನಿಗ್ರಹದ ಹೆಸರಿನಲ್ಲಿ ಧರ್ಮಗಳನ್ನು ಟೀಕಿಸಲಾಗುತ್ತಿರುವ ಸಮಸ್ಯೆಯಲ್ಲವೇ-ಪ್ರವಾದಿವರ್ಯರು ಸ್ಪಷ್ಟವಾಗಿ ಹೀಗೆಂದಿದ್ದಾರೆ: "ನಿಮ್ಮ ಐಹಿಕ ಸೌಲಭ್ಯಗಳಲ್ಲಿ ಸುಗಂಧ ದ್ರವ್ಯ ಮತ್ತು ಹೆಣ್ಣು ನನಗೆ ಪ್ರಿಯವಾಗಿದೆ. ನಮಾಝ್‌ನಲ್ಲಿ ನನ್ನ ಕಣ್ತಣಿಯುತ್ತದೆ." (ಇಬ್ನು ಕಸೀರ್)

ಪ್ರವಾದಿ ಘೋಷಿಸಿದರು: "ಮಾನವನು ತನ್ನ ಬಾಳಸಂಗಾತಿಯೊಡನೆ ಲೈಂಗಿಕ ಸಂಬಂಧವನ್ನು ಬೆಳೆಸುವುದು ಪುಣ್ಯದಾಯಕವಾಗಿದೆ." ಅನುಚರರು ಅಚ್ಚರಿಯಿಂದ ಪ್ರಶ್ನಿಸಿದರು: "ನಮ್ಮಲ್ಲೋರ್ವನು ಆತನ ಲೈಂಗಿಕ ತೃಷೆಯನ್ನು ಶಮನಿಸಿದರೆ ಆತನಿಗೆ ಅದಕ್ಕಾಗಿ ಪುಣ್ಯವಿದೆಯೆಂದು ಹೇಳಿದಿರಾ? "ಆಗ ಪ್ರವಾದಿ(ಸ) ಹೇಳಿದರು: "ಆತನು ಅದನ್ನು ನಿಷಿದ್ಧ ಮಾರ್ಗದಲ್ಲಿ ಬಳಸುತ್ತಿದ್ದರೆ ಅದು ಅಪರಾಧವಾಗುತ್ತಿರಲಿಲ್ಲವೇ? ಹಾಗೆಯೇ ಸಭ್ಯ ಮಾರ್ಗದಲ್ಲಿ ಬಳಸಿದರೆ ಅದು ಪುಣ್ಯದಾಯಕವೂ ಹೌದು." (ಮುಸ್ಲಿಮ್)

ಹಾಗಿದ್ದರೆ ಇಸ್ಲಾಮಿನಲ್ಲಿ ನಿಗ್ರಹವಿಲ್ಲ. ಯೌವ್ವನವು ಅದಮ್ಯವಾದ ಲೈಂಗಿಕ ದಾಹದಿಂದ ಉತ್ತೇಜಿತವಾದಾಗ ಅದನ್ನು ಪಾಪವೆಂದು ಇಸ್ಲಾಮ್ ತಿಳಿಯುವುದಿಲ್ಲ. ಅದನ್ನು ನೀಚವೆಂದು ಭಾವಿಸಿ ಅದರಿಂದ ದೂರವಿರಲು ಆಜ್ಞಾಪಿಸುವುದಿಲ್ಲ.

ಇಸ್ಲಾಮ್ ಈ ಯುವಕರೊಡನೆ ಭಾವನೆಗಳನ್ನು ನಿಗ್ರಹಿಸುವ ಬದಲಾಗಿ ಸ್ವಂತ ಪ್ರಜ್ಞೆ ಮತ್ತು ಇಚ್ಛೆಯಿಂದ ನಿಯಂತ್ರಿಸಲು ವಿನಂತಿಸುತ್ತದೆ. ಅಥವಾ ಭಾವನೆಗಳನ್ನು ಕಾರ್ಯಗತಗೊಳಿಸಲಿಕ್ಕೆ ಸೂಕ್ತ ಸಂದರ್ಭದ ತನಕ ಕಾಯಬೇಕು. ಇದು ಫ್ರ್ಯಾಡ್‌ನ ಮಾತಿನಲ್ಲಿಯೇ ನಿಗ್ರಹವಲ್ಲ. ನಿಗ್ರಹದಲ್ಲಿರುವಂತೆ ಇಲ್ಲಿ ನರನಾಡಿಗಳನ್ನು ಪೀಡಿಸಲಿಕ್ಕಿಲ್ಲ. ನಿಗ್ರಹದಂತೆ ಮಾನಸಿಕ ಅಸ್ವಾಸ್ಥ್ಯ ಮತ್ತು ಕ್ಲಿಷ್ಟತೆಗಳಿಗೆ ಅದು ಪ್ರೇರಕವಾಗುವುದಿಲ್ಲ.

ಮಾನವರ ಸುಖಭೋಗಗಳನ್ನು ತಡೆಯಲಿಕ್ಕಾಗಿ ಭಾವನೆಗಳ ಈ ನಿಯಂತ್ರಣದ ಆಹ್ವಾನವನ್ನು ಇಸ್ಲಾಮ್ ಸ್ವಯಂ ರಚಿಸಿಕೊಂಡದ್ದಲ್ಲ. ಇದೋ, ಇಸ್ಲಾಮ್ ಮತ್ತು

ಇಸ್ಲಾಮೇತರ ಪದ್ಧತಿಗಳ ಇತಿಹಾಸವು ನಮ್ಮ ಮುಂದೆ ತೆರೆದಿದೆ. ಭಾವನೆಗಳನ್ನು ನಿಯಂತ್ರಿಸಲಾಗದ, ಧರ್ಮಬದ್ಧವಾದ ಸುಖಿಗಳಲ್ಲಿ ಕೆಲವನ್ನು ತ್ಯಜಿಸಲಾಗದ ಸಮಾಜದಿಂದ ತನ್ನ ಅಸ್ತಿತ್ವವನ್ನು ಎಂದೂ ಉಳಿಸಿಕೊಳ್ಳಲಾಗಲಿಲ್ಲ. ಹಾಗೆಯೇ ಇತಿಹಾಸವು ಇನ್ನೊಂದೆಡೆ ನಮ್ಮೊಡನೆ ಹೀಗೆ ಹೇಳುತ್ತದೆ: ಕಷ್ಟಗಳನ್ನು ಸಹಿಸುವ ತರಬೇತಿಯಿಲ್ಲದ, ಸುಖಾನಂದಗಳನ್ನು ಅಗತ್ಯಕಂಡಾಗ ಕೆಲವಾರು ಗಂಟೆ, ದಿನ ಅಥವಾ ವರ್ಷಗಳ ತನಕ ಮುಂದೂಡುವ ಶಕ್ತಿಯಿಲ್ಲದ ಯಾವುದೇ ಜನತೆಗೆ ಸ್ವಾವಲಂಬಿಯಾಗಿರಲು ಸಾಧ್ಯವಾಗಿಲ್ಲ.

ಇಸ್ಲಾಮ್ ಉಪವಾಸವನ್ನು ನಿರ್ಣಯಿಸಿರುವುದರಲ್ಲಿ ಅಡಕವಾಗಿರುವ ಯುಕ್ತಿಯನ್ನು ಇಲ್ಲಿ ತಿಳಿಯಬಹುದು. ಆಧುನಿಕವಾದಿಗಳು ಏನೋ ದೊಡ್ಡ ಸಂಶೋಧನೆ ಮಾಡಿದಂತೆ ಪ್ರಲಾಪಿಸುತ್ತಾರೆ: "ಇದೆಂತಹ ಮೌಢ್ಯ! ದೇಹವನ್ನು ಹಸಿವು ದಾಹಗಳಿಂದ ಪೀಡಿಸಿ, ಆಹಾರ ಪಾನೀಯ, ಮೈಥುನಾದಿಗಳಿಂದ ತಡೆಯುವ ಆ ಸಂಪ್ರದಾಯಕ್ಕೆ ಏನರ್ಥ? ಅದರಲ್ಲೇನಾದರೂ ಸಾಫಲ್ಯವಿರುತ್ತಿದ್ದರೆ ಚಿಂತಿಲ್ಲ. ಕೆಲವು ಕಪೋಲಕಲ್ಪಿತ ನಿಯಮಗಳ ಪಾಲನೆಯಲ್ಲದೆ ಅದರಲ್ಲಿ ಯಾವುದೇ ಯುಕ್ತಿ ಧ್ಯೇಯವೂ ಇಲ್ಲ."

ಆದರೆ......... ನಿಯಂತ್ರಣಗಳಿಲ್ಲದಿದ್ದರೆ ಅವನೆಂತಹ ಮಾನವ? ತನ್ನ ಅಭಿಲಾಷೆಗಳನ್ನು ಕೆಲವು ಗಂಟೆಗಳ ಮಟ್ಟಿಗೂ ತಡೆಹಿಡಿಯಲಾರದವನು ಮಾನವನೆನಿಸುವುದಾದರೂ ಹೇಗೆ? ಭೂಮಿಯಲ್ಲಿ ಕೆಡುಕುಗಳ ವಿರುದ್ಧ ಸೆಣಸುವ ಸ್ಥೈರ್ಯ ಅವನಲ್ಲಿ ಉದ್ಭವಿಸುವುದು ಹೇಗೆ? ಆ ಹೋರಾಟಕ್ಕೆ ಖಂಡಿತವಾಗಿಯೂ ಕೆಲವೊಂದು ತ್ಯಾಗಗಳನ್ನು ಸಹಿಸಬೇಕಾಗಿದೆ.

ಪೌರ್ವಾತ್ಯ ಲೋಕದಲ್ಲಿರುವ ಉಪವಾಸ ಮತ್ತು ಮಾನವ ಮನಸ್ಸನ್ನು ತರಬೇತುಗೊಳಿಸುವ ಇತರ ನಿಯಂತ್ರಣ ಕಾರ್ಯಕ್ರಮಗಳನ್ನು ತುಚ್ಛೀಕರಿಸುವ ಕಮ್ಯೂನಿಸ್ಟರಿಗೆ, ತನು-ಮನವನ್ನು ಪೀಡಿಸುವ ಕಠಿಣ ಹಿಂಸೆಗಳನ್ನು ಎದುರಿಸುವ ತರಬೇತಿ ದೊರೆಯದಿರುತ್ತಿದ್ದರೆ ಸ್ಟಾಲಿನ್‌ಗ್ರೇಡ್‌ನ ಘೋರ ಸಂಘರ್ಷವನ್ನು ಸ್ಥೈರ್ಯದಿಂದ ಎದುರಿಸಲು ಸಾಧ್ಯವಾಗುತ್ತಿತ್ತೇ?

ಅಥವಾ ಅವರು "ಒಮ್ಮೆ ಅನುಮತಿಸಿರುವುದನ್ನು ಪುನಃ ಈಗ ನಿಷೇಧಿಸುತ್ತಿದ್ದಾರೆಯೆ"? "ರಾಷ್ಟ್ರವು" ಆಜ್ಞಾಪಿಸುವಾಗ ಅದು ಅವರಿಗೆ ಅಂಗೀಕಾರಾರ್ಹವಾಗಿದೆ. ಯಾಕೆಂದರೆ ಸಾರ್ವಜನಿಕ ಅಧಿಕಾರ ಬಲದಿಂದ ತಕ್ಷಣವೇ ಶಿಕ್ಷೆ ನೀಡಲು ಅದಕ್ಕೆ ಸಾಧ್ಯವಿದೆ. ಆದರೆ ಅದೇ ವಿಷಯವನ್ನು ರಾಷ್ಟ್ರ ಮತ್ತು ಜೀವಿಗಳ ಸೃಷ್ಟಿಕರ್ತನಾಗಿರುವ ದೇವನು ಆಜ್ಞಾಪಿಸುವಾಗ ಅದು ನಿಷಿದ್ಧವಾಗಿದೆ.?

ಉಪವಾಸದ ಹೊರತು ಇಸ್ಲಾಮ್‌ನಲ್ಲಿರುವ ಇತರ ಆರಾಧನೆಗಳು ಯಾವುವು? ನಮಾಝೋ? ಅದಕ್ಕಾಗಿ ಓರ್ವ ನಿಷ್ಠಾವಂತ ಮುಸ್ಲಿಮನಿಗೆ ಎಷ್ಟು ಸಮಯ ಬೇಕಾದೀತು?

ಇಡೀ ಒಂದು ವಾರದಲ್ಲಿ ಅದಕ್ಕೆ ಒಂದು ಸಿನೆಮಾಕ್ಕೆ ವ್ಯಯಿಸುವ ಸಮಯವಾದರೂ ಬೇಕೇ? ದೇವನ ಭೇಟಿಗೆ ದೊರೆಯುವ ಆ ಅಮೂಲ್ಯ ಅವಕಾಶ; ಆತನಿಂದ ಸಹಾಯ ಪಡೆಯಲು, ಶಾಂತಿ ಯಾಚಿಸಲು, ಸರ್ವಸ್ವವನ್ನೂ ಆತನಲ್ಲಿ ಅರ್ಪಿಸಿ ನೆಮ್ಮದಿ ಸಾಧಿಸುವ ಆ ಸದವಕಾಶ; ಅಂತಹ ಸುಸಂದರ್ಭವನ್ನು ಮಾನಸಿಕ ವೈಕಲ್ಯ ಮತ್ತು ಆತ್ಮ ಕಲುಷಿತ ವ್ಯಕ್ತಿಯಲ್ಲದೇ ಇನ್ನಾರಾದರೂ ಕಳೆದುಕೊಂಡಾರೇ?

ಧರ್ಮವು ತನ್ನ ಅನುಯಾಯಿಗಳನ್ನು ಸಂಕಷ್ಟಕ್ಕೀಡು ಮಾಡುತ್ತಿದೆ ಮತ್ತು ಊಟ ನಿದ್ರೆಗಳಲ್ಲಿ ದುಃಸ್ವಪ್ನದಂತೆ ಹಿಂಬಾಲಿಸುವ ಪಾಪ ಪ್ರಜ್ಞೆಗೆ ಗುರಿಪಡಿಸುತ್ತಿದೆಯೆಂಬ ಆರೋಪಗಳಿಗೂ ಇಸ್ಲಾಮಿಗೂ ಯಾವುದೇ ಸಂಬಂಧವಿಲ್ಲ. ಇಸ್ಲಾಮ್ ಅದರಿಂದ ಬಹಳಷ್ಟು ದೂರದಲ್ಲಿದೆ! ಅದು ಶಿಕ್ಷೆಯ ಕುರಿತು ಪ್ರಸ್ತಾವಿಸುವುದಕ್ಕಿಂತ ಮುಂಚಿತವಾಗಿ ಪಾಪ ವಿಮೋಚನೆ ನೀಡುವ ಧರ್ಮವಾಗಿದೆ.

ಇಸ್ಲಾಮಿನ ದೃಷ್ಟಿಯಲ್ಲಿಪಾಪವೆಂದರೆ, ಮಾನವರನ್ನು ಸದಾಕಾಲವೂ ಕಾಡುತ್ತಿರುವ ದುಃಸ್ವಪ್ನವಲ್ಲ. ಬೆಳಕಿನ ಸೋಂಕಿಲ್ಲದ ಗಾಢಾಂಧಕಾರವೂ ಅಲ್ಲ. ಆದಮರ ಪ್ರಥಮ ಪಾಪವು ಮಾನವಕುಲದ ಮೇಲೆ ತೂಗಾಡುತ್ತಿರುವ ಖಡ್ಗವೂ ಅಲ್ಲ. ಅದಕ್ಕಾಗಿ ಇತರ ಮಾನವರು ಪ್ರಾಯಶ್ಚಿತ್ತ ಮತ್ತು ಶುದ್ಧಿ ಮಾಡಿಸಿಕೊಳ್ಳಬೇಕಾದ ಅಗತ್ಯವಿಲ್ಲ. "ತರುವಾಯ ಆದಮರು ತನ್ನ ಪ್ರಭುವಿನಿಂದ ಕೆಲವು ವಚನಗಳನ್ನು ಕಲಿತರು, (ಪಶ್ಚಾತ್ತಾಪ ಪಟ್ಟರು) ಆಗ ಅವರ ಪಶ್ಚಾತ್ತಾಪವನ್ನು ಅಲ್ಲಾಹ್ ಸ್ವೀಕರಿಸಿದನು."

(ಅಲ್‌ಬಕರಃ:37)

ಆದಮರ ಮಕ್ಕಳು ತಂದೆಯಂತೆಯೇ ಇದ್ದಾರೆ. ತಪ್ಪು ಮಾಡಿದರೆ ದಿವ್ಯ ಕಾರುಣ್ಯದ ನೆರಳು ಅವರ ಮೇಲೆಯೂ ಬೀಳುವುದು. ಅವರ ಸಾಮರ್ಥ್ಯಕ್ಕೆ ಮೀರಿದ ವಿಷಯವನ್ನು ಅಲ್ಲಾಹನು ಅವರಿಂದ ಅಪೇಕ್ಷಿಸುವುದಿಲ್ಲ. "ಸಾಮರ್ಥ್ಯಕ್ಕಿಂತ ಹೆಚ್ಚಿನ ಯಾವ ಕಾರ್ಯಕ್ಕಾಗಿಯೂ ಅಲ್ಲಾಹನು ಯಾವ ಆತ್ಮವನ್ನೂ ನಿರ್ಬಂಧಿಸುವುದಿಲ್ಲ."

(ಅಲ್‌ಬಕರಃ:286)

"ಎಲ್ಲ ಮಾನವರಿಗೂ ತಪ್ಪು ಸಂಭವಿಸುತ್ತದೆ. ತಪ್ಪುಗಾರರಲ್ಲಿ ಪಶ್ಚಾತ್ತಾಪಪಡುವವರು ನಿಮ್ಮಲ್ಲಿ ಅತ್ಯಂತ ಶ್ರೇಷ್ಠರು." (ತಿರ್ಮಿದಿ)

ಗುಲಾಮರೊಂದಿಗೆ ಕರುಣೆ ತೋರಿಸುವ ಹಾಗೂ ಪಾಪ ವಿಮೋಚನೆಯ ಕುರಿತು ಕುರ್‌ಆನ್‌ನಲ್ಲಿ ಅನೇಕ ಕಡೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಅವುಗಳಲ್ಲಿ ಒಂದನ್ನು ಇಲ್ಲಿ ಉಲ್ಲೇಖಿಸುತ್ತೇನೆ. ಸಕಲ ಚರಾಚರಗಳನ್ನು ಆವರಿಸಿಕೊಂಡಿರುವ ಅಲ್ಲಾಹನ ಅನಂತ ವಿಶಾಲವಾದ ಕಾರುಣ್ಯವನ್ನು ಅದರಿಂದ ಸ್ಪಷ್ಟವಾಗಿ ಗ್ರಹಿಸಬಹುದು.

"ನಿಮ್ಮ ಪ್ರಭುವಿನ ಕ್ಷಮೆಯ ಕಡೆಗೆ ಮತ್ತು ಭೂಮಿ-ಆಕಾಶಗಳಷ್ಟು ವಿಶಾಲವಾಗಿರುವ ಸ್ವರ್ಗದ ಕಡೆಗೆ ಧಾವಿಸಿರಿ. ಅದು ದೇವಭಯವುಳ್ಳವರಿಗಾಗಿ ಸಿದ್ಧಗೊಳಿಸಲ್ಪಟ್ಟಿರುತ್ತದೆ. ಅವರು ಸ್ಥಿತಿವಂತರಾಗಿರುವಾಗಲೂ ದುಃಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತನ್ನು ಖರ್ಚು ಮಾಡುತ್ತಾರೆ; ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರರ ಅಪರಾಧಗಳನ್ನು ಕ್ಷಮಿಸುತ್ತಾರೆ - ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯವರು. ಅವರಿಂದ ಎಂದಾದರೂ ಯಾವುದಾದರೂ ಅಶ್ಲೀಲ ಕಾರ್ಯಗಳು ಸಂಭವಿಸಿಹೋದಾಗ ಅಥವಾ ಅವರು ಯಾವುದಾದರೂ ಪಾಪಕಾರ್ಯ ಮಾಡಿ ತಮ್ಮ ಮೇಲೆ ತಾವೇ ಅಕ್ರಮವೆಸಗಿಕೊಂಡಾಗ ಅವರಿಗೆ ತಕ್ಷಣವೇ ಅಲ್ಲಾಹನ ಸ್ಮರಣೆಯುಂಟಾಗಿ ಬಿಡುತ್ತದೆ ಮತ್ತು ಅವರು ಅವನೊಡನೆ ತಮ್ಮ ಅಪರಾಧಗಳಿಗೆ ಕ್ಷಮೆ ಯಾಚಿಸುತ್ತಾರೆ- ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸುವವರು ಇನ್ನಾರಿದ್ದಾರೆ?- ಮತ್ತು ಅವರು ತಿಳಿದೂ ತಿಳಿದೂ ತಾವು ಮಾಡಿದ ಅಪರಾಧದ ಬಗ್ಗೆ ಪಟ್ಟು ಹಿಡಿಯುವುದಿಲ್ಲ. ಅಂಥವರಿಗೆ ಅವರ ಪ್ರಭುವಿನ ಬಳಿ ಇರುವ ಪ್ರತಿಫಲವು ಕ್ಷಮೆ ಮತ್ತು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳಾಗಿವೆ. ಅಲ್ಲಿ ಅವರು ಸದಾಕಾಲವೂ ವಾಸಿಸುವರು. ಸತ್ಕರ್ಮ ಮಾಡುವವರಿಗೆ ಇರುವ ಪ್ರತಿಫಲವು ಎಷ್ಟೊಂದು ಉತ್ತಮ!"

(ಆಲೆ ಇಮ್ರಾನ್:133-136)

ದೇವನೇ! ದಾಸರೊಂದಿಗೆ ನಿನ್ನ ಕರುಣೆಯು ಅದೆಷ್ಟು ವಿಶಾಲ! ಜನರಲ್ಲಿ ಅಲ್ಲಾಹನ ಕರುಣೆಯನ್ನು ದರ್ಶಿಸುವ ಮಾನವನು ಖಂಡಿತವಾಗಿಯೂ ಭಾವಪರವಶನಾಗುತ್ತಾನೆ. ಆತನ ಮನಸ್ಸು ಕರಗದಿರಲಾರದು. ಯಾವಾಗ? ಯಾವಾಗ ಈ ಕರುಣೆ? ಅವರು ಪಾಪ ಮಾಡುತ್ತಿರುವಾಗ? ಆತನು ಕೇವಲ ಅವರ ಪಶ್ಚಾತ್ತಾಪವನ್ನು ಸ್ವೀಕರಿಸುವುದಲ್ಲ, ಕೇವಲ ಅವರನ್ನು ಪಾಪಮುಕ್ತಗೊಳಿಸುವುದಲ್ಲ; ಅವುಗಳೊಂದಿಗೆ ಅವರ ಮೇಲೆ ತನ್ನ ಪ್ರೀತಿ ಮತ್ತು ಕೃಪೆಯನ್ನೂ ಸುರಿಸುತ್ತಾನೆ; ಅವರನ್ನು ನೈಜ ಭಕ್ತರ ಸ್ಥಾನಕ್ಕೆ ಕೈ ಹಿಡಿದು ಮೇಲೇರಿಸುತ್ತಾನೆ!!

ಅಲ್ಲಾಹನ ಕ್ಷಮೆ ಮತ್ತು ಪಾಪ ವಿಮೋಚನೆಯ ಬಗ್ಗೆ ಇನ್ನಾವ ಸಂದೇಹವಿದೆ! ಈ ಕರುಣೆ ಮತ್ತು ಮನೋವೈಶಾಲ್ಯದಿಂದ ಆತನು ಅವರನ್ನು ಸಂಧಿಸುವಾಗ ಪಾಪದ ದುಃಸ್ವಪ್ನಕ್ಕೆ ಅವಕಾಶವೆಲ್ಲಿದೆ? ಮಾನವನ ಮನಸ್ಸನ್ನು ಹೊಡೆದೋಡಿಸುವ ಶಿಕ್ಷೆಯ ಬೆದರಿಕೆಯೆಲ್ಲಿದೆ? ಆಕಾಶದಷ್ಟು ವಿಶಾಲವಾದ ಆತನ ಕರುಣೆಯು ಆವರಿಸಲು ಅವರ ನಾಲಗೆಯಿಂದ ಹೃತ್ಪೂರ್ವಕವಾಗಿ ಹೊರಡುವ 'ಪಶ್ಚಾತ್ತಾಪ'ವೆಂಬ ಒಂದೇ ಮಾತು ಸಾಕು!

ನಮ್ಮ ಮಾತುಗಳಿಗೆ ಇನ್ನೂ ಹೆಚ್ಚಿನ ಸಮರ್ಥನೆಯ ಅಗತ್ಯವಿಲ್ಲ. ಆದರೂ ಪ್ರವಾದಿವರ್ಯರ ಒಂದು ಪವಿತ್ರ ವಚನವನ್ನು ಇಲ್ಲಿ ಉದ್ಧರಿಸುತ್ತೇನೆ. ಅದೊಂದು ಅದ್ಭುತ ದೃಷ್ಟಾಂತವಾಗಿದೆ. "ನನ್ನ ಆತ್ಮವು ಯಾರ ಹಸ್ತದಲ್ಲಿದೆಯೋ ಆತನಾಣೆ! ನೀವು ಪಾಪ ಮಾಡದಿದ್ದರೆ ಅಲ್ಲಾಹನು ನಿಮ್ಮನ್ನು ಉಚ್ಚಾಟಿಸಿ ಬೇರೊಂದು ಜನತೆಯನ್ನು ಇಲ್ಲಿ ತರುವನು. ಅವರು ಪಾಪ ಮಾಡುವರು. ಆ ಬಳಿಕ ಕ್ಷಮೆಯಾಚಿಸುವರು. ಆಗ ಅಲ್ಲಾಹನು ಅವರನ್ನು ಕ್ಷಮಿಸುವನು." (ಮುಸ್ಲಿಮ್)

ಹಾಗಿದ್ದರೆ, ಜನರನ್ನು ಮನ್ನಿಸುವುದು ಹಾಗೂ ಅವರ ಪಾಪಗಳನ್ನು ಕ್ಷಮಿಸುವುದೆಂಬುದು ಅಲ್ಲಾಹನ ಮೂಲಭೂತ ಉದ್ದೇಶವಾಗಿದೆ.

ಇನ್ನೊಂದು ಅಚ್ಚರಿದಾಯಕ ವಾಕ್ಯವನ್ನು ನೋಡಿರಿ:

"ನೀವು ಕೃತಜ್ಞದಾಸರಾಗಿದ್ದು ಸತ್ಯವಿಶ್ವಾಸದ ಮಾರ್ಗದಲ್ಲಿ ನಡೆಯುತ್ತಿದ್ದರೆ, ಅಲ್ಲಾಹ್ ನಿಮ್ಮನ್ನು ದಂಡಿಸುವನೇಕೆ? ಅಲ್ಲಾಹ್ ಮಹಾ ಗುಣಗ್ರಾಹಿಯೂ ಸರ್ವರ ಸ್ಥಿತಿಗತಿಗಳ ಬಗೆಗೆ ಪೂರ್ಣ ಜ್ಞಾನಿಯೂ ಆಗಿರುತ್ತಾನೆ." (ಅನ್ನಿಸಾ:147)

# ವಿಜ್ಞಾನ ಮತ್ತು ವಿಚಾರ ಸ್ವಾತಂತ್ರ್ಯ

ವಾಗ್ವಾದದ ಮಧ್ಯೆ ಅವರು ಹೇಳಿದರು: "ನೀವೋರ್ವ ಸ್ವತಂತ್ರ ಚಿಂತಕನಲ್ಲ."

"ಯಾಕೆ?" ನಾನು ಪ್ರಶ್ನಿಸಿದೆ.

"ನೀವು ದೇವನ ಅಸ್ತಿತ್ವವನ್ನು ನಂಬುತ್ತೀರಲ್ಲವೇ"

"ಹೌದು" "ಆತನಿಗಾಗಿ ನಮಾಝ್ ಮತ್ತು ಉಪವಾಸ ನಿರ್ವಹಿಸುತ್ತಿರುವಿರಲ್ಲವೇ?"

"ಹಾಗಾದರೆ ನೀವೋರ್ವ ಸ್ವತಂತ್ರ ವಿಚಾರಿಯಲ್ಲ." ಅವರು ಹೇಳಿದರು.

ನಾನು ಪುನಃ ಪ್ರಶ್ನಿಸಿದೆ. "ಯಾಕೆ?" ಅವರು ಹೇಳಿದರು: "ನೀವು ನಿರಾಧಾರವಾದ ಕಟ್ಟುಕಥೆಯನ್ನು ನಂಬುತ್ತೀರಿ!"

ನಾನು ಪ್ರಶ್ನಿಸಿದೆ: "ನೀವು? ನೀವು ಯಾವುದನ್ನು ನಂಬುತ್ತೀರಿ? ಪ್ರಪಂಚ ಮತ್ತು ಜೀವವನ್ನು ಸೃಷ್ಟಿಸಿದವರಾರು?

"ನಿಸರ್ಗ"-ಅವರು ಹೇಳಿದರು.

"ನಿಸರ್ಗವೆಂದರೇನು?" ನಾನು ಪ್ರಶ್ನಿಸಿದೆ.

ಅವರು ಹೇಳಿದರು. "ಒಂದು ನಿಗೂಢ ಅನಂತ ಶಕ್ತಿ. ಆದರೆ ಅದರ ಬಾಹ್ಯ ಪ್ರಕ್ರಿಯೆಗಳು ಪಂಚೇಂದ್ರಿಯಗಳಿಗೆ ಗ್ರಾಹ್ಯವಾಗಿದೆ."

ಆಗ ನಾನು ಹೇಳಿದೆ: "ನೀವು ಸುಗ್ರಾಹ್ಯವಾದ ಶಕ್ತಿಯೊಂದನ್ನು ನನಗೆ ನೀಡಲಿಕ್ಕಾಗಿ, ನನ್ನ ನಿಗೂಢ ಶಕ್ತಿಯ ನಂಬಿಕೆಯನ್ನು ತಡೆಯುತ್ತಿರುವಿರೆಂದು ನಾನು ಭಾವಿಸಿದ್ದೆ. ಆದರೆ ಒಂದು ನಿಗೂಢ ಶಕ್ತಿಯ ಬದಲಿಗೆ ಇನ್ನೊಂದು ನಿಗೂಢಶಕ್ತಿಯನ್ನು ನೀಡುವುದಿದ್ದರೆ, ನನಗೆ ಅಭಯ, ಶಾಂತಿ ಮತ್ತು ನೆಮ್ಮದಿ ನೀಡುವ, ನಾನು ನಂಬುವ ನನ್ನ ದೇವನನ್ನು ನನ್ನಿಂದ ಯಾಕೆ ಕಸಿದುಕೊಳ್ಳ ಬೇಕು. ಪರ್ಯಾಯವಾಗಿ ಅದೇ ವೇಳೆ ನೀವು ಅದಕ್ಕೆ ಪ್ರತಿಯಾಗಿ ನನ್ನ ಕರೆಗೆ ಓಗೊಡದ, ನನ್ನ ಪ್ರಾರ್ಥನೆಯನ್ನು ಆಲಿಸದಂತಹ ದೇವನನ್ನು ನೀಡುತ್ತಿರುವಿರಿ!?

ಸಂಕ್ಷಿಪ್ತದಲ್ಲಿ ಇದು ಪ್ರಗತಿವಾದಿಗಳ ಮತ್ತು ಸ್ವತಂತ್ರ ವಿಚಾರಧಾರೆಯ ಸ್ಥಿತಿ. ಸ್ವತಂತ್ರ ವಿಚಾರವೆಂದರೆ ದೇವನಿಷೇಧ! ಇಸ್ಲಾಮಿನಲ್ಲಿ ದೇವನಿಷೇಧ ವಿಲ್ಲದಿದ್ದರೆ ಅದರಲ್ಲಿ ಸ್ವತಂತ್ರ ವಿಚಾರವೂ ಇಲ್ಲ! ಅವರೊಡನೆ ನಮಗೆ ಕೇಳಲಿಕ್ಕಿರುವುದಿಷ್ಟೆ. ಇಸ್ಲಾಮಿನಲ್ಲಿ ದೇವ ನಿಷೇಧದ ಅಗತ್ಯವೇನು?

ಅದು ಯೂರೋಪಿನಲ್ಲಿ ಕೆಲವು ಪ್ರಾದೇಶಿಕ ಕಾರಣಗಳಿಂದಾಗಿ ಅನಿವಾರ್ಯವಾಗಿರ

ಬಹುದು. ಆದರೆ ಎಲ್ಲೆಡೆ ಹಾಗೆಯೇ ಇರಬೇಕೆಂದೇನೂ ಇಲ್ಲ. ಐರೋಪ್ಯ ಚರ್ಚ್ ಒಂದೆಡೆಯಲ್ಲಿ ಕ್ರೈಸ್ತ ಧರ್ಮಾನುಯಾಯಿಗಳಿಗೆ ಭಿನ್ನ ಚಿತ್ರವನ್ನು ನೀಡಿತು; ಇನ್ನೊಂದೆಡೆಯಲ್ಲಿ, ವೈಜ್ಞಾನಿಕ ಆಂದೋಲನಗಳ ಕತ್ತುಹಿಸುಕಿ, ವಿಜ್ಞಾನಿಗಳನ್ನು ಸುಟ್ಟು, ಮರ್ದಿಸಿ, ಹಿಂಸಿಸಿತು; ಅದೇ ವೇಳೆ ಕಟ್ಟುಕಥೆಗಳನ್ನು ದೇವವಾಕ್ಯವೆಂದು ಮಾನವನ ಮೇಲೆ ಹೊರಿಸಿತು. ಇವೆಲ್ಲ ಒಟ್ಟು ಸೇರಿ ಯೂರೋಪಿನ ಮುಕ್ತ ವಿಚಾರವಾದಿಗಳನ್ನು ನಾಸ್ತಿಕರನ್ನಾಗಿ ಮಾಡಿತು. ವಸ್ತುತಃ ಅದು ನಾಸ್ತಿಕತೆಯನ್ನು ಬಲಾತ್ಕಾರವಾಗಿ ಹೇರಿತು. ದೇವವಿಶ್ವಾಸದ ನೈಜ ಆಸಕ್ತಿ ಮತ್ತು ವೈಜ್ಞಾನಿಕ ತಥ್ಯಗಳಲ್ಲಿರುವ ವಿಶ್ವಾಸದ ನಡುವೆ ಅವರೆಲ್ಲರನ್ನು ವಿಚ್ಛಿದ್ರಗೊಳಿಸಿತು.

ಈ ವಿಷಮ ಪರಿಸ್ಥಿತಿಯಿಂದ ಪಾರಾಗಲಿಕ್ಕಾಗಿ ಜನರು ನೈಸರ್ಗಿಕ ವಿಚಾರವಾದವನ್ನು ಅವಲಂಬಿಸಿದರು. ಐರೋಪ್ಯ ಬುದ್ಧಿಜೀವಿಗಳು ಚರ್ಚ್‌ನೊಡನೆ ಹೇಳಿದರು: "ಯಾವ ದೇವನನ್ನು ಆರಾಧಿಸಬೇಕೆಂದು ನೀನು ನಮ್ಮೊಡನೆ ಹೇಳುತ್ತಿರುವೆಯೋ, ಯಾವುದರ ಹೆಸರಿನಲ್ಲಿ ನಮ್ಮ ಮೇಲೆ ಭಾರೀ ತೆರಿಗೆ ಮತ್ತು ದಬ್ಬಾಳಿಕೆಗಳನ್ನು ಹೇರುತ್ತಿರುವೆಯೋ, ಮೂಢನಂಬಿಕೆ ಮತ್ತು ಊಹಾಪೋಹಗಳನ್ನು ನಂಬಲು ನಿರ್ಬಂಧಿಸುತ್ತಿರುವೆಯೋ, ಯಾವುದರ ಹೆಸರಿನಲ್ಲಿ ನಮ್ಮೊಡನೆ ಸನ್ಯಾಸ, ಆರಾಧನೆ ಮತ್ತು ಪೌರೋಹಿತ್ಯವನ್ನು ಅಂಗೀಕರಿಸಬೇಕೆಂದು ವಿನಂತಿಸುತ್ತಿರುವೆಯೋ, ಆ ದೇವನನ್ನು ನೀನೇ ಇರಿಸಿಕೋ....... ನಾವು ಒಂದು ಹೊಸ ದೇವನನ್ನು ನಂಬುವವರಿದ್ದೇವೆ. ಅದಕ್ಕೆ ಈ ಹಿಂದೆ ಹೇಳಿದ ಅನೇಕ ಗುಣಗಳಿವೆ. ಆದರೆ ಜನರು ಆರಾಧಿಸುವ ಚರ್ಚ್ ಅದಕ್ಕಿಲ್ಲ. ಅದು ಲೌಕಿಕ, ವೈಚಾರಿಕ ಅಥವಾ ನೈತಿಕ ಕರ್ತವ್ಯಗಳನ್ನು ಮಾನವರ ಮೇಲೆ ಹೇರುವುದಿಲ್ಲ. ಅದರ ಮುಂದೆ ಅವರು ಎಲ್ಲ ರೀತಿಯ ಬಂಧನಗಳಿಂದ ಮುಕ್ತರು."

ಆದರೆ, ಇಸ್ಲಾಮಿನಲ್ಲಿ ನಮಗೆ ದೇವ ನಿಷೇಧದ ಅಗತ್ಯವೇನು? ಈ ಸಿದ್ಧಾಂತದಲ್ಲಿ ಮಾನವ ಬುದ್ಧಿಯನ್ನು ಬೆದರಿಸುವ ಸಂಕೀರ್ಣತೆಗಳಿಲ್ಲ; ಏಕದೇವ, ಕೇವಲ ಆತನೇ ಸರ್ವ ಚರಾಚರಗಳ ಸೃಷ್ಟಿಕರ್ತ; ಆತನೆಡೆಗೆ ಅವರೆಲ್ಲರ ಮರುಳುವಿಕೆ; ಆತನಿಗೆ ಭಾಗೀದಾರರಿಲ್ಲ; ಆತನು ಏಕನು; ಆತನ ವಚನಗಳಿಗೆ ಬದಲಾವಣೆಯಿಲ್ಲ, ಅದು ಸರಳ ಸುಂದರ ತತ್ವ; ಅದರಲ್ಲಿ ಯಾರಿಗೂ- ನಿಸರ್ಗವಾದಿಗಳಿಗೂ ನಾಸ್ತಿಕರಿಗೂ ಭಿನ್ನಾಭಿಪ್ರಾಯಕ್ಕೆ ಆಸ್ಪದವಿಲ್ಲ.

ಯೂರೋಪಿನಲ್ಲಿದ್ದಂತೆ ಇಸ್ಲಾಮಿನಲ್ಲಿ 'ಪುರೋಹಿತ'ರಿಲ್ಲ. ಇಲ್ಲಿ ಧರ್ಮವು ಸರ್ವಸಾಮಾನ್ಯವಾಗಿದೆ. ಪ್ರತಿಯೊಬ್ಬರೂ ತಂತಮ್ಮ ನೈಸರ್ಗಿಕ, ವೈಚಾರಿಕ ಮತ್ತು ನೈತಿಕ ಸಾಮರ್ಥ್ಯಕ್ಕನುಸಾರವಾಗಿ ಅದರ ಪ್ರಯೋಜನ ಪಡೆಯಬಹುದು. ಮುಸ್ಲಿಮರೆಂಬ ನೆಲೆಯಲ್ಲಿ ಎಲ್ಲರೂ ಸಮಾನರು. "ಪ್ರತಿಯೊಬ್ಬರಿಗೂ ಅವರ ಕರ್ಮಗಳನ್ವಯ ಸ್ಥಾನವಿದೆ."

"ಅಲ್ಲಾಹನೊಂದಿಗೆ ಅತ್ಯಂತ ಭಯಭಕ್ತಿಯಿರುವವನೇ ಆತನ ಬಳಿ ಅತ್ಯಂತ ಗೌರವಾರ್ಹನು" ಆತನೋರ್ವ ಇಂಜಿನಿಯರ್, ಅಧ್ಯಾಪಕ, ಕಾರ್ಮಿಕ, ಶಿಲ್ಪಿ ಹೀಗೆ ಏನೇ

ಆಗಿದ್ದರೂ ಸರಿ. ಧರ್ಮವೆಂದರೆ ಇಂತಹ ಉದ್ಯೋಗವಲ್ಲ. ಪುರೋಹಿತರ ಮಧ್ಯಸ್ಥಿಕೆಯಿಲ್ಲದೆಯೇ ಆರಾಧನೆಗಳು ಪೂರ್ಣವಾಗುತ್ತವೆ. ಇಸ್ಲಾಮಿನ ಕರ್ಮಶಾಸ್ತ್ರ ಮತ್ತು ಕಾನೂನಿಗೆ ಸಂಬಂಧಿಸಿದ ಅಂಶಗಳ ಬಗ್ಗೆ ಹೇಳುವುದಿದ್ದರೆ, ಇಸ್ಲಾಮಿನ ಸಂವಿಧಾನವೆಂಬ ನೆಲೆಯಲ್ಲಿ ಕೆಲವರು ಅದರಲ್ಲಿ ಪರಿಣತಿ ಪಡೆದಿರಬಹುದು. ಆದರೆ ಅವರಿಗೆ ಇತರೆಲ್ಲ ರಾಷ್ಟ್ರಗಳಲ್ಲಿರುವ ಸಂವಿಧಾನ ತಜ್ಞರ ಮತ್ತು ಕಾನೂನು ವಿಶಾರದರ ಸ್ಥಾನವಷ್ಟೇ ಇರುವುದು. ಈ ವೈಶಿಷ್ಟ್ಯದಿಂದಾಗಿ ಅವರಿಗೆ ಜನರ ಮೇಲೆ ವಿಶೇಷ ಹಕ್ಕು, ಅಧಿಕಾರ ಅಥವಾ ವರ್ಗ ಹಿರಿಮೆಯಿಲ್ಲ. ಅವರು ರಾಷ್ಟ್ರದ ಕಾನೂನು ಸಲಹೆಗಾರರು ಮತ್ತು ವಿದ್ವಾಂಸರಾಗಿರುತ್ತಾರೆ. ಅವರು ತಮ್ಮ ಸಂಘಕ್ಕೆ "ಉನ್ನತ ವಿದ್ವಾಂಸ ಮಂಡಳಿ" ಮುಂತಾದ ಹೆಸರುಗಳನ್ನಿರಿಸಿಕೊಳ್ಳಬಹುದು. ಅವರಿಗೆ ಆ ಸ್ವಾತಂತ್ರ್ಯವಿದೆ. ಆದರೆ ಯಾರ ಮೇಲೆಯೂ ಅವರಿಗೆ ಅಧಿಕಾರವಿಲ್ಲ. ಅವರಿಗೆ ಕಾನೂನು ಮೀರಿ ಜನರ ವ್ಯವಹಾರಗಳಲ್ಲಿ ಹಸ್ತಕ್ಷೇಪ ನಡೆಸುವ ಅಧಿಕಾರವಿಲ್ಲ.

'ಅಲ್ ಅಝ್ಹರ್' ಒಂದು ಧಾರ್ಮಿಕ-ಶೈಕ್ಷಣಿಕ ಸಂಸ್ಥೆಯಾಗಿದೆ. ಆದರೆ ಅದು ವಿದ್ವಾಂಸರನ್ನು ಸುಟ್ಟು ಕೊಲ್ಲುವ ಅಥವಾ ಶಿಕ್ಷಿಸುವ ಅಧಿಕಾರ ಕೇಂದ್ರವಲ್ಲ. ಧರ್ಮದ ಬಗ್ಗೆ ಜನರಲ್ಲಿರುವ ತಪ್ಪು ತಿಳುವಳಿಕೆ ಮತ್ತು ತಪ್ಪು ಅಭಿಪ್ರಾಯಗಳನ್ನು ಎತ್ತಿ ತೋರಿಸುವುದಷ್ಟೇ ಅವರ ಕೆಲಸ. ಅವರಿಗೆ ಆ ಸ್ವಾತಂತ್ರ್ಯವಿದೆ. ಹಾಗೆಯೇ ಧರ್ಮದ ಕುರಿತು ಅಝ್ಹರಿನ ವಿದ್ವಾಂಸರ ತಿಳುವಳಿಕೆ ಅಥವಾ ಅಭಿಪ್ರಾಯವು ಅಸಂಬದ್ಧವಾಗಿದ್ದರೆ, ಅದನ್ನು ಎತ್ತಿ ತೋರಿಸುವ ಹಕ್ಕು ಜನಸಾಮಾನ್ಯರಿಗೂ ಇದೆ. ಯಾಕೆಂದರೆ, ಇಸ್ಲಾಮ್ ಯಾವನಾದರೂ ವ್ಯಕ್ತಿ ಅಥವಾ ವರ್ಗದ ಏಕಸ್ವಾಮ್ಯವಲ್ಲ. ಅಗಾಧ ಜ್ಞಾನದಿಂದ ಸತ್ಯವನ್ನು ತಿಳಿದು ಆ ಪ್ರಕಾರ ಜೀವಿಸುವ ಮಂದಿಯನ್ನು ಜನರು ತಮ್ಮ ಸಂದೇಹ ನಿವಾರಣೆಗಾಗಿ ಸಮೀಪಿಸುತ್ತಾರೆ.

ಇಸ್ಲಾಮೀ ಆಡಳಿತವು ಸ್ಥಾಪಿಸಲ್ಪಟ್ಟಾಗ ಸರಕಾರೀ ಕಚೇರಿಗಳು ಮುಂಡಾಸುಗಳಿಂದಲೇ ತುಂಬಿರಲಾರವು. ಆಡಳಿತ ವ್ಯವಹಾರವು ಇಸ್ಲಾಮೀ ಕರ್ಮಶಾಸ್ತ್ರಕ್ಕನುಸಾರವಾಗಿರುವುದರ ಹೊರತು ಬೇರೇನೂ ಬದಲಾವಣೆಯಾಗಲಾರದು. ಅಲ್ಲಿಯೂ ಇಂಜಿನಿಯರಿಂಗ್‌ಗೆ ಸಂಬಂಧಿಸಿದ ವ್ಯವಹಾರಗಳನ್ನು ಇಂಜಿನಿಯರರೇ ನೋಡಿಕೊಳ್ಳುವರು. ವೈದ್ಯರು ವೈದ್ಯಕೀಯ ರಂಗದಲ್ಲಿಯೂ ಆರ್ಥಿಕ ತಜ್ಞರು - ಇಸ್ಲಾಮೀ ಆರ್ಥಿಕ ಪದ್ಧತಿಯು ಆಡಳಿತದ ನೀತಿಯಾಗಿದೆಯೆಂಬ ನೆಲೆಯಲ್ಲಿ - ಆರ್ಥಿಕ ರಂಗದಲ್ಲಿಯೂ ವ್ಯವಹರಿಸುವರು. ಹೀಗೆ ಪ್ರತೀಯೊಂದು ಖಾತೆಯಲ್ಲಿ ಪರಿಣತಿ ಪಡೆದವರು ಆಯಾ ಖಾತೆಯನ್ನು ನೋಡಿಕೊಳ್ಳುವರು. ಕೆಲಸ ಮಾಡುವ ಕೈಗಳು ಬದಲಾಗಲಾರವು. ಕೆಲಸದ ಸಿದ್ಧಾಂತವಷ್ಟೇ ಬದಲಾಗುವುದು.

ಇಸ್ಲಾಮೀ ಸಿದ್ಧಾಂತ ಅಥವಾ ವ್ಯವಸ್ಥೆಯಲ್ಲಿ ವಿಜ್ಞಾನದ ತಾತ್ವಿಕ ಯಾ ವ್ಯಾವಹಾರಿಕ ಹಾದಿಗೆ ತಡೆಯೊಡ್ಡುವ ಯಾವ ವಿಷಯವೂ ಇಲ್ಲ. ಇತಿಹಾಸವು ಅದಕ್ಕೆ ಸಾಕ್ಷಿಯಾಗಿದೆ.

ಯಾವುದಾದರೊಂದು ವೈಜ್ಞಾನಿಕ ತಥ್ಯವನ್ನು ಸಂಶೋಧಿಸಿದುದಕ್ಕಾಗಿ ಯಾವನೇ ವಿಜ್ಞಾನಿ ಅಥವಾ ವಿದ್ವಾಂಸ ನನ್ನು ಶಿಕ್ಷಿಸಿದ ಅಥವಾ ಸುಟ್ಟು ಹಾಕಿದ ಘಟನೆ ಇಸ್ಲಾಮಿೂ ಇತಿಹಾಸದಲ್ಲಿ ನಡೆಯಲಿಲ್ಲ. ಅಲ್ಲಾಹನೇ ಸರ್ವ ಚರಾಚರಗಳ ಸೃಷ್ಟಿಕರ್ತನೆಂಬ ಇಸ್ಲಾಮಿೂ ವಿಶ್ವಾಸಕ್ಕೆ ನೈಜ ವಿಜ್ಞಾನವು ವಿರೋಧಿಯಾಗುವುದಿಲ್ಲ. ದೇವನೆಡೆಗೆ ತಲಪಲಿಕ್ಕಾಗಿ ಭೂಮಿ-ಆಕಾಶಗಳ ವೀಕ್ಷಣೆ ಮತ್ತು ಅವುಗಳ ಸೃಷ್ಟಿ ವೈಚಿತ್ರ್ಯಗಳ ಕುರಿತು ಆಲೋಚಿಸಲು ಇಸ್ಲಾಮ್ ನೀಡಿರುವ ಆಹ್ವಾನವು ಅದಕ್ಕೆ ತಡೆಯಾಗಲಾರದು. ಹೆಚ್ಚೇಕೆ ನಾಸ್ತಿಕರಾಗಿದ್ದ, ಅನೇಕ ವಿಜ್ಞಾನಿಗಳು ನೈಜ ವೈಜ್ಞಾನಿಕ ಸಂಶೋಧನೆಗಳ ಮೂಲಕ ಆಸ್ತಿಕರಾಗಿದ್ದಾರೆ.

ಹೀಗಿರುತ್ತಾ, ಇಸ್ಲಾಮಿನಲ್ಲಿ ಮಾನವನನ್ನು ದೇವ ನಿಷೇಧದೆಡೆಗೊಯ್ಯುವಂಥದ್ದೇನಿದೆ? ಅದು ವಸಾಹತುಶಾಹೀ ದೊರೆಗಳ ಅಂಧಾನುಕರಣೆಯ ಭ್ರಮೆ ಮಾತ್ರವಾಗಿದೆ.

ನಮಗೆ ಆರಾಧನೆ ಮತ್ತು ವಿಶ್ವಾಸಗಳ ವಿರುದ್ಧವಾಗಿ ಬರೆಯುವ ಸ್ವಾತಂತ್ರ್ಯ ಬೇಕೆಂದು ಅವರು ಹೇಳುತ್ತಾರೆ. ಅವುಗಳನ್ನು ಜನರ ಮುಂದೆ ಹೀನಾಯಗೊಳಿಸಿ ಅದರಿಂದ ಮುಕ್ತರಾಗಬೇಕೆಂಬ ಕರೆ ನೀಡುವುದೇ ಅವರ ಉದ್ದೇಶವಾಗಿದೆ. ಆದರೆ ಅದು ಅವರು ಭಾವಿಸಿರುವಂತೆ ಸ್ವಯಂ ಒಂದು ಧ್ಯೇಯವಲ್ಲ. ಯೂರೋಪಿನಲ್ಲಿ ಅದು ಒಂದು ಧ್ಯೇಯದತ್ತ ಸಾಗುವ ಮಾರ್ಗವಾಗಿತ್ತು. ಜನರನ್ನು ಅನ್ಯಾಯಗಳಿಂದಲೂ ವಿಚಾರಗಳನ್ನು ಮೂಢನಂಬಿಕೆಗಳಿಂದಲೂ ವಿಮೋಚನೆ ಗೊಳಿಸುವ ಧ್ಯೇಯ. ಆದರೆ ಪ್ರಸ್ತುತ ಸ್ವಾತಂತ್ರ್ಯವು ಅವರಿಗೆ ಧರ್ಮದ ಆಶ್ರಯದಲ್ಲಿಯೇ ದೊರೆಯುವುದಿದ್ದರೆ?ಅನಂತರ ಅವರಿಗೆ ಬೇರೆಯಾವ ಧ್ಯೇಯ ಸಾಧಿಸಲಿಕ್ಕಿದೆ?

ಅವರ ಆಗ್ರಹವೇನೆಂದು ತಿಳಿದಿದೆಯೇ? ಯಾವುದೇ ನಿಯಂತ್ರಣ ಮತ್ತು ಅಡ್ಡಿ ಆತಂಕವಿಲ್ಲದ ಮೆರೆದಾಟ, ಲೈಂಗಿಕ ಅರಾಜಕತೆ. ಅದುವೇ ಸಮಸ್ಯೆಯ ಮೂಲ. ಅವರ ಆಗ್ರಹಗಳ ಗುಲಾಮತನಕ್ಕೆ ವೈಚಾರಿಕ ಅಂಶವು ಕೇವಲ ಒಂದು ತೆರೆಯಾಗಿದೆ. ಆದರೂ ನಾವು ಸ್ವತಂತ್ರ ಚಿಂತಕರೆಂದು ಅವರು ಡಂಗುರ ಸಾರುತ್ತಿದ್ದಾರೆ. ಗುಲಾಮರನ್ನು ಅನುಸರಿಸುವ ಹೊಣೆ ಇಸ್ಲಾಮಿಗಿಲ್ಲ. ಅದು ಆಗ್ರಹಾಭಿಲಾಷೆಗಳೂ ಸೇರಿದಂತೆ ಮಾನವರನ್ನು ಗುಲಾಮರಾಗಿಸಿ ಆಳುವ ಎಲ್ಲ ಅಧಿಕಾರ ಬಲಗಳಿಂದ ವಿಮೋಚನೆಯ ಕರೆಯನ್ನು ನೀಡುತ್ತದೆ.

******

ಇಸ್ಲಾಮಿನ ಆಡಳಿತ ಪದ್ಧತಿಯು ಸರ್ವಾಧಿಕಾರೀ ನೀತಿಯಿಂದ ಕೂಡಿದೆಯೆಂದು ಅವರು ಹೇಳುತ್ತಾರೆ. ಯಾಕೆಂದರೆ ಅದರಲ್ಲಿ ರಾಷ್ಟ್ರಕ್ಕೆ ವ್ಯಾಪಕ ಅಧಿಕಾರಗಳಿವೆ. ಧರ್ಮದ ತೆರೆಮರೆಯು ಅದನ್ನು ಇನ್ನಷ್ಟು ಹದಗೆಡಿಸುತ್ತದೆ. ಮಾನವನ ಮನಸ್ಸಿನ ಮೇಲೆ ಪ್ರಭಾವ ಬೀರುವ ಒಂದು ಪವಿತ್ರ ವಸ್ತುವೆಂಬ ನೆಲೆಯಲ್ಲಿ ಈ ಅಧಿಕಾರವು ಸರ್ವಾಧಿಪತ್ಯಕ್ಕೆ ತಿರುಗಲು ಬಹಳ ಸುಲಭವಿದೆ. ಹಾಗೆಯೇ ಬಹುಮಂದಿಯನ್ನು ಆ ಮೂಲಕ

ಬಹುಸುಲಭದಲ್ಲಿ ಮಂಕುಗೊಳಿಸ ಬಹುದಾಗಿದೆ. ಅದರೊಂದಿಗೆ ಅಭಿಪ್ರಾಯ ಸ್ವಾತಂತ್ರ್ಯ ಹೊರಟು ಹೋಗುವುದು. ಆಡಳಿತಗಾರರ ವಿರುದ್ಧ ಧ್ವನಿಯೆಬ್ಬಿಸುವವರಿಗೆ ಧರ್ಮದ್ರೋಹಿಗಳೆಂಬ ಹಣೆಪಟ್ಟಿ ಹಚ್ಚಲಾಗುವುದು.

ಧರ್ಮದ ವಿರುದ್ಧ ಈ ಆರೋಪಕ್ಕೆ ಯಾವುದು ಆಧಾರವಾಗಿರಬಹುದು? ಪ್ರಾಯಶಃ ಕುರ್‌ಆನಿನ ಈ ಮಾತುಗಳಾಗಿರಬಹುದೇ? "ಅವರು ತಮ್ಮ ಕಾರ್ಯಗಳನ್ನು ಪರಸ್ಪರ ಸಮಾಲೋಚಿಸಿ ಮಾಡುತ್ತಾರೆ." (ಅಶ್ಶುರಾ: 38)

"ಜನರ ಮಧ್ಯೆ ತೀರ್ಪು ನೀಡುವಾಗ ನ್ಯಾಯದೊಂದಿಗೆ ತೀರ್ಪು ನೀಡುತ್ತಾರೆ." (ಅನ್ನಿಸಾ:58)

ಅಥವಾ ಅಬೂಬಕರ್(ರ) ಮಾತುಗಳೇ?: "ನಾನು ಅಲ್ಲಾಹ್ ಮತ್ತು ಪ್ರವಾದಿಯನ್ನು ಧಿಕ್ಕರಿಸಿದರೆ ನೀವು ನನ್ನನ್ನು ಅನುಸರಿಸಬೇಕಾಗಿಲ್ಲ."

ಅಥವಾ ಉಮರ್‌ರ(ರ) ಮಾತುಗಳಾಗಿರಬಹುದೇ? "ನನ್ನಲ್ಲಿ ಏನಾದರೂ ತಪ್ಪು ಕಂಡುಬಂದರೆ ನೀವು ಅದನ್ನು ಸರಿಪಡಿಸಬೇಕು." ಆಗ ಓರ್ವ ಸಾಮಾನ್ಯ ಪ್ರಜೆ ಹೇಳುತ್ತಾರೆ: "ದೇವನಾಣೆ. ನಿಮ್ಮಲ್ಲೇನಾದರೂ ತಪ್ಪು ಕಂಡುಬಂದರೆ, ನಾವು ಅದನ್ನು ಖಡ್ಗದ ಮೊನೆಯಿಂದ ಸರಿಗೊಳಿಸುತ್ತೇವೆ."

ಹೌದು, ನಿಜ, ಧರ್ಮದ ಹೆಸರಿನಲ್ಲಿ ಅಕ್ರಮಗಳು ನಡೆದಿವೆ. ಅಂತಹ ಅನ್ಯಾಯಗಳು ಕೆಲವು ರಾಷ್ಟ್ರಗಳಲ್ಲಿ ಈಗಲೂ ನಡೆಯುತ್ತಿವೆ. ಆದರೆ ಈ ಲೋಕದಲ್ಲಿ ಕೇವಲ ಧರ್ಮವೇ ಅಕ್ರಮಗಳಿಗೆ ತೆರೆಮರೆಯಾಗಿದೆಯೆಂದು ಯಾರು ಹೇಳಿದರು? ಹಿಟ್ಲರನು ಅಕ್ರಮಗಳನ್ನು ಧರ್ಮದ ಹೆಸರಿನಲ್ಲಿ ನಡೆಸಿದನೇ? ಸ್ಟಾಲಿನ್! ಸ್ಟಾಲಿನ್‌ನ ಮರಣಾನಂತರ ಸ್ವಯಂ ರಶ್ಯನ್ ಪತ್ರಿಕೆಗಳೇ ಆತನೋರ್ವ ಸರ್ವಾಧಿಕಾರಿಯಾಗಿದ್ದನೆಂದು ಒಪ್ಪಿಕೊಂಡಿವೆ. ಎಂದೆಂದಿಗೂ ಮರುಕಳಿಸಲಾಗದಂತಹ ಪಾಶವೀ ಲಷ್ಕರೀ ಆಡಳಿತ ರಶ್ಯದಲ್ಲಿ ತಾಂಡವವಾಡಿತ್ತೆಂದು ಅವರು ಒಪ್ಪಿದ್ದಾರೆ. ಫ್ರಾಂಕೋ ಮತ್ತು ಮಾಲಾನ್‌ರು ದಕ್ಷಿಣ ಆಫ್ರಿಕದಲ್ಲಿಯೂ ಚಿಯಾಂಗ್ ಕೈಶೇಕ್‌ರ ರಾಷ್ಟ್ರೀಯ ಚೀನದಲ್ಲಿಯೂ, ಮಾವೋ ಕಮ್ಯೂನಿಸ್ಟ್ ಚೀನದಲ್ಲಿಯೂ ಮಾಡಿದ್ದೇನು?...... ಅವರೆಲ್ಲರನ್ನು ಧರ್ಮದ ಹೆಸರಲ್ಲಿ ಆಕ್ಷೇಪಿಸಲಾಗುತ್ತಿದೆಯೇ? ಧರ್ಮದ ಅಧಿಕಾರ ವ್ಯಾಪ್ತಿಯಿಂದ ಮುಕ್ತವಾದ ಆಧುನಿಕ ಯುಗವು ಇತಿಹಾಸದಲ್ಲಿಯೇ ಅತ್ಯಂತ ಭೀಕರ ಸರ್ವಾಧಿಕಾರವನ್ನು ಕಂಡಿತು. ಶ್ರೇಷ್ಠತೆಯಲ್ಲಿ ಧರ್ಮಕ್ಕಿಂತ ಏನೂ ಕಡಿಮೆಯಿಲ್ಲವೆನ್ನಲಾಗುತ್ತಿರುವ ಹಲವು 'ಇಝಮ್'ಗಳಿಗಾಗಿಯೇ ಹೊರತು ಧರ್ಮಕ್ಕೆ ಬೇಕಾಗಿಯಲ್ಲ.

ಸರ್ವಾಧಿಪತ್ಯಕ್ಕಾಗಿ ಯಾರೂ ವಾದಿಸಲಾರರು. ಸ್ವತಂತ್ರ ಬುದ್ಧಿ ಮತ್ತು ಆತ್ಮಸಾಕ್ಷಿಯಿರುವವರಾರೂ ಅದನ್ನು ಅಂಗೀಕರಿಸಲಾರರು. ಸ್ವೇಚ್ಛಾ ಭಾವನೆಗಳಿಗೆ ನಿಲುಕದ ವಾಸ್ತವಿಕ ಸತ್ಯವನ್ನು ಅಂಗೀಕರಿಸಬೇಕೆಂಬುದು ಅದರ ಅಪೇಕ್ಷೆಯಾಗಿದೆ.

ವಸ್ತುತ: ಉನ್ನತ ಆದರ್ಶಗಳೂ ಶೋಷಣೆಗೆ ಗುರಿ ಯಾಗಬಹುದು. ನಿಗೂಢ ಸ್ವಾರ್ಥ ಹಿತಾಸಕ್ತಿಗಳು ಅದರ ಹಿಂದೆ ಅವಿತುಕೊಳ್ಳಬಹುದು. ಫ್ರೆಂಚ್ ಕ್ರಾಂತಿಯ ವೇಳೆ ಸ್ವಾತಂತ್ರ್ಯದ ಹೆಸರಲ್ಲಿ ಅತಿ ಭೀಕರ ಹಿಂಸಾಕೃತ್ಯಗಳು ತಾಂಡವವಾಡಿದುವು. ಹಾಗಿದ್ದರೆ ನಾವು ಸ್ವಾತಂತ್ರ್ಯವೇ ಬೇಡವೆಂದು ಭಾವಿಸಬೇಕೇ? ಸಂವಿಧಾನದ ಹೆಸರಿನಲ್ಲಿ ಅನೇಕ ಮಂದಿ ನಿರಪರಾಧಿಗಳು ಸೆರೆಮನೆವಾಸ, ಮರ್ದನ ಮತ್ತು ಕೊಲೆಗೂ ಬಲಿಯಾಗಿದ್ದಾರೆ. ಹಾಗಿದ್ದರೆ ನಾವು ಸಂವಿಧಾನವನ್ನೇ ರದ್ದು ಗೊಳಿಸಬೇಕೇ? ಧರ್ಮದ ಹೆಸರಿನಲ್ಲಿ ಲೋಕದಲ್ಲಿ ಭೀಕರ ಅಕ್ರಮಗಳು ನಡೆದಿವೆಯೆನ್ನುವುದು ನಿಜ. ಆದರೆ ಅದು ಧರ್ಮವನ್ನು ನಿರಾಕರಿಸುವುದಕ್ಕೆ ಸಮರ್ಥನೆಯಾದೀತೇ? ಧಾರ್ಮಿಕ ಶಿಕ್ಷಣ ಮತ್ತು ನಿಯಮಗಳು ನಿಜವಾಗಿಯೂ ಅಕ್ರಮ-ಮರ್ದನಗಳಿಗೆ ಪ್ರೇರಕವಾಗಿದ್ದರೆ ನಾವು ಪ್ರಸ್ತುತ ಬೇಡಿಕೆಯನ್ನು ಅರ್ಥ ಮಾಡಬಹುದಿತ್ತು. ಆದರೆ ಶತ್ರುಗಳೂ ಸಮ್ಮತಿಸಿರುವ, ಸ್ವತಂತ್ರ ನ್ಯಾಯದ ಉತ್ತಮ ಮಾದರಿಯನ್ನು ಕೇವಲ ಮುಸ್ಲಿಮರಿಗೆ ಮಾತ್ರವಲ್ಲದೇ ಮುಸ್ಲಿಮರ ಬದ್ಧ ವೈರಿಗಳಿಗೂ ಕೊಡುಗೆಯಿತ್ತಿರುವಂತಹ ಇಸ್ಲಾಮಿನ ಮಟ್ಟಿಗೆ ಅದು ಸಮಂಜಸವಾದೀತೇ?

ಅಕ್ರಮ ಮತ್ತು ಕ್ರೂರ ದಬ್ಬಾಳಿಕೆಗಳ ಕಡೆಗೆ ಧರ್ಮವು ಕರೆ ನೀಡಿ ಸಂರಕ್ಷಿಸುತ್ತಿರುವ ಸ್ವಾತಂತ್ರ್ಯವನ್ನು ಗೌರವಿಸುವ ಜನತೆಯನ್ನು ಸಿದ್ಧ ಪಡಿಸುವುದೇ ಆ ಜನತೆಯು ಆಡಳಿತಗಾರರನ್ನು ಅನ್ಯಾಯವೆಸಗಬಿಡುವುದಿಲ್ಲ. ಆತನನ್ನು ಕಾನೂನುಬದ್ಧವಾದ ಅಧಿಕಾರ ಮಿತಿಯಲ್ಲಿರಿಸಲೂ ಅವರಿಗೆ ಸಾಧ್ಯವಿದೆ.

ಓರ್ವ ಅಕ್ರಮಿ ಆಡಳಿತಗಾರನನ್ನು ಹದ್ದು ಬಸ್ತಿನಲ್ಲಿಡುವುದನ್ನು ಜನತೆಯ ಕರ್ತವ್ಯವಾಗಿ ನಿರ್ಣಯಿಸಿರುವಂತಹ ಇಸ್ಲಾಮಿನ ವಿನಾ ಬೇರೊಂದಿರಲಾರದೆಂದು ನಾನು ಭಾವಿಸುತ್ತೇನೆ. ಪ್ರವಾದಿವರ್ಯರು(ಸ) ಹೇಳಿದ್ದಾರೆ: "ನಿಮ್ಮ ಪೈಕಿ ಯಾರಾದರೂ ಒಂದು ಕೆಡುಕನ್ನು ಕಂಡರೆ ಆತನು ಅದನ್ನು ತನ್ನ ಕೈಗಳಿಂದ ತಡೆಯಲಿ."........ (ಬುಖಾರಿ ಮುಸ್ಲಿಮ್)

"ಓರ್ವ ಅಕ್ರಮಿಯಾದ ಆಡಳಿತಗಾರನ ಮುಂದೆ ಸತ್ಯವನ್ನು ಬಹಿರಂಗವಾಗಿ ಹೇಳುವುದೇ ಅಲ್ಲಾಹನ ಬಳಿ ಅತ್ಯಂತ ಶ್ರೇಷ್ಠ ಜಿಹಾದ್ ಆಗಿದೆ."(ಅಬೂ ದಾವೂದ್)

ಈ ತತ್ವಗಳ ಬುನಾದಿಯಲ್ಲಿಯೇ ಜನರು ಉಸ್ಮಾನ್‌ರ(ರ) ವಿರುದ್ಧ ಸಿಡಿದೆದ್ದರು, ಅವರು ನ್ಯಾಯ ಪಾಲನೆಯ ಹಾದಿಯಿಂದ ತಪ್ಪಿರುವರೆಂದು ಜನರು ಭಾವಿಸಿದರು. ಇಲ್ಲಿ ಕ್ರಾಂತಿಕಾರಿಗಳೇ ಪಥಭ್ರಷ್ಟರಾಗಿದ್ದರೆನ್ನುವುದು ಬೇರೆ ವಿಷಯ.

ಎಲ್ಯೆ ಪ್ರಗತಿವಾದಿಗಳೇ! ಧರ್ಮನಿಷೇಧವು ವಿಮೋಚನೆಯ ನೈಜಹಾದಿಯಲ್ಲ. ಅದಕ್ಕಾಗಿ ಜನರಲ್ಲಿ ಅನ್ಯಾಯವನ್ನು ತಿರಸ್ಕರಿಸಿ ನ್ಯಾಯ ಒದಗಿಸುವ ಕ್ರಾಂತಿ ಚೇತನವನ್ನು ಜಾಗೃತ ಗೊಳಿಸಬೇಕು. ಅದುವೇ ಇಸ್ಲಾಮಿನ ಚೇತನವಾಗಿದೆ.

***

# ಧರ್ಮವು ಮಾದಕ ವಸ್ತುವೇ?

ಧರ್ಮವು ಅಫೀಮೆಂದು ಕಾರ್ಲ್‌ಮಾರ್ಕ್ಸ್ ಪ್ರಥಮವಾಗಿ ಹೇಳಿದ್ದ. ಪೂರ್ವ-ಪಶ್ಚಿಮಗಳ ಕಮ್ಯೂನಿಸ್ಟರು ಅದೇ ರಾಗದಲ್ಲಿ ಹಾಡಿದರು. ಅದನ್ನು ಇಸ್ಲಾಮಿಗೂ ಅನ್ವಯಗೊಳಿಸಿಬಿಡುವುದೇ ಅವರ ಧ್ಯೇಯ.

ಕಾರ್ಲ್‌ಮಾರ್ಕ್ಸ್ ಮತ್ತು ಕಮ್ಯೂನಿಝಮ್‌ನ ಆರಂಭ ಕಾಲದ ವಕ್ತಾರರು ಧರ್ಮ ಮತ್ತು ಪುರೋಹಿತರ ವಿರುದ್ಧ ನಡೆಸಿದ ಆಕ್ರಮಣಗಳಿಗೆ ಒಂದು ಸಮರ್ಥನೆಯಿದ್ದಿತು. ಅವರು ಅನಿವಾರ್ಯವಾಗಿ ಎದುರಿಸಬೇಕಾಗಿದ್ದ ಒಂದು ವಿಶಿಷ್ಟ ವಾತಾವರಣವೇ ಅದಕ್ಕೆ ಪ್ರೇರಕವಾಗಿತ್ತು.

ಅಂದು ಯೂರೋಪಿನಲ್ಲಿ ಜಾಗೀರುದಾರೀ ಪದ್ಧತಿಯು (Feudalism) ಅತಿ ರೂಕ್ಷವಾಗಿತ್ತು. ರಶ್ಯದ ಸ್ಥಿತಿಯೂ ಅದಕ್ಕಿಂತ ಉತ್ತಮವಿರಲಿಲ್ಲ. ವರ್ಷಂಪ್ರತಿ ಲಕ್ಷಗಟ್ಟಲೆ ಜನರು ಹಸಿವಿನಿಂದ ಸಾಯುತ್ತಿದ್ದರು. ಕ್ಷಯ ಮತ್ತು ಪ್ಲೇಗ್ ಮುಂತಾದ ಮಾರಕ ರೋಗಗಳಿಗೂ ಲಕ್ಷಾಂತರ ಮಂದಿ ತುತ್ತಾಗುತ್ತಿದ್ದರು. ಸುಮಾರು ಅಷ್ಟೇ ಮಂದಿ ಭೀಕರ ಚಳಿಯಿಂದ ಸಾಯುತ್ತಿದ್ದರು. ಹೀಗಿದ್ದರೂ, ಜಾಗೀರುದಾರೀ ದೊರೆಗಳು ಕಾರ್ಮಿಕ ವರ್ಗದ ರಕ್ತ ಹೀರುತ್ತಿದ್ದರು. ಸಕಲ ವಿಧದ ಸುಖಾಡಂಬರಗಳನ್ನು ಸವಿಯುತ್ತಾ ಮದೋನ್ಮತ್ತರಾಗಿ ಬಾಳುತ್ತಿದ್ದರು.

ಶ್ರಮಿಕ ವರ್ಗವು ತಮ್ಮ ತಲೆಯನ್ನು ಒಮ್ಮೆ ಮೇಲೆತ್ತಲು ಪ್ರಯತ್ನಿಸಿದರೆ, ಅಥವಾ ತಾವು ಅನುಭವಿಸುತ್ತಿರುವ ಕ್ರೌರ್ಯ ಮರ್ದನಗಳ ಬಗ್ಗೆ ಮನದಲ್ಲಿಯೇ ಪರಿತಪಿಸಿದರೆ ತಕ್ಷಣವೇ ಪುರೋಹಿತ ವರ್ಗವು ಹಾಜರಾಗುತ್ತಿತ್ತು. ಅವರು ಹೀಗೆ ಹೇಳುತ್ತಿದ್ದಾರೆ: "ನಿನ್ನ ಬಲ ಕೆನ್ನೆಗೆ ಹೊಡೆದರೆ ಆತನಿಗೆ ನಿನ್ನ ಎಡ ಕೆನ್ನೆಯನ್ನು ತೋರಿಸು. ನಿನ್ನ ಶಾಲನ್ನು ಯಾರಾದರೂ ಕಿತ್ತು ಕೊಂಡರೆ ಅವರಿಗೆ ನಿನ್ನ ಉಡುವ ಬಟ್ಟೆಯನ್ನೂ ಕೊಡು."

ಇನ್ನೂ ಒಂದು ಹೆಜ್ಜೆ ಮುಂದಿರಿಸಿ, ಅವರಿಗೆ ಪರಲೋಕ ಜೀವನದ ಮನಮೋಹಕ ಸುಖ-ಸಂತೋಷಗಳ ವಾಗ್ದಾನ ನೀಡಿ ಅವರನ್ನು ಮಂಕುಗೊಳಿಸುತ್ತಿದ್ದರು. ಸಹನಶೀಲರಿಗೆ ದೇವನು ಸಜ್ಜುಗೊಳಿಸಿರುವ ಪ್ರತಿಫಲ ಮತ್ತು ಸುಖವಿಲಾಸಗಳ ಆಶೆ ಹುಟ್ಟಿಸಿ ಅವರ ಕ್ರಾಂತಿಯ ಆವೇಶವನ್ನು ಕುಗ್ಗಿಸುತ್ತಿದ್ದರು.

ಬಹುದೂರದ ಮೋಹಕ ಆಮಿಷಗಳು ವಿಫಲವಾದಾಗ ಬೆದರಿಕೆ ಆರಂಭವಾಗುತ್ತದೆ. ಫ್ಯೂಡಲ್ ದೊರೆಯನ್ನು ಧಿಕ್ಕರಿಸುವಾತನು ದೇವನನ್ನೂ ಚರ್ಚನ್ನೂ ಪಾದ್ರಿಯನ್ನೂ ಧಿಕ್ಕರಿಸಿದವನೆಂದು ಸಾರಲಾಯಿತು.

ಇಲ್ಲಿ ನಾವೊಂದು ವಿಷಯವನ್ನು ಜ್ಞಾಪಿಸಬೇಕಾಗಿದೆ. ವಾಸ್ತವದಲ್ಲಿ ಚರ್ಚ್‌ಗಳೇ ಸ್ವಯಂ ಒಂದು 'ಫ್ಯೂಡಲ್' ಶಕ್ತಿಯಾಗಿದ್ದಿತು. ಚರ್ಚ್‌ನ ಆಶ್ರಯದಲ್ಲಿಯೇ ಮೃಗಗಳಂತೆ ದುಡಿಯುವ ಲಕ್ಷಗಟ್ಟಲೆ ಗುಲಾಮರಿದ್ದರು. ಆದ್ದರಿಂದ ದುಡಿಯುವ ವರ್ಗದ ಮಟ್ಟಿಗೆ ದೊರೆಗಳೂ ರಾಜಂದಿರೂ ಚರ್ಚ್‌ಗಳೂ ಸಮಾನವಾಗಿದ್ದುವು. ಯಾಕೆಂದರೆ ಯಜಮಾನರು ಸದಾ ಒಂದೇ ಪಾಳೆಯದಲ್ಲಿರುತ್ತಾರೆ. ಅದಲ್ಲದೇ ಕ್ರಾಂತಿ ಭುಗಿಲೇಳುವ ದಿನ ಬಡವರ ರಕ್ತ ಹೀರಿದವರಿಗೆ ಕ್ಷಮೆ ದೊರೆಯದು. ಅದು ಫ್ಯೂಡಲ್ ದೊರೆ, ಪುರೋಹಿತ ಅಥವಾ ಇನ್ನಾರೇ ಆಗಿದ್ದರೂ ಸರಿ.

ಆಮಿಷ ಮತ್ತು ಬೆದರಿಕೆ ವಿಫಲವಾದ ಮೇಲೆ ಭೀಕರ ದಂಡನೆಗಳನ್ನು ಪ್ರಯೋಗಿಸಲಾಗುತ್ತದೆ. ಧರ್ಮ ಮತ್ತು ದೇವನ ವಿರುದ್ಧ ಹೋರಾಡುವ ಮಂದಿಯನ್ನು ಹತ್ತಿಕ್ಕಲು ಕ್ರೂರ ಮರ್ದನ ಕ್ರಮವನ್ನು ಪ್ರಾರಂಭಿಸುತ್ತಾರೆ.

ಆಗ ಧರ್ಮವು ಮಾನವನ ಬದ್ಧವೈರಿಯೆಂದು ಪರಿಗಣಿಸಲ್ಪಡುತ್ತದೆ. ಇದರ ಕುರಿತೇ ಕಾರ್ಲ್‌ಮಾರ್ಕ್ಸ್ "ಧರ್ಮವು ಮಾನವನನ್ನು ಮಂಕುಗೊಳಿಸುವ ಅಫೀಮು"! ಎಂದು ಹೇಳಿದ್ದಾನೆ.

ಪೌರ್ವಾತ್ಯ ಮುಸ್ಲಿಮ್ ಲೋಕದ ಕಮ್ಯೂನಿಸ್ಟರು ತಮ್ಮ ವಾದದ ಸಮರ್ಥನೆಗಾಗಿ ಪುರೋಹಿತ ವೃತ್ತಿಯವರನ್ನು ಉದಾಹರಿಸುತ್ತಾರೆ. ಅವರು ಕಾರ್ಮಿಕ ವರ್ಗದ ವಿರುದ್ಧವಾಗಿ ಅಧಿಕಾರೀ ವರ್ಗದ ಭಟ್ಟಂಗಿಗಳಾದರು. ತಾವು ಅನುಭವಿಸುತ್ತಿರುವ ಅಕ್ರಮ ಮತ್ತು ನಿಂದನೆಗಳನ್ನು ಸಂತೋಷದಿಂದ ಸಹಿಸುವ ಸಹನ ಶೀಲರಿಗೆ ದೇವನು ಸಜ್ಜುಗೊಳಿಸಿರುವ ಸ್ವರ್ಗದ ಆಶೆ ಹುಟ್ಟಿಸುತ್ತಾರೆ. ಅದೇ ವೇಳೆ ಅಪರಾಧಿಗಳು ನಿರ್ಭೀತರಾಗಿ ಭೋಗ ವಿಲಾಸಗಳಲ್ಲಿ ಮೈಮರೆಯುತ್ತಾರೆ. ಇದಕ್ಕೆ ಉದಾಹರಣೆಯಾಗಿ ಅವರು ಫರೂಕ್ ರಾಜರ ಕಾಲದ ಅಝ್ಹರ್‌ನ ಕೆಲವು ವಿದ್ವಾಂಸರನ್ನು ಎತ್ತಿ ಹೇಳುತ್ತಾರೆ. ಅವರು ರಾಜನ ಕೈಯನ್ನು ಚುಂಬಿಸಿ ಪವಿತ್ರ ರಾಜನೆಂದು ಅಭಿಸಂಭೋಧಿಸಿದರು. ರಾಜನಿಗಾಗಿ ಪ್ರಾರ್ಥನೆ ಸಲ್ಲಿಸಿ, ರಾಜನ ಹಿತಕ್ಕೆ ಅನುಸಾರವಾಗಿ ಕುರ್‌ಆನ್ ವಾಕ್ಯಗಳನ್ನು ವ್ಯಾಖ್ಯಾನಿಸಿದರು. ರಾಜನ ಅಧಿಕಾರವನ್ನು ಸುಭದ್ರಗೊಳಿಸಲಿಕ್ಕಾಗಿ ಇಸ್ಲಾಮಿ ಸಿದ್ಧಾಂತಗಳನ್ನು ದುರ್ವ್ಯಾಖ್ಯಾನ ಮಾಡಿದರು. ಆತನ ವಿರುದ್ಧ ಕಾರ್ಮಿಕರು ಕ್ರಾಂತಿ ಸಂಘಟಿಸುವುದನ್ನು ತಡೆದರು. ಹಾಗಲ್ಲದಿದ್ದರೆ ಅವರನ್ನು ಅಲ್ಲಾಹನ ಆಜ್ಞೆಗಳನ್ನು ಅರ್ಥಾತ್ "ನಿಮ್ಮ ನಾಯಕರನ್ನು

7

ಅನುಸರಿಸಿರಿ" ಎಂಬ ಆಜ್ಞೆಯನ್ನು ಧಿಕ್ಕರಿಸಿದವರೆಂದು ಪರಿಗಣಿಸುತ್ತಿದ್ದರು.

ಕಮ್ಯೂನಿಸ್ಟರು ಈ ವಾಸ್ತವಿಕತೆಗಳೊಂದಿಗೆ, ಇಸ್ಲಾಮ್ ಸ್ವಯಂ ಇಂತಹ ನೀಚ ಕಾರ್ಯಗಳನ್ನು ಆಜ್ಞಾಪಿಸುತ್ತಿದೆಯೆಂಬ ಭಾವನೆ ಹರಡಲಿಕ್ಕಾಗಿ ಪ್ರಯತ್ನಿಸುತ್ತಾರೆ. ಅವರು ಹೇಳುತ್ತಾರೆ: "ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅಧಿಕವಾಗಿ ನೀಡಿದ್ದರೆ ಅದಕ್ಕಾಗಿ ನೀವು ದುರಾಸೆಪಡಬೇಡಿರಿ." (ಅನ್ನಿಸಾ:32)

"ನಾವು ಇವರ ಪೈಕಿ ನಾನಾ ವಿಧದ ಜನರಿಗೆ ನೀಡುವ ಐಹಿಕ ಭೋಗ ವಿಲಾಸಗಳತ್ತ ಕಣ್ಣೆತ್ತಿಯೂ ನೋಡಬೇಡಿರಿ. ಅವುಗಳನ್ನಂತು ನಾವು ಪರೀಕ್ಷಿಸಲಿಕ್ಕಾಗಿ ಅವರಿಗೆ ಕೊಟ್ಟಿರುತ್ತೇವೆ ಮತ್ತು ನಿನ್ನ ಪ್ರಭು ನೀಡಿರುವ ಧರ್ಮಸಮ್ಮತ ಜೀವನಾಧಾರವೇ ಶ್ರೇಷ್ಠವೂ ಶಾಶ್ವತವೂ ಆಗಿರುತ್ತದೆ." (ತಾಹಾ:131)

ಹಾಗಾದರೆ ಇಸ್ಲಾಮ್‌ಕೂಡಾ ಇತರೆಲ್ಲ ಧರ್ಮಗಳಂತೆ ಕಾರ್ಮಿಕ ವರ್ಗವನ್ನು ಮಂಕುಗೊಳಿಸುವ ಅಫೀಮು -ಈ ಆರೋಪವನ್ನು ನಾವು ಸ್ವಲ್ಪ ವಿಶ್ಲೇಷಿಸೋಣ. ಪುರೋಹಿತರ ಈ ದುಷ್ಟ ವರ್ತನೆಗೆ ಧರ್ಮದ ಪ್ರೇರಣೆಯಿದೆಯೇ ಎಂಬುದನ್ನು ನಾವೊಮ್ಮೆ ಪರಿಶೀಲಿಸೋಣ. ಅಥವಾ ಅದು ಅವರು ಧರ್ಮದ ಆಜ್ಞಾನಿರ್ದೇಶಗಳಿಗೆ ವಿರುದ್ಧವಾಗಿ ನಡೆಸುತ್ತಿರುವ ಸ್ವೇಚ್ಛಾಚಾರವೋ? ಅವರು ಈ ವಿಷಯದಲ್ಲಿ ಇಂದಿನ ಅಧಾರ್ಮಿಕರು ಮತ್ತು ದುರ್ಮಾರ್ಗಿಗಳಾದ ಕವಿ, ಸಾಹಿತಿ ಮತ್ತು ಪತ್ರಕರ್ತರಂತೆಯೇ ಇದ್ದಾರೆ. ಅವರು ತಮ್ಮ ಮುಖಕ್ಕೆ ಸ್ವಯಂ ಕೆಸರೆರಚಿ, ಸಭ್ಯತೆಯನ್ನು ಅವಮಾನಿಸಿ, ತಾತ್ಕಾಲಿಕ ಲಾಭಗಳಿಗಾಗಿ ಪ್ರಯತ್ನಿಸುತ್ತಾರೆ. ಇದು ವಾಸ್ತವದಲ್ಲಿ ನಿಷಿದ್ಧ ಸುಖವೆಂಬುದನ್ನು ಅವರು ಜ್ಞಾಪಿಸುವುದಿಲ್ಲ. ಹಣಕ್ಕಾಗಿ ಗೌರವವನ್ನು ಮಾರುವ ಕವಿ, ಸಾಹಿತಿ ಮತ್ತು ಪತ್ರಕರ್ತರಿಗಿಂತ ಇಂತಹ ಧರ್ಮ ಪುರೋಹಿತರ ಅಪರಾಧವು ಹೀನ ಮತ್ತು ಗಂಭೀರವಾದುದೆಂದು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಯಾಕೆಂದರೆ ಅವರ ಕೈಯಲ್ಲಿ ಅಲ್ಲಾಹನ ಗ್ರಂಥವಿದೆ. ಅವರು ದಿವ್ಯ ವಚನಗಳನ್ನು ಓದುತ್ತಾರೆ. ಅವರಿಗೆ ಧರ್ಮದ ವಾಸ್ತವಿಕತೆಯನ್ನು ಚೆನ್ನಾಗಿ ಅರಿತುಕೊಳ್ಳಬಹುದು. ಅವರ ಪ್ರಸಕ್ತ ಸ್ಥಿತಿಯು ಅಲ್ಲಾಹನ ಗ್ರಂಥವನ್ನು ತುಚ್ಛ ಬೆಲೆಗೆ ಮಾರುವವರದ್ದಾಗಿದೆ. ಅವರು ತಮ್ಮ ಉದರದಲ್ಲಿ ಕೇವಲ ಅಗ್ನಿಯನ್ನು ತುಂಬಿಸಿ ಕೊಳ್ಳುತ್ತಿದ್ದಾರೆ. ಇಸ್ಲಾಮಿನಲ್ಲಿ ಪುರೋಹಿತ ಅಥವಾ ಪೌರೋಹಿತ್ಯವಿಲ್ಲವೆಂಬುದನ್ನು ನಾನು ಪುನರುಚ್ಚರಿಸುತ್ತೇನೆ. ಅವರ ಹೇಳಿಕೆಗಳು ಇಸ್ಲಾಮಿನ ವಿರುದ್ಧ ಸಮರ್ಥನೆಯಾಗಲಾರದು. ಈ ಜನರಿಗೆ ಸಂಭವಿಸಿರುವ ವಿಪತ್ತಿಗೆ, ಅವರಿಗೆ ಧರ್ಮದ ವಾಸ್ತವಿಕತೆಯ ಅರಿವಿಲ್ಲದಿರುವುದೇ ಕಾರಣವಾಗಿದೆಯೇ ವಿನಾ ಇಸ್ಲಾಮೀ ಆಜ್ಞೆಗಳಿಂದ ಉದ್ಭವಿಸಿದ ಅಜ್ಞತೆಯಲ್ಲ. ಇಸ್ಲಾಮ್ ಮಾನವರನ್ನು ಮಂಕುಗೊಳಿಸುವ ಧರ್ಮವೆಂಬ ಆರೋಪದ ನಿರಾಕರಣೆಗೆ ಸರಕಾರದ ವಿರುದ್ಧ ಭುಗಿಲೆದ್ದ ಕ್ರಾಂತಿಯೇ

ಸಾಕ್ಷಿಯಾಗಿದೆ. ವಾಸ್ತವದಲ್ಲಿ ಅದೊಂದು ಧಾರ್ಮಿಕ ಆಂದೋಲನವಾಗಿದ್ದಿತು. ಹಿಂದಿನ ರಾಜನು ಅದರ ಅಪಾಯವನ್ನು ಊಹಿಸಿ ಅದರ ಪ್ರಚಾರಕರನ್ನು ಹಿಡಿದು ವಧಿಸಿ ಅವರನ್ನು ಜಜ್ಜಿ ಕೊಲ್ಲಲು ಸೆರೆಮನೆಗಳ ಬಾಗಿಲನ್ನು ತೆರೆದನು. ಆದರೆ ಅಲ್ಲಾಹನ ಇಚ್ಛೆಯೇ ಬೇರೆಯಾಗಿತ್ತು.

ಆ ಅಸಂಬದ್ಧ ಆರೋಪದ ನಿರಾಕರಣೆಗೆ ಇದೇ ಸಾಕು. ಹೀಗೆ ಮುಸ್ಲಿಮ್ ಪೌರ್ವಾತ್ಯ ಲೋಕದಲ್ಲಿ ಹುಟ್ಟಿದ ಸ್ವಾತಂತ್ರ್ಯ ಆಂದೋಲನಗಳೆಲ್ಲವೂ ಧರ್ಮದ ಪ್ರೇರಣೆಯಿಂದಲೇ ರೂಪು ತಾಳಿದ್ದವು. ಫ್ರೆಂಚ್ ಆಕ್ರಮಣದ ವಿರುದ್ಧ ಈಜಿಪ್ಟ್ ಜನತೆಯು ಮುನ್ನಡೆಸಿದ ಹೋರಾಟವು ಧರ್ಮ ವಿದ್ವಾಂಸರ ಆಂದೋಲನವಾಗಿದ್ದಿತು. ಮುಹಮ್ಮದಲೀ ಪಾಶಾರ ದಬ್ಬಾಳಿಕೆಗಳ ವಿರುದ್ಧ ಭುಗಿಲೆದ್ದ ಕ್ರಾಂತಿಯ ನಾಯಕತ್ವವನ್ನು ಸೈಯದ್ ಉಮರ್ ಮುಕ್ರಮ್ ಎಂಬೋರ್ವ ಧರ್ಮಪಂಡಿತರು ವಹಿಸಿದ್ದರು.

ಬ್ರಿಟಿಷರ ವಿರುದ್ಧ ಸುಡಾನ್‌ನಲ್ಲಿ ನಡೆದ ಕ್ರಾಂತಿಗೆ ಮಹ್ದೀ ಎಂಬ ಧರ್ಮ ವಿದ್ವಾಂಸರು ನಾಯಕರಾಗಿದ್ದರು. ಇರಾಕಿನ ವಿರುದ್ಧ ಲಿಬಿಯದಲ್ಲಿಯೂ ಫ್ರಾನ್ಸಿನ ವಿರುದ್ಧ ಮೊರೊಕ್ಕೋದಲ್ಲಿಯೂ ಭುಗಿಲೆದ್ದ ಎಲ್ಲ ಕ್ರಾಂತಿಗಳಿಗೆ ಧಾರ್ಮಿಕ ಸಂಘಟನೆಗಳೇ ಪ್ರೇರಣೆ ನೀಡಿದ್ದುವು. ಬ್ರಿಟೀಷರ ವಿರುದ್ಧ ಧರ್ಮ ಮತ್ತು ಧಾರ್ಮಿಕ ಬುನಾದಿಯಲ್ಲಿಯೇ ಕಾಪಾನಿ ಕ್ರಾಂತಿ ಎಬ್ಬಿಸಿದರು. ಈ ಧರ್ಮವು ಒಂದು ವಿಮೋಚನಾ ಶಕ್ತಿಯೆಂಬುದನ್ನು ಪ್ರಸ್ತುತ ಆಂದೋಲನಗಳು ಸಾಬೀತುಪಡಿಸಿವೆ. ಅದು ಅಕ್ರಮ ಅಪಮಾನಗಳನ್ನು ಸಹಿಸಿ ನಿಂದಿತರಾಗಿ ಜೀವಿಸಲು ಪ್ರೇರೇಪಿಸುವ ಸಂದೇಶವಲ್ಲ. ಸ್ಪಷ್ಟ ಪುರಾವೆ ನೀಡುವ ಈ ವಾಸ್ತವಿಕ ಘಟನೆಗಳನ್ನು ವಿವರಿಸಿ ನಾವು ಚರ್ಚೆಯನ್ನು ಮುಕ್ತಾಯಗೊಳಿಸುವುದಿಲ್ಲ. ಸಾಮಾಜಿಕ ನೀತಿ ಮತ್ತು ನ್ಯಾಯಬದ್ಧ ಆರ್ಥಿಕ ವಿತರಣೆಯ ಪ್ರಯತ್ನಗಳಿಂದ ಬಡವರನ್ನು ಮಂಕುಗೊಳಿಸಿ ವಂಚಿಸಲಾಗುತ್ತದೆಂಬ ಅಸಂಬದ್ಧ ಆರೋಪವನ್ನು ಪರಿಶೀಲಿಸೋಣ. ಅದು ಕಮ್ಯೂನಿಸ್ಟರ ಚರ್ವಿತ ಚರ್ವಣ ಆರೋಪಗಳಲ್ಲೊಂದಾಗಿದೆ.

"ನಿಮ್ಮಲ್ಲಿ ಅಲ್ಲಾಹನು ಕೆಲವರಿಗೆ ನೀಡಿರುವ ಔದಾರ್ಯದ ಬಗ್ಗೆ ದುರಾಸೆ ಪಡಬೇಡಿರಿ" ಎಂಬ ಕುರ್‌ಆನ್ ವಾಕ್ಯದ ಕುರಿತು ವ್ಯಾಖ್ಯಾನಗಾರರು ಹೇಳುತ್ತಾರೆ: ಅದೊಂದು ಸ್ತ್ರೀಯ ವಿಷಯದಲ್ಲಿ ಅವತೀರ್ಣಗೊಂಡಿದೆ. ಆಕೆ ಹೇಳಿದಳು: "ದೇವ ಮಾರ್ಗದಲ್ಲಿ ಹೋರಾಡಲು ಕೇವಲ ಪುರುಷರನ್ನೇ ನೇಮಿಸುವುದೇಕೆ? ಸ್ತ್ರೀಯರನ್ನು ಅದರಿಂದ ತಡೆಯುವುದೇಕೆ? "ಕೆಲವು ವ್ಯಾಖ್ಯಾನಗಾರರು ಹೀಗೂ ಅಭಿಪ್ರಾಯ

ಪಟ್ಟಿದ್ದಾರೆ. ಅದುವೇ ಹೆಚ್ಚು ಅಂಗೀಕಾರಾರ್ಹವಾಗಿದೆ. ಅದು ದುಡಿಯದೆ ಸೋಮಾರಿಗಳಾಗಿದ್ದು ಮಿಥ್ಯ ವ್ಯಾಮೋಹಗಳಲ್ಲಿ ಕಾಲಹರಣ ಮಾಡುವುದರ ನಿಷೇಧ ವಾಗಿದೆ. ಯಾಕೆಂದರೆ ಅದು ಅಸೂಯೆಗೆ ಕಾರಣವಾಗುತ್ತದೆ. ಅಸೂಯೆಯೂ ದುರ್ಭಾವನೆಯಾಗಿದ್ದು ಅದರಿಂದ ಸಮಾಜಕ್ಕೆ ಯಾವ ಹಿತವೂ ಆಗದು. ಅಥವಾ ಈ ಕುರ್‌ಆನ್ ವಾಕ್ಯವು, ಜನರನ್ನು ಕೈಕಟ್ಟಿ ಕುಳಿತು ಸ್ವಪ್ನಲೋಕದಲ್ಲಿ ವಿಹರಿಸುವ ಬದಲಿಗೆ ಉನ್ನತಿಯನ್ನು ಸಾಧಿಸುವ ಕರ್ಮಗಳಲ್ಲಿ ನಿರತರಾಗಿರಲು ಪ್ರೇರೇಪಿಸುತ್ತದೆ.

ಎರಡನೇಯ ಕುರ್‌ಆನ್ ವಾಕ್ಯವು ಹೀಗಿದೆ: "ನಾವು ಅವರಿಗೆ ನೀಡಿರುವ ಸುಖ ಸವಲತ್ತುಗಳತ್ತ ನೀವು ದೃಷ್ಟಿ ಹಾಯಿಸಬೇಡಿರಿ." ಇದು ಲೌಕಿಕ ಮೌಲ್ಯಗಳಿಗತೀತವಾಗಿ ವರ್ತಿಸಬೇಕೆಂಬ ಕರೆಯಾಗಿದೆ. ಲೌಕಿಕ ಆಶೆಯಿಂದ, ಇಲ್ಲದವನಿಗೆ ಇರುವವನ ಮೇಲೆ ಅಸೂಯೆ ಹುಟ್ಟಬಹುದು. ಇದರಲ್ಲಿ ಪ್ರವಾದಿವರ್ಯರನ್ನು(ಸ) ಅಭಿಸಂಬೋಧಿಸಲಾಗಿದೆ. ಲೌಕಿಕ ಸಂಪತ್ತನ್ನು ಹೇರಳವಾಗಿ ಸಂಗ್ರಹಿಸಿರುವ ಸತ್ಯನಿಷೇಧಿಗಳನ್ನು ತುಚ್ಛೀಕರಿಸಬೇಕೆಂದು ಇಲ್ಲಿ ವಿನಂತಿಸಲಾಗಿದೆ. ಆದರೆ ಪ್ರವಾದಿ(ಸ) ಅವರಿಗಿಂತ ಎಷ್ಟೋ ಉನ್ನತರಾಗಿದ್ದಾರೆ. ಯಾಕೆಂದರೆ ಪರಮ ಸತ್ಯವು ಪ್ರವಾದಿಯ ಬಳಿಯಿದ್ದಿತು. ಆದರೆ ಬಾಹ್ಯ ದೃಷ್ಟಿಗಳಿಗೆ ಅದು ಗೋಚರಿಸುವುದಿಲ್ಲ.

ಹಾಗಿದ್ದರೆ, ಇಸ್ಲಾಮಿನ ಆರಂಭ ಕಾಲದ ಕುರ್‌ಆನ್ ವ್ಯಾಖ್ಯಾನಗಾರರು, ಸಾವಿರಾರು ವರ್ಷಗಳ ಬಳಿಕ ಕಮ್ಯೂನಿಝಮ್ ಹುಟ್ಟಿ, ಅದರ ಪ್ರಚಾರಕರು ಇಸ್ಲಾಮನ್ನು ಅಪಾರ್ಥ ಮಾಡುವರೆಂದು ಮನಗಂಡು ಅವರ ತಪ್ಪು ತಿಳುವಳಿಕೆಯ ನಿರಾಕರಣೆಗಾಗಿ ಪ್ರಯತ್ನಿಸಿದರೆಂದು ಭಾವಿಸೋಣವೇ? ಅಥವಾ ಸತ್ಯವನ್ನು ಬಹಿರಂಗ ಪಡಿಸುವುದಕ್ಕೆ ಸುಯೋಗ್ಯವಾದ ರೀತಿಯಲ್ಲಿ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿ, ಕಮ್ಯೂನಿಸ್ಟ್ ಹಾಗೂ ಕಮ್ಯೂನಿಸ್ಟೇತರರಿಗೆ ಉತ್ತರವಾಗಿ ಈ ಅಭಿಪ್ರಾಯಗಳನ್ನು ಉಲ್ಲೇಖಿಸಿದರೆಂದು ಹೇಳೋಣವೇ? ಅಥವಾ ಸತ್ಯವನ್ನು ಬಹಿರಂಗ ಪಡಿಸುವುದಕ್ಕೆ ಸುಯೋಗ್ಯವಾದ ರೀತಿಯಲ್ಲಿ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿ, ಕಮ್ಯೂನಿಸ್ಟ್ ಹಾಗೂ ಕಮ್ಯೂನಿಸ್ಟೇತರರಿಗೆ ಉತ್ತರವಾಗಿ ಈ ಅಭಿಪ್ರಾಯಗಳನ್ನು ಉಲ್ಲೇಖಿಸಿದರೆಂದು ಹೇಳೋಣವೇ?

ಒಂದು ವೇಳೆ ಈ ಕುರ್‌ಆನ್ ವಾಕ್ಯ ಮತ್ತು ಇಂತಹ ಇತರ ವಾಕ್ಯಗಳು, ತನ್ನಲ್ಲಿರುವುದರಿಂದ ಸಂತೃಪ್ತಿಪಟ್ಟು ಅನ್ಯರದ್ದನ್ನು ಆಶಿಸದಿರಲು ಆದೇಶಿಸುತ್ತದೆಂದು ನಾವು ತಾರ್ಕಿಕವಾಗಿ ಒಪ್ಪಿಕೊಂಡರೂ, ಅದು ಯಾವಾಗ ಸೂಕ್ತವಾದೀತು? ಅಥವಾ ಅದರ ಪಾಲನೆ ಯಾವಾಗ ಕಡ್ಡಾಯವಾದೀತು?

ಇಸ್ಲಾಮನ್ನು ಒಂದೋ ಸಂಪೂರ್ಣವಾಗಿ ಅಂಗೀಕರಿಸಬೇಕು. ಅದಲ್ಲದಿದ್ದರೆ ಸಂಪೂರ್ಣವಾಗಿ ನಿರಾಕರಿಸಬೇಕು. ಒಂದೋ ಅದರ ನಿರ್ದೇಶಗಳನ್ನು ಸಂಪೂರ್ಣವಾಗಿ

ಪಾಲಿಸಬೇಕು. ಅದಲ್ಲದಿದ್ದರೆ ಅದನ್ನು ಸಂಪೂರ್ಣವಾಗಿ ನಿರ್ಲಕ್ಷಿಸಬೇಕು. ಬಡವರು ಮತ್ತು ನಿರ್ಗತಿಕರು ತಮಗೆ ದೊರೆತುದರಲ್ಲಿ ಸಂತೃಪ್ತರಾಗಿ ಶ್ರೀಮಂತರ ಸಂಪತ್ತಿನೆಡೆಗೆ ದೃಷ್ಟಿ ಹಾಯಿಸಬಾರದೆನ್ನುವ ಈ ಆದೇಶವು ತಕ್ಕಡಿಯ ಒಂದು ತಟ್ಟೆ ಮಾತ್ರವಾಗಿದೆ. ಅದರ ಇನ್ನೊಂದು ತಟ್ಟೆಯಲ್ಲಿ, ಅಂತಹ ಅಥವಾ ಅದಕ್ಕಿಂತ ಪ್ರಬಲವಾದ ಶೈಲಿಯಲ್ಲಿ, ಹಣವನ್ನು ಸಂಗ್ರಹಿಸಿ ಬಚ್ಚಿಡದೆ ದೇವಮಾರ್ಗದಲ್ಲಿ ವ್ಯಯಿಸಬೇಕೆಂದು ಶ್ರೀಮಂತರಿಗೆ ಆದೇಶಿಸಿದೆ. ಈ ನೀಚ ಸ್ವಾರ್ಥದಿಂದಾಗಿ ಪರಲೋಕದಲ್ಲಿ ಕಠೋರ ಶಿಕ್ಷೆಯನ್ನು ಅನುಭವಿಸಬೇಕಾದೀತೆಂದೂ ಅದು ಎಚ್ಚರಿಕೆ ನೀಡಿದೆ.

ಪ್ರಸ್ತುತ ಸಮಸ್ಯೆಯನ್ನು ಈ ದೃಷ್ಟಿಯಿಂದ ಅವಲೋಕಿಸುವಾಗ ಅದರ ಎರಡು ತಟ್ಟೆಗಳೂ ಸಂತುಲಿತವಾಗಿವೆ. ಒಂದೆಡೆಯಿಂದ ವೆಚ್ಚ ಮಾಡುವ ಕರೆ ನೀಡುವಾಗ, ಇನ್ನೊಂದೆಡೆಯಿಂದ ಆಸೆಗಣ್ಣಿನಿಂದ ನೋಡುವ ಬದಲಾಗಿ ಮರ್ಯಾದೆಯನ್ನು ಕಾಪಾಡಿ ಅಸೂಯೆಯಿಂದ ಮನಸ್ಸನ್ನು ಮುಕ್ತಗೊಳಿಸಬೇಕೆಂಬ ಪ್ರೇರಣೆ. ಇವೆರಡರಿಂದಾಗಿ ಸಮಾಜದಲ್ಲಿ ನೆಮ್ಮದಿ ಮತ್ತು ಆರ್ಥಿಕ ವಿಕೇಂದ್ರೀಕರಣ ಏಕಕಾಲದಲ್ಲಿ ಸಾಧಿತವಾಗುತ್ತದೆ. ಒಂದೆಡೆಯಲ್ಲಿ ಓರ್ವ ನಿರ್ಗತಿಕನೂ ಇನ್ನೊಂದೆಡೆಯಲ್ಲಿ ಓರ್ವ ಶ್ರೀಮಂತನೂ ಇರುವಂತಹ ಸ್ಥಿತಿ ಸಂಜಾತವಾಗಬಾರದು. ಹಿಂದಿನ ಅಧ್ಯಾಯವೊಂದರಲ್ಲಿ ಧನ ವಿಕೇಂದ್ರೀಕರಣ ಹಾಗೂ ಔದಾರ್ಯ ಮತ್ತು ದಾಕ್ಷಿಣ್ಯದ ಛಾಯೆಯಿಲ್ಲದೇ ಆಧುನಿಕ ಯುಗದಲ್ಲಿ ಅದರ ಜ್ಯಾರಿಗೆ ಸೂಕ್ತವಾದ ಹಲವಾರು ವಿಧಾನಗಳನ್ನೂ ನಾವು ಚರ್ಚಿಸಿದ್ದೆವು. ಅವೆಲ್ಲವೂ ಶಿಷ್ಟ ಮಾನವೀಯ ಸಹಕಾರದ ವರ್ಗಕ್ಕೆ ಸೇರಿವೆ. ಆ ಸಮಸ್ಯೆಯನ್ನು ಪುನಃ ಚರ್ಚಿಸಬೇಕಾಗಿಲ್ಲ. ಆದರೆ ಸಂದರ್ಭೋಚಿತವಾಗಿ ಒಂದು ಮಾತು ಹೇಳಬಯಸುತ್ತೇನೆ. ಸಮಾಜವು ಈ ರೀತಿಯಿಂದ ಬಾಳುವಾಗ ಅಕ್ರಮಕ್ಕೆ ಅವಕಾಶವಿರುವುದಿಲ್ಲ. ಹೀಗಿರುತ್ತಾ, ಅಕ್ರಮಕ್ಕೆ ಬಲಿಯಾದವರೊಡನೆ ಅದನ್ನು ಸಹಿಸಿಕೊಳ್ಳುವಂತೆ ಹೇಳುವ ಅಗತ್ಯ ಎಲ್ಲಿದೆ?

ಹಾಗೆಯೇ ಆರ್ಥಿಕ ಸೌಲಭ್ಯಗಳನ್ನು ನಿಷೇಧಿಸುವ ಸ್ಥಿತಿಯೂ ಇರಲಾರದು. ಹೀಗಿರುತ್ತಾ ಅದರಲ್ಲಿ ಸಂತೃಪ್ತಿ ತಾಳುವಂತೆ ಉಪದೇಶಿಸುವ ಅಗತ್ಯವೇನು?

ಹಾಗಿದ್ದರೆ, ಶ್ರೀಮಂತರಿಗೆ ತಮ್ಮ ಹಣ ವ್ಯಯದ ಕರ್ತವ್ಯಗಳ ಬಗ್ಗೆ ಎಚ್ಚರಿಕೆ ನೀಡಿ, ಅವರ ಮೇಲೆ ಸಾರ್ವಜನಿಕ ಹೊಣೆಗಾರಿಕೆಗಳನ್ನು ಹೇರಿರುವಾಗ ಬಡವರು ಮತ್ತು ನಿರ್ಗತಿಕರು ತಮ್ಮ ದಾರಿದ್ರ್ಯದಲ್ಲಿಯೇ ಸಂತೃಪ್ತಿ ಪಡೆಯಬೇಕೆಂದು ಯಾಕೆ ಹೇಳಬೇಕು?!

ಇಸ್ಲಾಮ್ ಹಾಗೆ ಮಾಡುತ್ತಿದೆಯೇ? ಅಕ್ರಮವನ್ನು ಸಹಿಸಿ, ಅದರ ವಿರುದ್ಧ ಹೋರಾಡದೆ ಮೂಕ ಪ್ರೇಕ್ಷಕರಾಗಿರುವವರಿಗೆ ಇಹ-ಪರ ಲೋಕಗಳಲ್ಲಿ ತೀವ್ರ ಪರಿಣಾಮದ ಎಚ್ಚರಿಕೆ ನೀಡುವ ಇಸ್ಲಾಮೇ?

"ತಮ್ಮ ಮೇಲೆ ತಾವೇ ಅಕ್ರಮವೆಸಗುತ್ತಿದ್ದವರ ಪ್ರಾಣವನ್ನು ದೇವಚರರು

ವಶಪಡಿಸಿಕೊಂಡಾಗ ಅವರೊಡನೆ, 'ನೀವು ಯಾವ ಸ್ಥಿತಿಯಲ್ಲಿದ್ದಿರಿ?' ಎಂದು ಕೇಳಿದರು. ಅವರು, 'ನಾವು ಭೂಮಿಯಲ್ಲಿ ಅಶಕ್ತರೂ ವಿವಶರೂ ಆಗಿದ್ದೆವು' ಎಂದು ಉತ್ತರ ಕೊಟ್ಟರು. ಆಗ ದೇವಚರರು, 'ನಿಮಗೆ ಹಿಜ್‌ರಾ (ವಲಸೆ) ಹೋಗಲು ಭೂಮಿಯು ವಿಶಾಲವಿರಲಿಲ್ಲವೇ?' ಎಂದು ಕೇಳಿದರು. ಇಂತಹವರ ವಾಸಸ್ಥಳವು ನರಕವೇ ಆಗಿದೆ. ಅದು ಅತ್ಯಂತ ಕೆಟ್ಟವಾಸಸ್ಥಾನ.

ಆದರೆ ನಿಜಕ್ಕೂ ವಿವಶರಾಗಿರುವ ಮತ್ತು ಹೊರಟು ಹೋಗಿ ಬಿಡಲು ದಾರಿ ಹಾಗೂ ಸಾಧನವಿಲ್ಲದ ಪುರುಷರೂ ಸ್ತ್ರೀಯರೂ ಮಕ್ಕಳೂ ಇದಕ್ಕೆ ಹೊರತಾಗಿದ್ದಾರೆ- ಅಲ್ಲಾಹ್ ಅವರನ್ನು ಕ್ಷಮಿಸಿ ಬಿಡಲೂ ಬಹುದು. ಅಲ್ಲಾಹ್ ಅತ್ಯಂತ ಮನ್ನಿಸುವಾತನೂ ಕ್ಷಮಾಶೀಲನೂ ಆಗಿರುತ್ತಾನೆ." (ಅನ್ನಿಸಾ:97-99)

ತಾನು ಅಸಹಾಯಕನೆಂದು ಹೇಳಿ ಅಕ್ರಮವನ್ನು ಸಹಿಸಿ ಸುಮ್ಮನಿರುವುದು ಅಕ್ಷಮ್ಯ ಅಪರಾಧವಾಗಿದೆ. ಅಲ್ಲಾಹನು ತೋರಿಸಿರುವ ಗೌರವಾರ್ಹ ಜೀವನ ಪದ್ಧತಿಯನ್ನು ತೊರೆದು ಹೀನವಾಗಿ ಬಾಳುವವರನ್ನು ತಮ್ಮ ಮೇಲೆ ತಾವು ಅಕ್ರಮವೆಸಗಿದವರೆಂದು ಕುರ್‌ಆನ್ ವರ್ಣಿಸಿದೆ. ಆ ಗೌರವಾರ್ಹ ಜೀವನ ಪದ್ಧತಿಯ ಜ್ಯಾರಿಗಾಗಿ ತೀವ್ರವಾಗಿ ಪ್ರಯತ್ನಿಸಬೇಕೆಂದು ಅದು ಅವರಿಗೆ ಕರೆ ನೀಡುತ್ತದೆ.

ವಿಶಿಷ್ಟ ಪರಿಸ್ಥಿತಿಯಲ್ಲಿ ವಲಸೆ ಹೋಗುವ ಕರೆ ನೀಡಲಾಗಿತ್ತು. ಅಕ್ರಮವನ್ನು ಎದುರಿಸುವ ಮಾರ್ಗವು ಅದೊಂದೇ ಆಗಿಲ್ಲ. ಅದಕ್ಕಾಗಿ ಸಮಾಜವು ಹಲವು ವಿಧಾನಗಳನ್ನು ಅವಲಂಬಿಸಬಹುದು. ಆ ಕುರಿತು ನಾವು ವಿವರಿಸಲಿದ್ದೇವೆ. ಅಕ್ರಮವನ್ನು ಸದಾ ಸಹಿಸಿಕೊಂಡಿರುವುದನ್ನು ಇಸ್ಲಾಮ್ ಎಷ್ಟೊಂದು ಅವಹೇಳನಕಾರಿಯಾಗಿ ಪರಿಗಣಿಸುತ್ತಿದೆಯೆಂಬುದನ್ನಷ್ಟೇ ಇಲ್ಲಿ ಎತ್ತಿ ತೋರಿಸಲಾಗಿದೆ. ವಾಸ್ತವದಲ್ಲಿ ಅಸಹಾಯಕ ಜನರು ಯಾವ ಉಪಾಯವನ್ನೂ ತಿಳಿಯದ ನಿರ್ಗತಿಕರಾಗಿದ್ದಾರೆ. ಹಾಗಿದ್ದರೂ ಅವರಿಗೆ ಕ್ಷಮೆಯ ಪ್ರಾರ್ಥನೆಯಷ್ಟೇ ದೊರೆಯುವುದು. ಅದು ಕೂಡಾ ಖಚಿತ ಮತ್ತು ಸ್ಪಷ್ಟ ಕ್ಷಮೆಯಲ್ಲ. ವಾಸ್ತವದಲ್ಲಿ ಅವರು ಕ್ಷಮೆಗೆ ಅರ್ಹರಾಗಿದ್ದಾರೆ. ಅವರ ಅಸಹಾಯಕತೆಯೂ ವಾಸ್ತವವಾಗಿದೆ, ಕೃತಕವಲ್ಲ.

ಈ ಕುರ್‌ಆನ್ ವಾಕ್ಯದ ತಾತ್ಪರ್ಯವು ಅಲ್ಲಾಹನು ಅವರಿಗೆ ಕ್ಷಮೆ ನೀಡುವುದಿಲ್ಲವೆಂದಲ್ಲ- "ನಿನ್ನ ಪ್ರಭುವು ತನ್ನ ದಾಸರೊಡನೆ ಅತಿಕ್ರಮವೆಸಗುವವನಲ್ಲ" ಅಂದರೆ ಅದು ವಿಷಯದ ಗಂಭೀರತೆಯನ್ನು ಸೂಚಿಸುವ ಒಂದು ಶೈಲಿಯಾಗಿದೆ. ಕಿಂಚಿತ್ ಸಾಮರ್ಥ್ಯವಿರುವವರೂ ಹೋರಾಟಕ್ಕಿಳಿಯದೆ ಕೈಕಟ್ಟಿ ಕುಳಿತಿರಬಾರದೆಂಬುದೇ ಅದರ ಇಂಗಿತ. ಅದೇ ವೇಳೆ ವಾಸ್ತವಿಕವಾಗಿ ಅಸಹಾಯಕರಾಗಿರುವ ಜನವಿಭಾಗಗಳನ್ನು ಅಕ್ರಮಕ್ಕೀಡಾಗಿಸಿ ನಿರ್ಲಕ್ಷಿಸಿ ಬಿಡುವುದಿಲ್ಲ. ಸಮಗ್ರ ಮುಸ್ಲಿಮ್ ಸಮಾಜವು ಅವರ

ಹಾದಿಯಲ್ಲಿ ಅಚಲರಾಗಿ ವೈರಿಗಳನ್ನು ಪ್ರತಿಭಟಿಸುವಂತೆ ಆಜ್ಞಾಪಿಸಲಾಗಿದೆ. "ಅಲ್ಲಾಹನ ಮಾರ್ಗದಲ್ಲಿ ನೀವೇಕೆ ಯುದ್ಧ ಮಾಡಬಾರದು?"

"ಓ ನಮ್ಮ ಪ್ರಭೂ, ಅಕ್ರಮಿಗಳು ವಾಸಿಸುವ ಈ ನಾಡಿನಿಂದ ನಮ್ಮನ್ನು ಹೊರತೆಗೆ- ಎಂದು ಮೊರೆಯಿಡುತ್ತಿರುವ ಮರ್ದನಕ್ಕೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ, ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧಮಾಡದಿರಲು ಕಾರಣವೇನು?" (ಅನ್ನಿಸಾ:75)

ದೇಶದ ಒಂದು ವರ್ಗ ಅಥವಾ ಬಹುಮಂದಿ ಅಕ್ರಮಕ್ಕೆ ಬಲಿಯಾಗುತ್ತಿರುವಾಗ ಮೌನವಾಗಿ ನಿಂತು ನೋಡುವುದನ್ನು ಅಲ್ಲಾಹನು ಮೆಚ್ಚುವುದಿಲ್ಲ. ಅಕ್ರಮವನ್ನು ಪ್ರತಿಭಟಿಸಿ ಮರ್ದಿತರನ್ನು ವಿಮೋಚನೆಗೊಳಿಸುವ ತನಕ ಅವರಿಗೆ ಅಲ್ಲಾಹನ ಅನುಗ್ರಹವನ್ನು ಗಳಿಸಲಸಾಧ್ಯ.

ಪ್ರಾಯಶಃ, ಈ ಕುರ್‌ಆನ್ ವಾಕ್ಯಗಳು ವಿಶ್ವಾಸ ಕಾರ್ಯಗಳಿಗೆ ಸಂಬಂಧಿಸಿದ್ದೆಂದು ಯಾರಾದರೂ ಭಾವಿಸಬಹುದು. ಅರ್ಥಾತ್: ಈ ವಾಕ್ಯಗಳು, ಬಹುದೇವಾರಾಧಕ ಸಮಾಜದಲ್ಲಿ ಜೀವಿಸುವ ಮುಸ್ಲಿಮರನ್ನು ಆರಾಧನೆಯಿಂದಲೂ ಇಸ್ಲಾಮೀ ಆರಾಧನಾ ಕ್ರಮಗಳಿಂದಲೂ ತಡೆಯುವುದಕ್ಕೆ ಸೀಮಿತವಾಗಿದೆಯೆಂದು ಭಾವಿಸಬಹುದು.

ಆದರೆ ಆರಾಧನಾ ಕ್ರಮಗಳ ಅನುಷ್ಠಾನವನ್ನು ಈ ವಿಶ್ವಾಸದಿಂದ ಮೂಡಿಬರುವ ರಾಜಕೀಯ, ಸಾಮಾಜಿಕ, ಆರ್ಥಿಕ ಪದ್ಧತಿಗಳನ್ನು ಜ್ಯಾರಿಗೊಳಿಸುವುದನ್ನು ಇಸ್ಲಾಮ್ ಪರಸ್ಪರ ವಿಭಜಿಸುವುದಿಲ್ಲ. ಅವುಗಳ ಜ್ಯಾರಿಯನ್ನು ನಿರಾಕರಿಸುವವರನ್ನು ಹೆಸರು ಮತ್ತು ವರ್ತನೆಗಳಲ್ಲಿ ಕಾಫಿರೆಂದೋ ಅಥವಾ ಹೆಸರಿನಲ್ಲಿ ಮುಸ್ಲಿಮರು ವರ್ತನೆಯಲ್ಲಿ ಕಾಫಿರರೆಂದೋ ವಿಂಗಡಿಸುವುದಿಲ್ಲ.

"........... ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಮಾಡದ ಕಾಫಿರರು." (ಅಲ್‌ಮಾಯಿದಃ 44)

ಸಂಪತ್ತು ಕೇವಲ ಶ್ರೀಮಂತರಲ್ಲಿಯೇ 'ಸುತ್ತಾಡುತ್ತಿರಬಾರ'ದೆಂದು ಇಸ್ಲಾಮ್ ಆದೇಶಿಸುತ್ತದೆ. ಮಾರ್ಗಗಳನ್ನು ಬಳಸಿ ರಾಷ್ಟ್ರವು ಸಕಲ ಪ್ರಜೆಗಳ ಹಿತಕ್ಕಾಗಿ ಕೆಲಸ ಮಾಡಬೇಕೆಂದು ಅದು ನಿರ್ದೇಶಿಸಿದೆ. ಸೂಕ್ತ ಉದ್ಯೋಗಾವಕಾಶವನ್ನು ಒದಗಿಸಿ ಅಥವಾ ಕೆಲಸ ಮಾಡುವ ಸಾಮರ್ಥ್ಯ ವಿಲ್ಲದವರಿಗೆ 'ಬೈತುಲ್‌ಮಾಲ್'ನಿಂದ ನೆರವು ನೀಡುವ ಮೂಲಕ ಆ ಕರ್ತವ್ಯವನ್ನು ಪೂರೈಸಬಹುದು. ಕಾರ್ಮಿಕರಿಗೆ ಇಸ್ಲಾಮ್ ಕೆಲವು ಸೌಲಭ್ಯಗಳ ಭರವಸೆ ನೀಡುತ್ತದೆ. ಅದನ್ನು ನಾವು ಈ ಹಿಂದೆ ನೋಡಿದ್ದೇವೆ. ಸಾರ್ವಜನಿಕ ಹಾಗೂ ಖಾಸಗೀ ರಂಗದಲ್ಲಿರುವ ಪ್ರತಿಯೊಬ್ಬ ಕಾರ್ಮಿಕನೂ ಪ್ರಸ್ತುತ ಹಕ್ಕಿಗೆ ಅರ್ಹನಾಗಿದ್ದಾನೆ. ಅವೆಲ್ಲವೂ ಈ ಆದರ್ಶದ ಭಾಗವಾಗಿವೆ. ವ್ಯಾವಹಾರಿಕ

ಜಗತ್ತಿನಲ್ಲಿ ಅದನ್ನು ಸಾಕ್ಷಾತ್ಕಾರಗೊಳಿಸದಿರುವ ತನಕ ಜನರು ಅವುಗಳನ್ನು ನಂಬಲಾರರು. ಈ ಹಿಂದೆ ಪ್ರಸ್ತಾಪಿಸಿದ 'ತಮ್ಮ ಮೇಲೆ ತಾವೇ ಅಕ್ರಮವೆಸಗುವವರ' ಕುರಿತು ಹೇಳುವ, ಅಕ್ರಮದ ವಿರುದ್ಧ ಹೋರಾಡಲು ಸಿದ್ಧರಿಲ್ಲದವರನ್ನು ಆಕ್ಷೇಪಿಸುವ ಕುರ್‌ಆನ್ ವಾಕ್ಯದ ತಾತ್ಪರ್ಯವೂ ಅದೇ ಆಗಿದೆ. "ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ನೀಡಿರುವ ಅನುಗ್ರಹಗಳ ಕುರಿತು ನೀವು ದುರಾಸೆ ಪಡಬೇಡಿರಿ." "ಅವರಿಗೆ ನಾವು ನೀಡಿರುವ ನಾನಾ ತರದ ಭೋಗ ವಿಲಾಸಗಳ ಕಡೆಗೆ ಕಣ್ಣೆತ್ತಿಯೂ ನೋಡ ಬೇಡಿರಿ." ಮುಂತಾದ ಕುರ್‌ಆನ್ ವಾಕ್ಯಗಳ ತಾತ್ಪರ್ಯವನ್ನು ಅಪಾರ್ಥಮಾಡಿಕೊಂಡು ಜನರು ಸಾಮಾಜಿಕ ಕೆಡುಕುಗಳ ಮುಂದೆ ಮೌನವಾಗಿರುವರೆಂದು ಭಾವಿಸೋಣ. ಹಾಗಿದ್ದರೆ ಅದರ ಪರಿಣಾಮವೇನಾದೀತು?

ಆಗ ಸಂಪತ್ತು ಕೇವಲ ಕೆಲವೇ ಶ್ರೀಮಂತರ ಕಿಸೆ ಸೇರಿ ಸುತ್ತಾಡುವುದು. ಸಮಾಜದ ಬಹುಮಂದಿಗೆ ಅದು ನಿಷೇಧಿಸಲ್ಪಡುವುದು. (ಜಾಗೀರುದಾರಿ ಮತ್ತು ಭಂಡವಾಳಶಾಹೀ ಪದ್ಧತಿಯಲ್ಲಿ ಸಂಭವಿಸಿದಂತೆ) ಅದಾದರೋ ನಿಷಿದ್ಧವೂ ಆಗಿದೆ. ದೇವಾಜ್ಞೆಗೆ ವಿರುದ್ಧವಾಗಿದೆ. "ಸಂಪತ್ತು ನಿಮ್ಮಲ್ಲಿರುವ ಶ್ರೀಮಂತರಲ್ಲಿ ಮಾತ್ರ ಸುತ್ತಾಡದಿರಲಿಕ್ಕಾಗಿ." (ಕುರ್‌ಆನ್)

ಶ್ರೀಮಂತರು ಈ ಹಣವನ್ನು ಬಚ್ಚಿಡತೊಡಗುವರು. ಅಥವಾ ಆಡಂಬರ ಅಬ್ಬರಗಳಿಗಾಗಿ ದುಂದುವೆಚ್ಚ ಮಾಡುವರು. ಪ್ರಥಮವಾಗಿ ನಿಷೇಧಿಸಲ್ಪಟ್ಟ ವಿಷಯವನ್ನು ಹೇಳಲಾಗಿದೆ.: ಅವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ." (ಅತ್ತೌಬ : 34)

ಅಲ್ಲಾಹನು ಎಂದೆಂದಿಗೂ ಮೆಚ್ಚದ ಕೆಡುಕಿಗಾಗಿಯಲ್ಲದೆ ಯಾರನ್ನೂ ಆತನು ಶಿಕ್ಷಿಸುವುದಿಲ್ಲ. ಎರಡನೇಯ ವಿಷಯವೂ ತೀರಾ ಕೆಡುಕಾಗಿದೆ. ಸುಖಲೋಲುಪತೆಯನ್ನು ವಿರೋಧಿಸುವ ಅನೇಕ ವಾಕ್ಯಗಳು ಕುರ್‌ಆನ್‌ನಲ್ಲಿವೆ. ಅವೆಲ್ಲವೂ ಸುಖಲೋಲುಪರನ್ನು ಸತ್ಯ ನಿಷೇಧಿಗಳು ಮತ್ತು ನೀಚರೆಂದು ವರ್ಣಿಸಿದೆ.

"ನಾವು ಯಾವುದಾದರೊಂದು ನಾಡಿಗೆ ಎಚ್ಚರಿಕೆ ನೀಡುವವನನ್ನು ಕಳುಹಿಸಿದಾಗಲೆಲ್ಲಾ ಆ ನಾಡಿನ ಸ್ಥಿತಿವಂತರು. 'ನೀವು ತಂದಿರುವ ಸಂದೇಶವನ್ನು ನಾವು ಸ್ವೀಕರಿಸುವುದಿಲ್ಲ' ಎಂದು ಹೇಳದೆ ಇರಲಿಲ್ಲ." (ಸಬಾ : 34)

"ನಾವು ಒಂದು ನಾಡನ್ನು ನಾಶಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ಮತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡ ತೊಡಗುತ್ತಾರೆ. ಆಗ ಯಾತನೆಯ ತೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ ಮತ್ತು ನಾವು ಅದನ್ನು ಸಂಪೂರ್ಣ ನಾಶ ಮಾಡಿಬಿಡುತ್ತೇವೆ." (ಬನೀ ಇಸ್‌ರಾಈಲ್ : 16)

"... ಇನ್ನು ಎಡಗಡೆಯವರು. ಎಡಗಡೆಯವರ (ದೌರ್ಭಾಗ್ಯದ) ಕುರಿತು ಹೇಳುವುದೇನು! ಅವರು ಸುಡುಗಾಳಿಯ ಉರಿಯಲ್ಲೂ ಕುದಿಯುತ್ತಿರುವ ನೀರಲ್ಲೂ ಕಪ್ಪು ಹೊಗೆಯ ನೆರಳಲ್ಲೂ ಇರುವರು. ಅದು ತಂಪೂ ಆಗಿರದು, ಸುಖದಾಯಕವೂ ಆಗಿರದು. ಇವರು ಈ ಗತಿಗೆ ಬರುವುದಕ್ಕೆ ಮುಂಚೆ ಸುಸ್ಥಿತಿಯಲ್ಲಿದ್ದರು." (ಅಲ್‌ವಾಕಿಅಃ 41-45)

ಸಾಮಾಜಿಕ ಅನ್ಯಾಯಗಳ ವಿರುದ್ಧ ಹೋರಾಡದೆ ಮೂಕ ಪ್ರೇಕ್ಷಕರಾಗಿ ನಿಲ್ಲುವ ಮೂಲಕ ಅವರು ಒಂದು ಕೆಡುಕೆಸಗುತ್ತಾರೆ. ಅಲ್ಲಾಹನ ಸಂಪ್ರೀತಿಗಾಗಿ ಒಂದು ಕೆಡುಕಿಗೆ ಹಾದಿ ಮಾಡಿಕೊಟ್ಟು, ಅದರ ಮುಂದೆ ಮೂಕರಾಗಿ ಇರಬೇಕೆಂದು ಇಸ್ಲಾಮ್ ಜನರೊಡನೆ ಅಪೇಕ್ಷಿಸೀತೇ?

ಇಸ್ಲಾಮಿನ ಕುರಿತು ಅಂತಹ ತಪ್ಪು ತಿಳುವಳಿಕೆಯಿರಿಸಿಕೊಳ್ಳಲು ನಮ್ಮಿಂದ ಹೇಗೆ ಸಾಧ್ಯವಾದೀತು?

"ಬನೀ ಇಸ್‌ರಾಈಲರಲ್ಲಿ 'ಕುಫ್ರ್' ಮಾರ್ಗವನ್ನನುಸರಿಸಿದವರು ದಾವೂದ್ ಮತ್ತು ಮರ್ಯಮರ ಪುತ್ರ 'ಈಸಾ'ರ ಬಾಯಿಯಿಂದ ಶಪಿಸಲ್ಪಟ್ಟರು. ಏಕೆಂದರೆ, ಅವರು ಸೊಕ್ಕಿದ್ದರು ಮತ್ತು ಅತಿಕ್ರಮ ವೆಸಗುತ್ತಿದ್ದರು. ಅವರು ಪರಸ್ಪರರನ್ನು ದುಷ್ಕೃತ್ಯಗಳಿಂದ ತಡೆಯುವುದನ್ನು ಬಿಟ್ಟು ಬಿಟ್ಟಿದ್ದರು. ಅವರು ಕೈಕೊಂಡ ಕರ್ಮ ವಿಧಾನವು ಹೀನಾಯವಾಗಿತ್ತು." (ಅಲ್‌ಮಾಇದಃ 78-79)

ಇಲ್ಲಿ ಅಕ್ರಮದ ಮುಂದೆ ಮೌನವಾಗಿದ್ದು, ಅದನ್ನು ತಡೆಯದಿರುವುದನ್ನು ದೇವನ ಕೋಪ, ಶಾಪ ಮತ್ತು ಶಿಕ್ಷೆಗೀಡಾಗುವ ಘೋರ ದೇವನಿಷೇಧವೆಂದು ಪರಿಗಣಿಸಲಾಗಿದೆ. ಪ್ರವಾದಿವರ್ಯರು(ಸ) ಹೇಳಿದ್ದಾರೆ: "ಅಕ್ರಮಿಯಾದ ರಾಜನ ಮುಂದೆ ಸತ್ಯವನ್ನು ಬಹಿರಂಗವಾಗಿ ಹೇಳುವುದೇ ಅಲ್ಲಾಹನ ಬಳಿ ಶ್ರೇಷ್ಠ ಜಿಹಾದ್ (ಧರ್ಮಯುದ್ಧ) ಆಗಿದೆ."

ಇಂತಹ ಕೆಡುಕುಗಳು ಸಮಾಜದಲ್ಲಿವ್ಯಾಪಿಸಿರುವಾಗ ಆಡಳಿತಗಾರನು ಅದರ ಬಗ್ಗೆ ಮೌನವಾಗಿದ್ದರೆ, ಅಥವಾ ಸ್ವಯಂ ಆಡಳಿತಗಾರನೇ ಅದಕ್ಕೆ ಕಾರಣನಾಗಿದ್ದರೆ ಆತನನ್ನು ಹದ್ದು ಬಸ್ತಿನಲ್ಲಿಡಲು ಪ್ರಯತ್ನಿಸುವುದು ಕಡ್ಡಾಯವಾಗಿದೆ. ಅದುವೇ ದೇವಮಾರ್ಗದ ಹೋರಾಟದಲ್ಲಿ ಅತ್ಯುತ್ಕೃಷ್ಟವಾದುದಾಗಿದೆ. ಅದು ದೇವಸಂಪ್ರೀತಿಯ ಮಾರ್ಗವೂ ಆಗಿದೆ. ಹೀಗಿರುತ್ತಾ, ಅಕ್ರಮ ಮತ್ತು ಹಕ್ಕು ಉಲ್ಲಂಘನೆ ನಡೆಯುತ್ತಿರುವಾಗ ಅದರ ವಿರುದ್ಧ ಮೌನವಾಗಿರಬೇಕೆಂದು ಇಸ್ಲಾಮ್ ಅಪೇಕ್ಷಿಸಿದೆಯೆಂದು ಹೇಳಲು ಯಾರಿಗಾದರೂ ಸಾಧ್ಯವಿದೆಯೇ? ಪ್ರಾಯಶಃ ಪಕ್ಷಪಾತ ಮನೋಭಾವದ ವಕ್ರಬುದ್ಧಿಯವರಷ್ಟೇ ಹಾಗೆ ಆರೋಪಿಸಬಹುದು.

ನಾವು ಈ ಅಧ್ಯಾಯದಲ್ಲಿ ಉದ್ಧರಿಸಿರುವ ಕುರ್‌ಆನ್ ವಾಕ್ಯಗಳು, ರಚನಾತ್ಮಕ ಕರ್ಮವಿಲ್ಲದೆ ಪೊಳ್ಳು ವ್ಯಾಮೋಹದಲ್ಲಿ ತಲ್ಲೀನರಾಗಿರುವುದನ್ನು ನಿಷೇಧಿಸುತ್ತವೆ. ಕೇವಲ

ರಾಷ್ಟ್ರ ಮತ್ತು ಸಮಾಜವಲ್ಲದೇ ಇಡೀ ಪ್ರಪಂಚದ ಯಾರಿಂದಲೂ ಬದಲಾಯಿಸಲಾಗದ ವಿಷಯಗಳ ಬಗ್ಗೆ ಅಸಂತೃಪ್ತಿ ತೋರಬಾರದೆಂದೂ ಅದು ವಿನಂತಿಸುತ್ತದೆ.

ನಾವೊಂದು ಉದಾಹರಣೆಯನ್ನು ಊಹಿಸೋಣ. ಓರ್ವ ಅಪೂರ್ವ ಸಾಧಕನಿದ್ದಾನೆ. ಆತ ಜನಪ್ರಿಯ ಮತ್ತು ಸುಪ್ರಸಿದ್ಧನಾಗಿದ್ದಾನೆ. ಇನ್ನೊಬ್ಬನು ಅವನಂತೆಯೇ ಪ್ರಸಿದ್ಧಿ ಪಡೆಯಬೇಕೆಂದು ಆಶೆ ಪಡುತ್ತಾನೆ! ಆದರೆ ಈತನಲ್ಲಿ ಅವನಂತಹ ಯಾವ ಸಿದ್ಧಿಗಳೂ ಇಲ್ಲ. ಹೀಗಿರುತ್ತಾ ಆತನ ಮನದಲ್ಲಿರುವ ಆಶೆಯನ್ನು ಪೂರೈಸಲು ಅಥವಾ ಅದರಿಂದಾಗಿ ಬೆಳೆಯುವ ಭೀಕರ ಅಸೂಯೆಯಿಂದ ಆತನನ್ನು ರಕ್ಷಿಸಲು ಸರಕಾರದಿಂದ ಏನು ತಾನೇ ಮಾಡಲಾದೀತು? ರಾಷ್ಟ್ರವು ಆತನಿಗಾಗಿ ಕಾರ್ಖಾನೆಗಳಲ್ಲಿ ಪ್ರತಿಭೆಯನ್ನು ತಯಾರಿಸಬೇಕೇ?

ಇನ್ನೊಂದು ಉದಾಹರಣೆಯನ್ನು ನೋಡಿರಿ: ಸೌಂದರ್ಯದ ಪರ್ಯಾಯವಾಗಿರುವ ಓರ್ವಳು ಯುವತಿ. ಹೃದಯಗಳು ಆಕೆಯತ್ತ ಸೆಳೆಯಲ್ಪಡುತ್ತವೆ. ಕಣ್ಣುಗಳು ಆಕೆಯ ಸುತ್ತಲೂ ನಲಿದಾಡುತ್ತವೆ. ಸೌಂದರ್ಯ ಮತ್ತು ಆಕರ್ಷಣೆಯಿಲ್ಲದ ಇನ್ನೊರ್ವಳಿದ್ದಾಳೆ. ಸುಂದರವಾಗಿ ಅಲಂಕರಿಸಿ ಅನ್ಯರನ್ನು ಸೆಳೆಯಲು ಆಕೆಯೂ ಹವಣಿಸುತ್ತಾಳೆ. ಇಲ್ಲಿ ಆಕೆ ಬಯಸುವ 'ಸಮಾನತೆ'ಯನ್ನು ಸಾಧಿಸಲು ಸರಕಾರದಿಂದ ಏನು ಮಾಡಲಾದೀತು?

ಇನ್ನು ಪರಸ್ಪರ ಪ್ರೇಮ ಬಂಧನದಲ್ಲಿರುವ ಈರ್ವರು ದಂಪತಿಗಳ ಬಗ್ಗೆ ಆಲೋಚಿಸೋಣ. ಅವರಿಗೆ ಕಣ್ಮನ ಸೆಳೆಯುವ ಪುಟಾಣಿಗಳಿದ್ದಾರೆ. ಸಂತೃಪ್ತಿ ತುಂಬಿ ತುಳುಕುವ ದಾಂಪತ್ಯ ಜೀವನ. ಅದೋ, ಇನ್ನೆರಡು ದಂಪತಿಯರಿದ್ದಾರೆ. ಅವರಿಗೆ ಪರಸ್ಪರ ಹೊಂದಿ ಬಾಳಲಾಗುವುದಿಲ್ಲ. ಆಧುನಿಕ ವೈದ್ಯಕೀಯದ ಎಲ್ಲ ಚಿಕಿತ್ಸೆಗಳನ್ನು ನಡೆಸಿಯೂ ಅವರಿಗೆ ಮಗು ಹುಟ್ಟುವುದಿಲ್ಲ. ಈ ನಿಟ್ಟಿನಲ್ಲಿ ಅವರಿಗೆ ಅಲಭ್ಯವಾಗಿರುವುದನ್ನು ಒದಗಿಸಲು ಈ ಲೋಕದಲ್ಲಿರುವ ಯಾವ ಶಕ್ತಿಯಿಂದ ತಾನೇ ಸಾಧ್ಯ?

ಜೀವನದಲ್ಲಿ ಇಂತಹ ನಿದರ್ಶನಗಳು ಸರ್ವಸಾಮಾನ್ಯವಾಗಿವೆ. ಆ ಸಮಸ್ಯೆಗಳು ಸಾಮಾಜಿಕ ನೀತಿಯ ಜ್ಯಾರಿ ಅಥವಾ ಆರ್ಥಿಕ ಸಮತೋಲನದಿಂದ ಪರಿಹಾರವಾಗದು. ಯಾಕೆಂದರೆ ಅವು ಆರ್ಥಿಕ ಅಂಶಗಳನ್ನು ಮೀರಿದ ಕೆಲವು ಮೌಲ್ಯಗಳನ್ನು ಅವಲಂಬಿಸಿವೆ. ಆತ್ಮಸಂತೃಪ್ತಿಯ ಕರೆಯಿಂದಲ್ಲದೆ ಅದಕ್ಕೆ ಪರಿಹಾರ ಅಸಾಧ್ಯ. ಲೌಕಿಕ ಮಾನದಂಡ ಗಳಿಗತೀತವಾಗಿ ಮಾನವನರನ್ನು ಅಳೆಯುವ ಅಲ್ಲಾಹನ ಅಪಾರ ಔದಾರ್ಯದಿಂದ ಮನಃ ಶ್ಯಾಂತಿ ಪಡೆಯಲು ಅವರೊಡನೆ ವಿನಂತಿಸಿರಿ. ಆತನು ಭೂಮಿಯಲ್ಲಿ ನಿರಾಕರಿಸಲ್ಪಟ್ಟವನಿಗೆ ಆಕಾಶದಿಂದ ಸುಖಾನುಕಂಪದ ಪ್ರತಿಫಲವನ್ನು ನೀಡುವವನಾಗಿರುವನು!

ಹೆಚ್ಚೇಕೆ, ಆರ್ಥಿಕ ಮತ್ತು ಸಾಮಾಜಿಕ ರಂಗದ ಸ್ಥಿತಿಯೂ ಹಾಗಿಲ್ಲವೇ? ಇಹಲೋಕದಲ್ಲಿ ಸಂಪೂರ್ಣ ಸಮಾನತೆಯನ್ನು ಸಾಧಿಸಿರುವೆವೆಂದು ಹೇಳಲು ಯಾರಿಗೆ ಸಾಧ್ಯವಿದೆ? ಲೋಕದ ಯಾವ ರಾಷ್ಟ್ರದಲ್ಲಿ ದುಡಿಮೆ ಮತ್ತು ವೇತನಗಳಲ್ಲಿ ಸಮಾನತೆಯಿದೆ? ಸೋವಿಯತ್ ರಶ್ಯದ ಓರ್ವ ಕಾರ್ಮಿಕನನ್ನೇ ನೋಡೋಣ. ಆತನಿಗೆ ಓರ್ವ ಇಂಜಿನಿಯರನಾಗಬೇಕೆಂಬ ಅದಮ್ಯ ಆಕಾಂಕ್ಷೆಯಿದೆ. ಆದರೆ ಈ ನಿಟ್ಟಿನಲ್ಲಿ ಆತನಿಗೆ ನ್ಯಾಯೋಚಿತವಾದ ಎಲ್ಲ ಸೌಲಭ್ಯಗಳನ್ನು ಒದಗಿಸಿದರೂ ಆತನ ಬೌದ್ಧಿಕ ಅಸಾಮರ್ಥ್ಯ ಅದಕ್ಕೆ ತಡೆಯಾಗಿದೆ! ಅಥವಾ ಇನ್ನೋರ್ವ ಕಾರ್ಮಿಕನನ್ನು ನೋಡೋಣ. ಕೆಲಸಕ್ಕೆ ತಕ್ಕ ವೇತನವೆಂದು ನಿರ್ಣಯಿಸಿದಾಗ, ಓರ್ವ ದುರ್ಬಲ ಕಾರ್ಮಿಕನು ತನಗಿಂತ ಹೆಚ್ಚು ವೇತನ ಪಡೆಯುವ ಸಮರ್ಥ ಕಾರ್ಮಿಕನನ್ನು ಕಂಡಾಗ ಆತನಂತಾಗಬೇಕೆಂದು ಆಸೆ ಪಡುತ್ತಾನೆ. ಇಂತಹ ವಿಷಯಗಳಲ್ಲಿ ರಾಷ್ಟ್ರದಿಂದ ಏನು ಮಾಡಲಾದೀತು? ಕಳವಳ, ಸಂಕುಚಿತತೆ, ಮೋಹಭಂಗ, ಅಸೂಯೆಗಳಿಂದ ತುಂಬಿದ ತನ್ನ ಜೀವನದಲ್ಲಿ ಆತನು ಸೌಭಾಗ್ಯವಂತನಾಗುವುದು ಹೇಗೆ? ಆಶೆ-ಅಭಿಲಾಷೆಗಳನ್ನು ಆ ಸರ್ವಶಕ್ತನಲ್ಲಿ ಅರ್ಪಿಸಿ, ಆತನಿಂದ ನೆಮ್ಮದಿ ಯಾಚಿಸುವುದಲ್ಲದೆ ತನ್ನ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬಳಸಿ ಸೇವೆ ಸಲ್ಲಿಸಲು ಸಾಧ್ಯವಾಗುವುದಾದರೂ ಹೇಗೆ? ಬಾಣ ಅಥವಾ ಬಂದೂಕುಗಳನ್ನು ಬಳಸಿ ಅದನ್ನು ಸಾಧಿಸಬೇಕೇ? ಅಥವಾ ಆಂತರಿಕ ಪ್ರೇರಣೆ, ಆತ್ಮ ಸಂತೃಪ್ತಿ ಮತ್ತು ಆತ್ಮ ಸಂತರ್ಪಣೆಯಿಂದ ಸಾಧಿಸಬೇಕೇ?

ಇದುವೇ ಇಸ್ಲಾಮಿನ ಸಂದೇಶ: ನ್ಯಾಯಬದ್ಧ ಅಭಿಲಾಷೆಗಳ ಈಡೇರಿಕೆಗಾಗಿ ಪ್ರಯತ್ನಿಸಿರಿ. ಯಾರಿಂದಲೂ ಬದಲಾಯಿಸಲಾಗದ ವಿಷಯಗಳನ್ನು ಅಂಗೀಕರಿಸಿರಿ. ಆದರೆ ತೊಡೆದು ಹಾಕಬಹುದಾದ ಅಕ್ರಮವು ತಾಂಡವವಾಡುತ್ತಿದ್ದರೆ ಅದರ ವಿರುದ್ಧ ಕ್ರಾಂತಿಯೆಬ್ಬಿಸಿ ಅದನ್ನು ಕಿತ್ತೆಸೆಯದೆ ಅಲ್ಲಾಹನ ಸಂಪ್ರೀತಿ ಲಭ್ಯವಾಗದು: "... ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವವನು ವಧಿಸಲ್ಪಡಲಿ ಅಥವಾ ವಿಜಯಗಳಿಸಲಿ-ಅವನಿಗೆ ನಾವು ಖಂಡಿತವಾಗಿಯೂ ಮಹತ್ತಾದ ಪ್ರತಿಫಲ ನೀಡುವೆವು." (ಅನ್ನಿಸಾ:74)

ಲೋಕದಲ್ಲಿ ಯಾವುದಾದರೊಂದು ಧರ್ಮವು ಮಾನವನನ್ನು ಮಂಕುಗೊಳಿಸುವ ಅಫೀಮಾಗಿದ್ದರೆ- ಆ ಧರ್ಮವು ಅಕ್ರಮಗಳನ್ನು ವಿರೋಧಿಸಿ, ಅಕ್ರಮವನ್ನು ಸಹಿಸಿಕೊಂಡಿರುವವರಿಗೆ ಶಿಕ್ಷೆಯ ಎಚ್ಚರಿಕೆ ನೀಡಿರುವಂತಹ ಇಸ್ಲಾಮ್ ಖಂಡಿತ ಅಲ್ಲ!

❦

# ಇಸ್ಲಾಮ್ ಮತ್ತು ಕೋಮುವಾದ

"ಇಸ್ಲಾಮಿ ಆಡಳಿತದ ಅಧೀನದಲ್ಲಿ ಮುಸ್ಲಿಮೇತರರ ಸ್ಥಿತಿಯು ತೀರಾ ಜಟಿಲ ಸಮಸ್ಯೆಯೆಂದು ಆಗಾಗ್ಗೆ ಹೇಳುವುದು ಕೇಳಿಸುತ್ತಿದೆ. ಮುಸ್ಲಿಮ್ ಮತ್ತು ಮುಸ್ಲಿಮೇತರರ ಸಂಘರ್ಷಕ್ಕೆ ಪ್ರೇರಕವಾದೀತೆಂಬ ಭೀತಿಯಿಂದ ಆ ಬಗೆಗಿನ ಚರ್ಚೆಯಿಂದ ಜನರು ದೂರವುಳಿಯುತ್ತಾರೆ. ಆದರೆ ನಮ್ಮವರೊಡನೆ ಅಥವಾ ಇತರರೊಡನೆಯಾದರೂ ನೇರವಾಗಿ ಹೇಳುವುದೇ ನನ್ನ ಸ್ವಭಾವ. ಆ ನೇರವಾದ ಶೈಲಿಯಲ್ಲಿಯೇ ಪೌರ್ವಾತ್ಯ ಮುಸ್ಲಿಮ್ ಲೋಕದ ಕ್ರೈಸ್ತರೊಡನೆ ನನ್ನದೊಂದು ಪ್ರಶ್ನೆ! ಇಸ್ಲಾಮಿ ಆಡಳಿತದ ಬಗ್ಗೆ ನಿಮಗಿರುವ ಭೀತಿಯೇನು? ಅದರ ಸಿದ್ಧಾಂತಗಳೋ? ಅಥವಾ ಅದರ ವ್ಯಾವಹಾರಿಕ ಕ್ರಮಗಳೋ?

ಅದರ ಅನುಶಾಸನ ಹೀಗಿದೆ:

"ಧರ್ಮ ಸಂಬಂಧವಾಗಿ ನಿಮ್ಮೊಡನೆ ಯುದ್ಧ ಮಾಡದ ಹಾಗೂ ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಹಾಕದವರ ಮಾತು. ಅವರ ಮೇಲೆ ನೀವು ಕರುಣೆ ತೋರುವುದರಿಂದಲೂ ಅವರೊಡನೆ ನ್ಯಾಯದಿಂದ ವರ್ತಿಸುವುದರಿಂದಲೂ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ."

(ಅಲ್‌ಮುಮ್ತಹಿನ: :8)

"ಗ್ರಂಥ ಕೊಡಲ್ಪಟ್ಟವರ ಆಹಾರವೂ ನಿಮಗೆ ಹಲಾಲ್ ಆಗಿದೆ. ನಿಮ್ಮ ಆಹಾರ ಅವರಿಗೂ ಹಲಾಲ್ ಆಗಿದೆ. ಸತ್ಯವಿಶ್ವಾಸಿನಿಯರಾದ ಸುಶೀಲ ನಾರಿಯರೂ, ನಿಮಗಿಂತ ಮುನ್ನ ಗ್ರಂಥ ಕೊಡಲ್ಪಟ್ಟವರಲ್ಲಿನ ನಾರಿಯರೂ ನಿಮಗೆ ಹಲಾಲ್‌ಗೊಳಿಸಲಾಗಿದೆ."

(ಅಲ್‌ಮಾಇದಃ :5)

ಕರ್ಮ ಶಾಸ್ತ್ರದ ಸಾಮಾನ್ಯ ತತ್ವ ಹೀಗಿದೆ:

"ನಮ್ಮಂತಹ ಹಕ್ಕು ಬಾಧ್ಯತೆಗಳು ಅವರಿಗೂ ಇವೆ." ಅವರೊಂದಿಗೆ ಒಳ್ಳೆಯ ರೀತಿಯಲ್ಲಿ ನ್ಯಾಯನೀತಿಗಳಿಂದ ವರ್ತಿಸಲು ಅದು ಆಜ್ಞಾಪಿಸಿದೆ. ಆರಾಧನೆಯನ್ನು ಬಿಟ್ಟು ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಇತರ ಎಲ್ಲ ಹಕ್ಕುಬಾಧ್ಯತೆ ಮತ್ತು ಪೌರಹಕ್ಕುಗಳಲ್ಲಿ ಅವರ ಹಾಗೂ ಮುಸ್ಲಿಮರ ಮಧ್ಯೆ ಅದು ಸಮಾನತೆಯನ್ನು ಬಯಸುತ್ತದೆ. ಮಾತ್ರವಲ್ಲದೇ ಅವರ ಹಾಗೂ ಮುಸ್ಲಿಮರ ಪರಸ್ಪರ ಭೇಟಿ ಮತ್ತು ಸತ್ಕಾರಗಳಿಂದ ಅವರಲ್ಲಿ ನಿಕಟ ಸಂಬಂಧ ಬೆಳೆಯಬೇಕೆಂದು ಅದು ಇಚ್ಛಿಸುತ್ತದೆ. ಅದು ಸ್ನೇಹಿತರು ಮತ್ತು ಆಪ್ತ ಮಿತ್ರರಲ್ಲಿ ನಡೆಯುವ ಕಾರ್ಯಗಳಲ್ಲವಷ್ಟೇ. ಎಲ್ಲಕ್ಕಿಂತ ಹೆಚ್ಚಾಗಿ ವೈವಾಹಿಕ ಸಂಬಂಧವು ಸ್ನೇಹ ಸಂಬಂಧವನ್ನು ಇನ್ನಷ್ಟು ಸುದೃಢಗೊಳಿಸುತ್ತದೆ.

ಪ್ರತ್ಯಕ್ಷ ಮಾದರಿಯ ಕುರಿತು ಓರ್ವ ಕ್ರೈಸ್ತ ಸಾಹಿತಿಯ ಮಾತುಗಳನ್ನು ಇಲ್ಲಿ ಉದ್ಧರಿಸುತ್ತೇನೆ. ಹಾಗಾದರೆ ನಾನು ಇಸ್ಲಾಮಿನೊಂದಿಗೆ ಪಕ್ಷಪಾತ ತೋರಿದ್ದೇನೆಂದು ಆರೋಪಿಸಲಿಕ್ಕಿಲ್ಲವಷ್ಟೆ. ಸರ್ ಆರ್ನಾಲ್ಡ್‌ರು (J.W. Arnold) ತನ್ನ 'ಪ್ರೀಚಿಂಗ್ ಆಫ್ ಇಸ್ಲಾಮ್' (Preaching of Islam) ಎಂಬ ಕೃತಿಯಲ್ಲಿ ಹೀಗೆ ಬರೆದಿದ್ದಾರೆ:

"ಅರಬ್ ಮುಸ್ಲಿಮರು ಮತ್ತು ಕ್ರೈಸ್ತರಲ್ಲಿದ್ದ ಪರಸ್ಪರ ಅನ್ಯೋನ್ಯತೆಯನ್ನು ನೋಡುವಾಗ, ಜನರನ್ನು ಇಸ್ಲಾಮಿಗೆ ಆಕರ್ಷಿಸುವುದರಲ್ಲಿ ಶಕ್ತಿಯು ಪ್ರಧಾನ ಪಾತ್ರವಹಿಸಿಲ್ಲವೆಂದು ನಮಗೆ ವ್ಯಕ್ತವಾಗುತ್ತದೆ. ಕೆಲವು ಕ್ರೈಸ್ತ ಗೋತ್ರಗಳೊಡನೆ ಸ್ವತಃ ಮುಹಮ್ಮದರೇ(ಸ) ಒಪ್ಪಂದ ಮಾಡಿಕೊಂಡಿದ್ದರು ಅವರ ಸಂರಕ್ಷಣೆಯ ಹೊಣೆಯನ್ನು ಸ್ವಯಂ ವಹಿಸಿಕೊಂಡು, ಅವರ ಧಾರ್ಮಿಕ ಆಚಾರ ಮತ್ತು ಆರಾಧನೆಗಳಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿದ್ದರು. ಹಾಗೆಯೇ ಚರ್ಚ್‌ನ ಮುತ್ಸದ್ದಿಗಳಿಗೆ ಅವರ ಹಳೆಯ ಅಧಿಕಾರ ಪ್ರಭಾವಗಳನ್ನು ಶಾಂತ ಹಾಗೂ ಸಮಾಧಾನಕರ ರೀತಿಯಲ್ಲಿ ಅನುಭವಿಸುವ ಅವಕಾಶ ನೀಡಿದ್ದರು. (ಪುಟ 47-48)

ಅವರು ಮುಂದೆ ಹೀಗೆ ಬರೆದಿದ್ದಾರೆ:

"ನಾನು ಈ ಹಿಂದೆ ವಿವರಿಸಿರುವಂತೆ, ವಿಜೇತ ಮುಸ್ಲಿಮ್ ಯೋಧರು ಹಿಜರಿ ಒಂದನೇ ಶತಮಾನದಲ್ಲಿಯೂ ಆ ಬಳಿಕದ ಶತಮಾನಗಳಲ್ಲಿಯೂ ಅರಬೀ ಕ್ರೈಸ್ತರೊಡನೆ ತೋರಿದ ಅಸಹಿಷ್ಣುತೆಯ ಮಾದರಿಗಳಿಂದ ವಸ್ತುನಿಷ್ಠವಾಗಿ ನಾವೊಂದು ವಿಷಯವನ್ನು ತಿಳಿದುಕೊಳ್ಳಬಹುದು. ಅರ್ಥಾತ್ ಪ್ರಸ್ತುತ ಕ್ರೈಸ್ತ ಗೋತ್ರಗಳು ತಮ್ಮ ಸ್ವಂತ ಹಾಗೂ ಸ್ವತಂತ್ರ ಅಭಿಪ್ರಾಯ ಮತ್ತು ನಿರ್ಧಾರದಂತೆ ಇಸ್ಲಾಮ್ ಸ್ವೀಕರಿಸಿದ್ದರು. ಇಂದಿಗೂ ಮುಸ್ಲಿಮ್ ಸಮಾಜದಲ್ಲಿಜೀವಿಸುತ್ತಿರುವ ಅರಬ್ ಕ್ರೈಸ್ತರು ಈ ಸಹಿಷ್ಣುತೆಯ ಪ್ರತ್ಯಕ್ಷ ದೃಷ್ಟಾಂತವಾಗಿದ್ದಾರೆ." (ಪುಟ: 51)

"ಮುಸ್ಲಿಮ್ ಸೇನೆಯು ಜೋರ್ಡಾನ್‌ನ ಕಣಿವೆಗೆ ತಲಪಿದಾಗ, ಸೇನಾ ನಾಯಕ ಅಬೂ ಉಬೈದ ಮತ್ತು ಸಂಗಡಿಗರು 'ಫಹ್‌ಲಿ'ಯಲ್ಲಿದ್ದರು. ಆ ನಾಡಿನ ಕ್ರೈಸ್ತರು ಅರಬರಿಗೆ ಪತ್ರ ಬರೆದರು:

"ಎಲೈ ಮುಸ್ಲಿಮರೇ!ನಮಗೆ ರೋಮನರಿಗಿಂತ ನೀವೇ ಹೆಚ್ಚು ಆಪ್ತರು. ಅವರು ಸ್ವಧರ್ಮೀಯರಾಗಿದ್ದರೂ ನೀವೇ ನಮ್ಮೊಡನೆ ಕರಾರು ಪಾಲಿಸುವವರೂ ಆಗಿದ್ದೀರಿ. ನಮ್ಮ ವಿರುದ್ಧ ನಡೆಯುವ ಅಕ್ರಮಗಳನ್ನು ತಡೆದು, ನಮಗೆ ರಕ್ಷಣೆ ನೀಡಲು ನೀವೇ ಹೆಚ್ಚು ಯೋಗ್ಯರಾಗಿದ್ದೀರಿ." (ಪುಟ: 53)

ಅರಬರು ಸಿರಿಯನ್ ನಾಡುಗಳಿಂದ ರೋಮನರನ್ನು ಸಾವಧಾನವಾಗಿ ಹೊರಹಾಕಿದ ಕ್ರಿ.ಶ. 633-639ರ ಯುದ್ಧಕಾಲದಲ್ಲಿ ಆ ನಾಡಿಗರ ಅಭಿಪ್ರಾಯವೂ ಸಾಮಾನ್ಯ ಹೀಗೆಯೇ

ಇತ್ತು. 637ರಲ್ಲಿ ಡಮಾಸ್ಕಸ್, ಅರಬರೊಂದಿಗೆ ಒಪ್ಪಂದ ಮಾಡಿಕೊಂಡು, ಇತರ ಶರ್ತಗಳೊಂದಿಗೆ ಕೊಳ್ಳೆ ಮತ್ತು ಕೊಳ್ಳಿಯಿಡುವಿಕೆಯ ಭೀತಿಯಿಂದ ಮುಕ್ತರಾದುದನ್ನು ನೋಡಿದ ಸಿರಿಯದ ಇತರ ಪ್ರಾಂತ್ಯಗಳೂ ಅರಬರೂ ಆ ಮಾದರಿಯನ್ನು ಅನುಸರಿಸಿದುವು. 'ಹಿಂಸ್' ಮತ್ತು 'ಮನ್‌ಬಿಜ್' ಮುಂತಾದ ರಾಷ್ಟ್ರಗಳು ಅರಬರೊಡನೆ ಒಪ್ಪಂದ ಮಾಡಿದುವು. ಜೆರೂಸಲೇಮಿನ ಪೇಟ್ರಿಯಾರ್ಕನು ಇಂತಹ ಒಪ್ಪಂದದಿಂದ ಆ ನಗರವನ್ನು ರಕ್ಷಿಸಿದ್ದನು. ಅಧರ್ಮಿಯಾದ ಚಕ್ರಾಧಿಪತಿಯು ಆತನ ಮಾರ್ಗವನ್ನು ಅವಲಂಬಿಸಲು ನಿರ್ಬಂಧಿಸುವನೋ ಎಂಬ ಭೀತಿಯಿದ್ದ ವೇಳೆ, ತಮ್ಮೊಡನೆ ಒಪ್ಪಂದ ಮಾಡಿದ ಜನರಿಗೆ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದ ಮುಸ್ಲಿಮರ ನೀತಿಯು ಆ ರಾಷ್ಟ್ರದ ಜನರಲ್ಲಿ ಒಲವು ಮೂಡಿಸಿತು. ಇದರಿಂದಾಗಿ ಅವರಿಗೆ ಮುಸ್ಲಿಮರ ಸಂಬಂಧವು ರೋಮ್ ಸಾಮ್ರಾಜ್ಯ ಅಥವಾ ಇನ್ನಾವುದೇ ಕ್ರೈಸ್ತ ರಾಷ್ಟ್ರಕ್ಕಿಂತ ಹೆಚ್ಚು ಪ್ರಿಯವಾಯಿತು. ಆರಂಭದಲ್ಲಿ ವಿಜೇತ ಅರಬರ ಬಗೆಗಿನ ಜೈತ್ರ ಯಾತ್ರೆಯ ಭೀತಿಯು ಕ್ರಮೇಣ ಪರಸ್ಪರ ಆಪ್ತ ಸ್ನೇಹವಾಗಿ ಮಾರ್ಪಟ್ಟಿತು." (ಪುಟ: 55)

ಇದು ಇಸ್ಲಾಮಿನ ಬಗ್ಗೆ ಓರ್ವ ಕ್ರೈಸ್ತ ವ್ಯಕ್ತಿಯ ಮಾತುಗಳಾಗಿವೆ. ಹೀಗಿರುತ್ತಾ, ಇಸ್ಲಾಮೀ ಆಡಳಿತದ ಕುರಿತು ಕ್ರೈಸ್ತರಿಗೆ ಇನ್ನಾವ ಭೀತಿಯಿದೆ?

ಅವರು ತಮ್ಮ ವಿರುದ್ಧ ಮುಸ್ಲಿಮರ ಕೋಮು ಪಕ್ಷಪಾತವನ್ನು ಕಂಡು ಹೆದರುತ್ತಾರೆಯೇ? ಹಾಗಿದ್ದರೆ ಅವರಿಗೆ ಕೋಮುವಾದದ ಅರ್ಥವೇ ತಿಳಿದಿಲ್ಲವೆಂದು ಹೇಳಬೇಕಾಗುತ್ತದೆ. ಕೆಲವು ಐತಿಹಾಸಿಕ ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ:

ಸ್ಪೈಯ್ನ್‌ನಲ್ಲಿ ಕ್ರೈಸ್ತಚರ್ಚುಗಳು ಸ್ಥಾಪಿಸಿದ್ದ ಧರ್ಮದ್ರೋಹ ವಿಚಾರಣಾಸಭೆಗಳ ಪ್ರಥಮ ಗುರಿಯು ಮುಸ್ಲಿಮರೇ ಆಗಿದ್ದರು. ಅವು ಇತಿಹಾಸದಲ್ಲಿಯೇ ಅತ್ಯಂತ ಕ್ರೂರ ಶಿಕ್ಷಾ ಸಂಪ್ರದಾಯವನ್ನು ಜ್ಯಾರಿಗೊಳಿಸಿದ್ದುವು. ಜನರನ್ನು ಜೀವಂತವಾಗಿ ಬೆಂಕಿಗೆ ಹಾಕಿ ಸುಡುವುದು, ಉಗುರುಗಳನ್ನು ಕಿತ್ತು ತೆಗೆಯುವುದು, ಕಣ್ಣು ಕೀಳುವುದು, ಕೈಕಾಲುಗಳನ್ನು ಕಡಿಯುವುದೇ ಮುಂತಾದ ಕ್ರೂರ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ತಮ್ಮ ಧರ್ಮವನ್ನು ತೊರೆದು ಕ್ರೈಸ್ತ ಧರ್ಮದ ಯಾವುದಾದರೂ ನೀತಿಯನ್ನು ಅಂಗೀಕರಿಸಲಿಕ್ಕಾಗಿ ಹೀಗೆಲ್ಲಾ ಹಿಂಸಿಸಲಾಗುತ್ತಿತ್ತು. ಆದರೆ, ಪೌರ್ವಾತ್ಯ ಲೋಕದಲ್ಲಿ ಕ್ರೈಸ್ತರಿಗೆ ಇಂತಹ ಅನುಭವ ಎಂದಾದರೂ ಆಗಿದೆಯೇ?

ಐರೋಪ್ಯರು ಆಳುತ್ತಿದ್ದ ರಾಷ್ಟಗಳಲ್ಲಿ ಮುಸ್ಲಿಮರ ವಂಶ ನಿರ್ಮೂಲನ ಧ್ಯೇಯದಿಂದ ಸಾಮೂಹಿಕ ಹತ್ಯೆಗಳು ನಡೆಯುತ್ತಿದ್ದುವು. ಯುಗೋಸ್ಲಾವಿಯಾ, ಅಲ್ಬೇನಿಯ,

ರಶ್ಯ, ಉತ್ತರ ಆಫ್ರಿಕಾ, ಝಂಜಿಬಾರ್, ಮಲಯ ಮುಂತಾದೆಡೆಗಳಲ್ಲಿಯೂ ಅದೇ ತಾಂಡವವಾಡುತ್ತಿದೆ. ಒಮ್ಮೆ ಸಾಂಸ್ಕೃತಿಕ ಕ್ರಾಂತಿಯ ಹೆಸರಿನಲ್ಲಿ ನಡೆದರೆ, ಇನ್ನೊಮ್ಮೆ ಕಾನೂನು ಪಾಲನೆಯ ಹೆಸರಿನಲ್ಲಿ ನಡೆಯುತ್ತಿದೆ.

ಇವೆಲ್ಲವನ್ನು ಬದಿಗಿಟ್ಟು, ಕೇವಲ ಇತಿಯೋಪಿಯದ ಉದಾಹರಣೆಯನ್ನು ನೋಡೋಣ. ಅದರಿಂದ ಸ್ಪಷ್ಟ ಪುರಾವೆಗಳು ದೊರೆಯುತ್ತವೆ. ಅದು ಪೌರಾಣಿಕ ಕಾಲದಿಂದಲೇ ನಮ್ಮೊಂದಿಗೆ, ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕವಾಗಿ ನಿಕಟ ಸಂಬಂಧ ಹೊಂದಿದೆ. ಇತಿಯೋಪಿಯವು ಈಜಿಪ್ಟ್‌ನ ಚರ್ಚ್‌ಗಳನ್ನು ಅನುಕರಿಸುತ್ತಿದೆಯೆಂಬುದು ಸುಪ್ರಸಿದ್ಧವಾಗಿದೆ. ಅಲ್ಲಿ ಮುಸ್ಲಿಮರು ಮತ್ತು ಕ್ರೈಸ್ತರು ಬೆರೆತು ಜೀವಿಸುತ್ತಿದ್ದಾರೆ. ಅಲ್ಲಿ ಒಟ್ಟು ಜನಸಂಖ್ಯೆಯ 35 ಶೇಕಡಾ ಮುಸ್ಲಿಮರು ಮತ್ತು 65 ಶೇಕಡಾ ಮುಸ್ಲಿಮೇತರರೆಂದು ಅಂದಾಜಿಸಲಾಗಿದೆ. ನಾವು ಈ ಕನಿಷ್ಟ ಅಂಕಿ-ಅಂಶವನ್ನೇ ಸ್ವೀಕರಿಸೋಣ!

ಇತಿಯೋಪಿಯದಲ್ಲಿ ಮುಸ್ಲಿಮ್ ವಿದ್ಯಾರ್ಥಿಗಳಿಗಾಗಿ ಒಂದೇ ಒಂದು ಸರಕಾರೀ ಧಾರ್ಮಿಕ ಶಾಲೆಯಿಲ್ಲ. ಅರಬೀ ಭಾಷೆ ಕಲಿಸುವ ಒಂದಾದರೂ ವಿದ್ಯಾಲಯವಿಲ್ಲ. ಮುಸ್ಲಿಮರು ಸ್ವಂತ ಖರ್ಚಿನಿಂದ ನಡೆಸುವ ಶಾಲೆಗಳನ್ನೂ ತೆರಿಗೆ ಮತ್ತು ಕಾನೂನುಗಳ ಅಡಕತ್ತರಿಯಲ್ಲಿ ಸಿಲುಕಿಸಿ ತೊಂದರೆ ಪಡಿಸಲಾಗುತ್ತಿದೆ. ಮುಚ್ಚಿದ ಶಾಲೆಗಳನ್ನು ಪುನರಾರಂಭಿಸಲು ಪ್ರಯತ್ನಿಸುವವರನ್ನು ನಿರಾಶೆಗೊಳಿಸುವಂತಹ ಕ್ರಮ ಕೈಕೊಳ್ಳಲಾಗುತ್ತದೆ. ಆದ್ದರಿಂದ ಮುಸ್ಲಿಮರು ಧಾರ್ಮಿಕ ಶಿಕ್ಷಣಕ್ಕಾಗಿ ಪ್ರಾಚೀನ ಮಾರ್ಗಗಳನ್ನು ಅವಲಂಬಿಸುವುದು ಅನಿವಾರ್ಯವಾಗಿದೆ.

ಈಚೆಗಿನ ವರೆಗೆ - ಅಂದರೆ ಇಟೆಲಿಯನ್ ಆಕ್ರಮಣಕ್ಕಿಂತ ಸ್ವಲ್ಪ ಮುಂಚೆ-ಓರ್ವ ಇತಿಯೋಪಿಯನ್ ಕ್ರೈಸ್ತನ ಸಾಲಗಾರನಾಗಿರುವ ಮುಸ್ಲಿಮನು ಅದನ್ನು ವಾಯಿದೆಗೆ ಮರಳಿಸದಿದ್ದರೆ ಆತನು ಗುಲಾಮನಾಗ ಬೇಕಾಗಿತ್ತು. ಸರಕಾರದ ಅನುಮತಿಯಿಂದಲೇ ಆತನ ಕ್ರಯ-ವಿಕ್ರಯ ನಡೆಸಬಹುದಾಗಿತ್ತು. ದಂಡಿಸಬಹುದಾಗಿತ್ತು.

ಹಾಗೆಯೇ ಜನಸಂಖ್ಯೆಯ $^1/_3$ ರಷ್ಟಿರುವ ಮುಸ್ಲಿಮರಲ್ಲಿ ಒಬ್ಬನೇ ಒಬ್ಬನಾದರೂ ಸರಕಾರೀ ನೌಕರಿ ಅಥವಾ ಮಂತ್ರಿಮಂಡಲದಲ್ಲಿಲ್ಲ. ಈಜಿಪ್ಟ್‌ನ ಕ್ರೈಸ್ತ ಚರ್ಚ್‌ಗಳು ಅಲ್ಲಿನ ಧಾರ್ಮಿಕ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರೂ ಹೀಗೆಲ್ಲಾ ನಡೆಯುತ್ತಿದೆಯೆಂಬುದು ಗಮನಾರ್ಹ!

ಮುಸ್ಲಿಮ್ ಲೋಕದಲ್ಲಿ ಕ್ರೈಸ್ತರು ಇಂತಹ ಪರಿಸ್ಥಿತಿಯನ್ನು ಎಂದಾದರೂ ಅನುಭವಿಸಿದ್ದಾರೆಯೇ? ಅಥವಾ ಧಾರ್ಮಿಕ ಹಾಗೂ ನೈಸರ್ಗಿಕವಾಗಿ ನಿಕಟವಾಗಿರುವ ಆ ರಾಷ್ಟ್ರದ ವರ್ತನೆಯನ್ನು ಅವರು ಅಪೇಕ್ಷಿಸುತ್ತಾರೆಯೇ?

ಇದುವೇ ನೈಜ ಕೋಮುವಾದ. ಹಾಗಿದ್ದರೆ ಅವರಿಗೆ ಈಜಿಪ್ಟ್‌ನಲ್ಲಿ ಯಾವ ಭೀತಿಯಿದೆ?

ಕಮ್ಯೂನಿಸ್ಟರ ಅಭಿಪ್ರಾಯದಂತೆ, ಆರ್ಥಿಕ ಅಸ್ತಿತ್ವವೇ ಮಾನವನ ನೈಜ ಅಸ್ತಿತ್ವವಾಗಿದೆ. ಮುಸ್ಲಿಮ್ ಲೋಕದಲ್ಲಿ ಕ್ರೈಸ್ತರಿಗೆ ಒಡೆತನ ಹಕ್ಕು, ಸಂಪಾದನೆ ಮತ್ತು ಖರ್ಚು ಮಾಡುವ ಸ್ವಾತಂತ್ರ್ಯವನ್ನು ನೀಡಲಾಗಿಲ್ಲವೇ?

ಬಿಷ್ರೀಹನಾ ಎಂಬೋರ್ವ ಕ್ರೈಸ್ತನು ಫುಆದ್ ರಾಜರ ಸಂದರ್ಶನದ ವೇಳೆ, ಅವರ ಸ್ವಾಗತಕ್ಕಾಗಿ ತನ್ನ ಕಿತ್ತಳೆ ತೋಟದ ಫಲಭರಿತ ಮರಗಳನ್ನು ಕಿತ್ತು 25 ಕಿಲೋಮೀಟರ್ ಉದ್ದಕ್ಕೆ ದಾರಿಬದಿಯಲ್ಲಿ ತೋರಣವಾಗಿ ಕಟ್ಟಿ ಬೆಳೆಸುತ್ತಾನೆ. ಅಮಿತ ಸಂಪಾದನಾ ಸ್ವಾತಂತ್ರ್ಯವಿಲ್ಲದಿದ್ದರೆ ಇದು ಸಾಧ್ಯವಿತ್ತೇ?

ವಿದ್ಯಾಭ್ಯಾಸದ ಅವಸ್ಥೆಯೇನು? ಉದ್ಯೋಗ ದೊರೆಯುವ ಹಾಗೂ ಹುದ್ದೆಯಲ್ಲಿ ಹಂತ ಹಂತವಾಗಿ ಭಡ್ತಿ ಪಡೆಯುವ ಅವಕಾಶ ಹೇಗಿದೆ? ಧರ್ಮದ ಹೆಸರಿನಲ್ಲಿ ಈ ಬಗ್ಗೆ ಏನಾದರೂ ಪಕ್ಷಪಾತಕ್ಕೆ ಅವರು ಗುರಿಯಾಗಿದ್ದಾರೆಯೇ?

ಆದರೆ ಕೇವಲ ಆರ್ಥಿಕ ಅಸ್ತಿತ್ವವೇ ಮಾನವನ ಅಸ್ತಿತ್ವಕ್ಕೆ ಆಧಾರವೆಂಬ ಕಮ್ಯೂನಿಸ್ಟರ ವಾದವನ್ನು ನಾವು ಒಪ್ಪುವುದಿಲ್ಲ. ಅದರೊಂದಿಗೆ ಸೈದ್ಧಾಂತಿಕ ಮತ್ತು ಆಧ್ಯಾತ್ಮಿಕ ಅಸ್ತಿತ್ವವೂ ಇರಬೇಕೆಂದು ನಾವು ಹೇಳುತ್ತೇವೆ.

ಧಾರ್ಮಿಕ ವಿಶ್ವಾಸ ಮತ್ತು ಆರಾಧನಾ ಕರ್ಮಗಳ ಹೆಸರಿನಲ್ಲಿ -ಬ್ರಿಟಿಷರ ಆಡಳಿತ ಕಾಲದಲ್ಲಿ ಪರಸ್ಪರ ಕಚ್ಚಾಡಿಸಿ ಆಳುವ ನೀತಿಯಿಂದ ವಸಾಹತು ಶಾಹಿಗಳು ಉದ್ರೇಕಿಸಿದ ವಿರಳ ಘಟನೆಗಳ ಹೊರತು-ಅವರು ಮರ್ದನ ಅಥವಾ ಗಲಭೆಗಳಿಗೆ ಗುರಿಯಾಗಿದ್ದಾರೆಯೇ?

'ಜಿಝಿಯಾ'ದ ವಿಷಯದಲ್ಲಿ ಪಕ್ಷಪಾತವಿದೆಯೆಂದು ಅವರು ಆಕ್ಷೇಪಿಸುತ್ತಾರೆ. ನಾವು ಈ ಹಿಂದೆ ಪ್ರಸ್ತಾಪಿಸಿದ ಸರ್ ಆರ್ನಾಳ್ಡ್‌ರ ಮಾತುಗಳನ್ನು ಗಮನಿಸಿರಿ: "ನಾವು ಹಿಂದೆ ಹೇಳಿರುವಂತೆ, ಮುಸ್ಲಿಮರು ಸಲ್ಲಿಸುತ್ತಿದ್ದ ಸೈನಿಕ ಸೇವೆಗೆ ಪ್ರತಿಯಾಗಿ ಸುಶಕ್ತರಾದ ಪುರುಷರಿಂದ ಜಿಝಿಯಾ ಸಂಗ್ರಹಿಸಲಾಗುತ್ತಿತ್ತು. ಮುಸ್ಲಿಮ್ ಸೇನೆಗೆ ಸೇರಿದ ಬಳಿಕ ಯಾವುದೇ ಕ್ರೈಸ್ತ ಸಮೂಹಕ್ಕೆ ಜಿಝಿಯಾದಿಂದ ವಿನಾಯಿತಿ ನೀಡಲಾಗುತ್ತಿತ್ತೆಂಬುದು ವ್ಯಕ್ತ. ಜರಾಜಿಮ್ ಗೋತ್ರದೊಂದಿಗೆ ಈ ನೀತಿಯನ್ನೇ ಅನುಸರಿಸಲಾಗಿತ್ತು. ಪ್ರಸ್ತುತ ಕ್ರೈಸ್ತ ಗೋತ್ರವು ಅಂಟಾಕಿಯಾದ ಸಮೀಪ ನೆಲೆಸಿತ್ತು. ಮುಸ್ಲಿಮರು ಅವರಿಗೆ ನೆರವಾಗುವರು; ಅವರಿಂದ ಜಿಝಿಯಾ ವಸೂಲು ಮಾಡುವುದಿಲ್ಲ, ಅವರಿಗೆ ಸಮರಾರ್ಜಿತ ಸಂಪತ್ತಿನಲ್ಲಿ ಪಾಲು ನೀಡಲಾಗುವುದು ಎಂಬೀ ಶರ್ತದಂತೆ ಅವರು ಮುಸ್ಲಿಮರೊಡನೆ ಸೇರಿ ಯುದ್ಧ ಮಾಡುವ ಕರಾರನ್ನು ಮಾಡಿಕೊಂಡರು." (ಪುಟ:62)

ಅವರು ಮುಂದೆ ಹೀಗೆ ಬರೆದಿದ್ದಾರೆ: "ಮತ್ತೊಂದೆಡೆ, ಈಜಿಪ್ಟ್‌ನ ಕೃಷಿಕರಿಗೆ, ಅವರು ಮುಸ್ಲಿಮರಾಗಿದ್ದರೂ ಸೈನಿಕ ಸೇವೆಯಿಂದ ಹೊರತು ಪಡಿಸಲಾಯಿತು. ಆದರೆ ಕ್ರೈಸ್ತರ ಮೇಲೆ ಹೊರಿಸಿದಂತಹ ಜಿಝಿಯಾ ತೆರಿಗೆಯನ್ನು ಅವರ ಮೇಲೆಯೂ ಹೊರಿಸಲಾಯಿತು. (ಪುಟ:63)

ಹಾಗಿದ್ದರೆ, ಇದು ಕೋಮು ಪಕ್ಷಪಾತದ ವಿಷಯವಾಗಿರದೆ ಸೈನಿಕ ಸೇವೆಗೆ ಸಂಬಂಧಿಸಿದ್ದಾಗಿದೆ. ಅದಕ್ಕೆ ಸಿದ್ಧರಾಗುವವರಿಗೆ ಜಿಝಿಯಾದಿಂದ ವಿನಾಯಿತಿ ನೀಡಲಾಗುತ್ತಿತ್ತು. ಸೈನಿಕ ಸೇವೆಗೆ ಸಿದ್ಧರಿಲ್ಲದವರು ಯಾರೇ ಆಗಿದ್ದರೂ ಜಿಝಿಯಾ ಕೊಡಬೇಕು. ಧರ್ಮದ ಹೆಸರಿನಲ್ಲಿ ಈ ಬಗ್ಗೆ ಯಾವ ಪಕ್ಷಪಾತವೂ ಇಲ್ಲ.

ಕುರ್‌ಆನ್ ಹೇಳುತ್ತದೆ:

"ಅಲ್ಲಾಹ್ ಹಾಗೂ ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸದ, ಅಲ್ಲಾಹ್ ಹಾಗೂ ಅವನ ರಸೂಲರು ನಿಷಿದ್ಧವೆಂದು ಸಾರಿರುವುದನ್ನು ನಿಷಿದ್ಧಮಾಡಿಕೊಳ್ಳದ ಮತ್ತು ಸತ್ಯಧರ್ಮವನ್ನು ತಮ್ಮ ಧರ್ಮವನ್ನಾಗಿ ಮಾಡಿಕೊಳ್ಳದ ಗ್ರಂಥದವರು ತಮ್ಮ ಕೈಯಿಂದಲೇ 'ಜಿಝಿಯಾ' (ರಕ್ಷಣಾಕರ) ಕೊಟ್ಟು ಅಧೀನರಾಗುವವರೆಗೂ (ಅವರೊಡನೆ ಹೋರಾಡಿರಿ). (ಅತ್ತಾಬಃ:29)

ಇದು ಇಸ್ಲಾಮೀ ರಾಷ್ಟ್ರದೊಡನೆ ಯುದ್ಧ ಮಾಡುವ ಗ್ರಂಥದವರಿಗೆ ಸಂಬಂಧಿಸಿದ ವಿಶಿಷ್ಟ ವಾಕ್ಯವಾಗಿದೆ. ಅದು ಫ್ರೆಂಚರು ಅಥವಾ ಬ್ರಿಟಿಷರು ನಮ್ಮೊಡನೆ ಯುದ್ಧ ಮಾಡುವುದಕ್ಕೆ ತುಲ್ಯವಾಗಿದೆ. ಇಸ್ಲಾಮೀ ರಾಷ್ಟ್ರದ ಪ್ರಜೆಗಳಿಗೆ ಅದು ಅನ್ವಯವಾಗುವುದಿಲ್ಲ.

ಆದರೆ ಒಂದು ವಿಷಯವನ್ನು ನಾನು ಮನಗಂಡಿದ್ದೇನೆ. ಮಾನವರನ್ನು ವರ್ಗಗಳಾಗಿ ವಿಭಜಿಸಿ ಕಮ್ಯೂನಿಸ್ಟರೇ ಕೋಮು ಮತ್ತು ವಿಭಾಗೀಯ ಸ್ವಾರ್ಥದ ವಿನಾಶ ಬೀಜವನ್ನು ಬಿತ್ತುತ್ತಿದ್ದಾರೆ.

ಅವರು ಕಾರ್ಮಿಕರನ್ನು ಪ್ರಚೋದಿಸುತ್ತಾ ಹೇಳುತ್ತಾರೆ: "ನೀವು ನಮ್ಮನ್ನು ಅನುಗಮಿಸಿರಿ. ಫ್ಯಾಕ್ಟರಿಗಳನ್ನು ನಿಮಗೆ ಅಧೀನಗೊಳಿಸಿ ಕೊಡುತ್ತೇವೆ."

ರೈತರನ್ನು ಅಭಿಸಂಬೋಧಿಸುವಾಗ ಅವರು ಹೇಳುತ್ತಾರೆ: "ನಮ್ಮನ್ನು ಅನುಗಮಿಸಿರಿ. ಭೂಮಿ ನಿಮಗೇ ದೊರೆಯುವುದು." ವಿದ್ಯಾವಂತ ನಿರುದ್ಯೋಗಿಗಳೊಡನೆ ಹೀಗೆನ್ನುತ್ತಾರೆ: "ಬನ್ನಿ, ನಿಮಗೆ ಪ್ರತಿಯೊಬ್ಬರಿಗೂ ಅರ್ಹವಾದ ಉದ್ಯೋಗವನ್ನು ಒದಗಿಸಿ ಕೊಡುತ್ತೇವೆ."

ಹತಾಶ ಯುವಕರೊಡನೆ ಅವರು ಹೇಳುತ್ತಾರೆ: "ಬನ್ನಿ, ನಾವೊಂದು ಸ್ವತಂತ್ರ ಸಮಾಜವನ್ನು ಕಟ್ಟಿ ಬೆಳೆಸೋಣ. ಸ್ವೇಚ್ಛೆಯಿಂದ ವರ್ತಿಸಬಹುದಾದ ಹಾಗೂ ಆಚಾರ

ಮತ್ತು ಕಾನೂನಿನ ಹಸ್ತಕ್ಷೇಪವಿಲ್ಲದಂತಹ ಸಮಾಜ" ಕ್ರೈಸ್ತರ ಬಳಿ ಹೋಗಿ ಹೇಳುತ್ತಾರೆ: "ನಮ್ಮೊಂದಿಗೆ ಬನ್ನಿ, ವಿಶ್ವಾಸದ ಆಧಾರದಲ್ಲಿ ಮಾನವರನ್ನು ವಿಂಗಡಿಸುವ ಈ ಇಸ್ಲಾಮ್ ಧರ್ಮವನ್ನು ನಾವು ನಾಶಗೊಳಿಸೋಣ."

"...ಅವರ ಬಾಯಿಯಿಂದ ಹೊರಡುವ ಈ ಮಾತು ಬಹಳ ಘೋರವಾದುದು. ಅವರು ಕೇವಲ ಹುಸಿಯನ್ನಾಡುತ್ತಿದ್ದಾರೆ." (ಅಲ್‌ಕಹ್ಫ್ :5)

ಇಸ್ಲಾಮ್ ಆಡಳಿತ ನೀತಿ ಮತ್ತು ಪ್ರಜಾ ವ್ಯವಹಾರಗಳಲ್ಲಿ ವಿಶ್ವಾಸದ ಆಧಾರದಲ್ಲಿಯಾವ ಪಕ್ಷಪಾತವನ್ನೂ ತೋರುವುದಿಲ್ಲ. ಅದು ಎಲ್ಲ ಮೂಲಭೂತ ಹಕ್ಕುಗಳನ್ನು ನಿಷ್ಪಕ್ಷಪಾತವಾಗಿ ನೀಡುವ ಧರ್ಮವಾಗಿದೆ. ಅದು ಮಾನವೀಯ ಆಧಾರದಲ್ಲಿ ಎಲ್ಲರನ್ನು ಸಮಾನವಾಗಿ ನೋಡುತ್ತದೆ. ಅವರು ತಾವಿಚ್ಛಿಸುವ ಯಾವುದೇ ಸಿದ್ಧಾಂತವನ್ನು ಸ್ವೀಕರಿಸಲು ಸ್ವತಂತ್ರರಿದ್ದಾರೆ. ಅದು ಇಸ್ಲಾಮಿಗೆ ಸಹ್ಯವಾಗಿರುವುದಲ್ಲದೇ, ಆ ವೇಳೆಯೂ ಅವರ ಸುಖ ಸಂರಕ್ಷಣೆಗೆ ಅದು ಹೊಣೆಯಾಗಿರುವುದು.

ಹಾಗೆಯೇ ಮುಸ್ಲಿಮರೊಂದಿಗಿನ ತಮ್ಮ ಐತಿಹಾಸಿಕ ಸಂಬಂಧದಲ್ಲಿ ಪೌರ್ವಾತ್ಯ ಲೋಕದ ಕ್ರೈಸ್ತರು ಬಹಳ ನಿಷ್ಠಾವಂತರೆಂದು ನನಗೆ ತಿಳಿದಿದೆ. ಹಾಗೆಯೇ ಮುಸ್ಲಿಮರ ಮತ್ತು ಅವರ ಪರಸ್ಪರ ಸಾರ್ವಜನಿಕ ಹಿತಾಸಕ್ತಿಗಳಲ್ಲಿಯೂ ಅವರು ಕಾಳಜಿ ಹೊಂದಿದ್ದಾರೆ. ತಮ್ಮ ಸಂಬಂಧದಲ್ಲಿ ಹಸ್ತಕ್ಷೇಪ ನಡೆಸಿ ಒಡಕು ಹುಟ್ಟಿಸುವ ಯಾವೊಂದು ಪಿಶಾಚಿಯ ಮಾತಿಗೂ ಅವರು ಕಿವಿಗೊಡಲಾರರು.

# ಇಸ್ಲಾಮ್ ಮತ್ತು ಆದರ್ಶವಾದ*

ನೀವು ಹಾಡಿ ಹೊಗಳುತ್ತಿರುವ ಇಸ್ಲಾಮ್ ಇಂದು ಭೂಮಿಯ ಮೇಲೆ ಎಲ್ಲಾದರೂ ಅಸ್ತಿತ್ವದಲ್ಲಿದೆಯೇ? ನೀವು ಎಣಿಸಿ ಹೇಳುತ್ತಿರುವ ವೈಶಿಷ್ಟ್ಯಗಳಿಂದ ಅದು ಎಂದಾದರೂ ಜ್ಯಾರಿಯಲ್ಲಿತ್ತೇ? ನೀವು ಮಾದರೀ ಯೋಗ್ಯ ಹಾಗೂ ಮಹತ್ವಪೂರ್ಣವಾದ ಒಂದು ಪದ್ಧತಿಯ ಬಗ್ಗೆಯೇ ಸದಾ ಹೇಳುತ್ತಲಿದ್ದೀರಿ. ಅದರ ಕಾರ್ಯಸಾಧನೆಯ ಬಗ್ಗೆ ಪ್ರಶ್ನಿಸಿದರೆ ಪ್ರವಾದಿ ಮತ್ತು ಖಿಲಫಾವುರ್ರಾಶಿದರ ಅಲ್ಪ ಕಾಲವನ್ನಷ್ಟೇ ನೀವು ಬೊಟ್ಟುಮಾಡುತ್ತೀರಿ. ನೇರವಾಗಿ ಹೇಳುವುದಿದ್ದರೆ ಕೇವಲ ಅಬೂಬಕರ್ ಮತ್ತು ಉಮರ್‌ರ ಕಾಲ. ನೀವು ಉಮರ್‌ರ(ರ) ಆಡಳಿತ ಕಾಲವನ್ನು ಉದಾಹರಿಸಿ ಜನರನ್ನು ವಂಚಿಸುತ್ತೀರಿ. ನೀವು ಅವರ ವೈಯಕ್ತಿಕ ಪ್ರಭಾವವನ್ನು ಇಸ್ಲಾಮಿನ ಮಹಿಮೆಯೆಂದು ಆರೋಪಿಸುತ್ತಲಿದ್ದೀರಿ. ತರುವಾಯ ಅವರ ಆಡಳಿತ ಸುಧಾರಣೆಗಳನ್ನು ಅತಿ ಮನೋಜ್ಞವಾಗಿ ಜನರಿಗೆ ವರ್ಣಿಸಿ ಹೇಳುತ್ತೀರಿ. ಆದರೆ ಅದನ್ನು ನಾವು ಕೂಲಂಕಷವಾಗಿ ಪರಿಶೀಲಿಸಿದಾಗ ಒಂದು ಅಂಧಕಾರಮಯ ಪರಿಸ್ಥಿತಿ ಕಂಡುಬರುತ್ತದೆ. ಜಾಗೀರುದಾರಿ ತ್ವ, ದಬ್ಬಾಳಿಕೆ, ಸ್ವೇಚ್ಛಾಧಿಪತ್ಯ ಮತ್ತು ಪ್ರತಿಗಾಮಿ ಸ್ವರೂಪದ ಕರಾಳ ಕಾಲ!

"ಆಡಳಿತಗಾರರನ್ನು ನಿಯಂತ್ರಣದಲ್ಲಿಡುವ ಪ್ರಜೆಗಳ ಹಕ್ಕುಗಳ ಕುರಿತು ಡಂಗುರ ಸಾರುತ್ತೀರಿ. ಆಡಳಿತಗಾರರನ್ನು ಹತೋಟಿಯಲ್ಲಿಡುವ ಮಾತಂತಿರಲಿ, ಅವರನ್ನು ಚುನಾಯಿಸುವ ಅವಕಾಶವಾದರೂ ಖಲೀಫರ ಕಾಲದ ನಂತರ ಜನರಿಗೆ ಎಂದಾದರೂ ಲಭ್ಯವಾಗಿದೆಯೇ?"

---

* ಆದರ್ಶವಾದವೆಂಬ ಪ್ರಯೋಗವು ಪೌರ್ವಾತ್ಯರಿಗೆ ಅತ್ಯಂತ ಪ್ರಿಯವಾಗಿದೆ. ಇತರರನ್ನು ಹೊಗಳಲಿಕ್ಕಾಗಿ ಅದನ್ನು ಪ್ರಯೋಗಿಸಲಾಗುತ್ತಿದೆ. ಅವರು ಯಾವುದಾದರೊಂದು ಪದ್ಧತಿಯನ್ನು ಆದರ್ಶ ಯುಕ್ತವೆಂದು ಹೇಳಿದರೆ ಸರ್ವಗುಣಸಂಪನ್ನ ಮತ್ತು ಮಾದರೀ ಯೋಗ್ಯವಾದುದೆಂದೇ ಅರ್ಥ. ಆದರೆ ನಾವಿಲ್ಲಿ ಇಸ್ಲಾಮಿನ ಬಗೆಗಿನ ಆರೋಪಗಳಿಗೆ ಉತ್ತರ ಹೇಳುವಾಗ ಅದನ್ನು ಆ ಅರ್ಥದಲ್ಲಿ ಬಳಸುತ್ತಿಲ್ಲವೆಂದು ಸ್ಪಷ್ಟ. ಬದಲಾಗಿ ಪಾಶ್ಚಾತ್ಯ ಲೋಕವು ಅದಕ್ಕೆ ನೀಡಿರುವ ಅರ್ಥದಲ್ಲಿಯೇ ನಾವು ಈ ಅಧ್ಯಾಯದಲ್ಲಿ ಅದನ್ನು ವಿಶ್ಲೇಷಿಸಿದ್ದೇವೆ. ಹೌದು, ಮಾನವನು ನರಕ ಯಾತನೆ ಪಡುತ್ತಿರುವಾಗ, ಅಸನ-ವಸನ ವಿಲ್ಲದೇ ಕಷ್ಟ ಪುಡುತ್ತಿರುವಾಗ, ಅಕ್ರಮ ದೌರ್ಜನ್ಯಗಳಿಗೀಡಾದಾಗ, ಅತ್ತ ತಿರುಗಿಯೂ ನೋಡದೆ, ಸುಧಾರಣಾ ಕಾರ್ಯವನ್ನು ಕೈಗೊಳ್ಳದೆ, ಮಾದರೀ ಯೋಗ್ಯವಾದ ಕಾಲ್ಪನಿಕ ಸ್ವರ್ಗದಲ್ಲಿ ವಿಹರಿಸುವುದು! ಪಾಶ್ಚಾತ್ಯ ಲೋಕವು ಸ್ವಾಭಾವಿಕವಾಗಿ ಜಿಗುಪ್ಸೆ ಪಟ್ಟಿರುವ ಆದರ್ಶವಾದವು, ಜಾಗೀರುದಾರೀ ನರಕದಲ್ಲಿ ಜನರು ಹಿಂಸೆ ದೌರ್ಜನ್ಯಗಳಿಗೆ ಬಲಿಯಾಗಿ ಹೀನವಾಗಿ ಬಾಳುತ್ತಿದ್ದಾಗ ಅವರೊಡನೆ ವಾಸ್ತವಿಕ ಜೀವನಕ್ಕೆ ಸಂಬಂಧವಿಲ್ಲದ ಮನೋಹರ ತತ್ವ ಸಿದ್ಧಾಂತಗಳ ಬಗ್ಗೆ ಭಾಷಣ ಮಾಡಲಾಗುತ್ತಿತ್ತು. ಆ ಅರ್ಥಹೀನ ಬರಡು ವಿಚಾರ ಧಾರೆಗಳು ಅವರ ಬುದ್ಧಿ ಅಥವಾ ಯುಕ್ತಿಗೆ ನಿಲುಕುವಂತದ್ದಾಗಿರಲಿಲ್ಲ. ಈ ಆದರ್ಶವಾದನ್ನು ಐರೋಪ್ಯರು ಮೂದಲಿಸುತ್ತಿದ್ದಾರೆ. ಇಸ್ಲಾಮಿಗೆ ಆ ಬರಡು ಆದರ್ಶವಾದದ ಬಣ್ಣ ಹಚ್ಚಲು ಅಜ್ಞ ಕಮ್ಯೂನಿಸ್ಟರು ಆಗಾಗ್ಗೆ ಪ್ರಯತ್ನಿಸುತ್ತಾರೆ.

"ಇಸ್ಲಾಮಿನ ನ್ಯಾಯಬದ್ಧ ಆರ್ಥಿಕ ವಿತರಣಾ ಕ್ರಮದ ಬಗ್ಗೆ ನೀವು ವರ್ಣಿಸುತ್ತೀರಿ. ಜನರ ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸಲು ಖಲೀಫರ ಕಾಲದಲ್ಲಿಯೂ ಸಾಧ್ಯವಾಗಿದೆಯೆ?"

"ಸಕಲ ಪ್ರಜೆಗಳಿಗೆ ಉದ್ಯೋಗ ಒದಗಿಸುವುದು ರಾಷ್ಟ್ರದ ಕರ್ತವ್ಯವೆಂದು ನೀವು ಹೇಳುತ್ತೀರಿ. ಆದರೆ ಹಸಿವು ಬಡತನಗಳಿಂದ ಕಂಗಾಲಾಗಿ, ಭಿಕ್ಷೆಯಿಂದ ಜೀವನ ಸಾಗಿಸುತ್ತಿದ್ದ ಸಹಸ್ರಾರು ದರಿದ್ರರ ಬಗ್ಗೆ ನೀವೇನು ಹೇಳುತ್ತೀರಿ?"

"ಸ್ತ್ರೀಯರಿಗೆ ಇಸ್ಲಾಮ್ ನೀಡಿರುವ ಹಕ್ಕುಗಳನ್ನು ನೀವು ಎತ್ತಿ ಹೇಳುತ್ತೀರಿ. ಆದರೆ ವಾಸ್ತವದಲ್ಲಿ ಅವರಿಗೆ ಆ ಹಕ್ಕುಗಳು ಎಂದಾದರೂ ಸಂಪೂರ್ಣವಾಗಿ ದೊರೆತಿದೆಯೇ? ಅನಾಚಾರ ಹಾಗೂ ಆರ್ಥಿಕ-ಸಾಮಾಜಿಕ ಪ್ರತಿಕೂಲ ಸ್ಥಿತಿಯಿಂದಾಗಿ ಹಕ್ಕುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಆಕೆಗೆ ಎಂದಾದರೂ ಸಾಧ್ಯವಾಗಿದೆಯೇ? ವ್ಯಕ್ತಿಯ ಸುಧಾರಣೆಗೆ ಇಸ್ಲಾಮ್ ನೀಡಿರುವ ಪ್ರಾಧಾನ್ಯ ಮತ್ತು ಇಸ್ಲಾಮ್ ಅದಕ್ಕೆ ಸೂಚಿಸಿರುವ ಸುಧಾರಣಾ ಕಾರ್ಯಕ್ರಮಗಳ ಕುರಿತು ನೀವು ಉದ್ಬುದ್ಧ ಭಾಷಣ ಮಾಡುತ್ತೀರಿ. ದೇವಭಕ್ತಿ ತುಂಬಿತುಳುಕುವ ವ್ಯಕ್ತಿನಿರ್ಮಾಣ ಸಾಧ್ಯವಿದೆಯೆಂದೂ ಅಂತಹ ಸಮಾಜದಲ್ಲಿ ಆಡಳಿತಗಾರರ ಮತ್ತು ಪ್ರಜೆಗಳ ಪರಸ್ಪರ ಸಂಬಂಧವು ಸಹಕಾರ ಸಹಾನುಭೂತಿಯಿಂದ ತುಂಬಿರುವುದೆಂದೂ ನೀವು ವಾದಿಸುತ್ತೀರಿ. ಆದರೆ ನೀವು ಉದಾಹರಿಸುತ್ತಿರುವ ಆ ಅಲ್ಪ ಕಾಲದ ಹೊರತು ಅದು ಎಂದಾದರೂ ಸಾಕ್ಷಾತ್ಕಾರಗೊಂಡಿದೆಯೇ? ಜನರನ್ನು ಹೀನಾಯಗೊಳಿಸಿ, ಸ್ವಾತಂತ್ರ್ಯವನ್ನು ದಮನಿಸಿ, ಆಡಳಿತವನ್ನು ಸ್ವಾರ್ಥಕ್ಕಾಗಿ ದುರುಪಯೋಗಿಸಿ, ಬಡವರ ಹಕ್ಕುಗಳನ್ನು ಮೊಟಕುಗೊಳಿಸಿ ಶೋಷಿಸುತ್ತಿರುವಾಗ, ಆಡಳಿತಗಾರರನ್ನು ತಡೆಯಲು ಅವರ ದೇವಭಕ್ತಿಗೆ ಎಂದಾದರೂ ಸಾಧ್ಯವಾಗಿದೆಯೇ? ನೀವು ವಾಸ್ತವಿಕತೆಯ ಬೆಂಬಲವಿಲ್ಲದ ಕೆಲವು ಕನಸುಗಳ ಬಗ್ಗೆಯಷ್ಟೇ ಹೇಳುತ್ತಿದ್ದೀರಿ. ಖಲೀಫರ ಕಾಲದಲ್ಲಿ ನಡೆದ ಕೆಲವು ಘಟನೆಗಳನ್ನಷ್ಟೆ ನೀವು ಉದಾಹರಿಸುತ್ತೀರಿ. ಅವು ಸ್ಪಷ್ಟ ರೂಪರೇಷೆಗಳಿಲ್ಲದ ಕೆಲವು ವೈಯಕ್ತಿಕ ಚಟುವಟಿಕೆಗಳಾಗಿದ್ದುವು. ಅಂತಹ ವಿಷಯಗಳು ಇತಿಹಾಸದಲ್ಲಿ ಖಂಡಿತ ಪುನರಾವರ್ತನೆಯಾಗಲಾರವು"

ಇದು ಕಮ್ಯೂನಿಸ್ಟರು ಮತ್ತು ಅವರ ಸಹಚರರ ವಾದ. ಅದಲ್ಲದೇ ಕೇವಲ ಸಾಮ್ರಾಜ್ಯಶಾಹಿಗಳಿಂದ ಇಸ್ಲಾಮನ್ನು ಕಲಿತ ಕೆಲವು ಮುಸ್ಲಿಮರ ಮನದಲ್ಲಿಯೂ ಈ ಭೀಕರ ಸಂದೇಹಗಳಿವೆ. ಇಲ್ಲಿ ನಾವು ಎರಡು ವಿಷಯಗಳನ್ನು ಪ್ರತ್ಯೇಕಿಸಿ ತಿಳಿಯಬೇಕು. 1. ಸಿದ್ಧಾಂತವು ಸ್ವತಃ ಕಾಲ್ಪನಿಕವಾಗಿರುವುದು, 2. ಅದರ ಜ್ಯಾರಿಯು ಕಾಲ್ಪನಿಕ ವಾಗಿರುವುದು. ಸ್ವಾಭಾವಿಕವಾಗಿ ಇಸ್ಲಾಮ್ ಧರ್ಮವು ವ್ಯಾವಹಾರಿಕ ಜಗತ್ತಿನಲ್ಲಿ ಸಾಕ್ಷಾತ್ಕರಿಸಲಾಗದ ಒಂದು ಕಾಲ್ಪನಿಕ ಸಿದ್ಧಾಂತವಾಗಿದೆಯೇ? ಅದರ ಮೂಲ

ಸಿದ್ಧಾಂತಗಳು ಕಾಲ್ಪನಿಕ ಮತ್ತು ಅಸಂಭಾವ್ಯವಾಗಿವೆಯೇ? ಅದು ವ್ಯಾವಹಾರಿಕ ಸಿದ್ಧಾಂತವಾಗಿದ್ದರೂ ಈ ತನಕ ಸಾಕ್ಷಾತ್ಕಾರಗೊಳಿಸಲಾಗಿಲ್ಲವೇ? ಈ ಉಭಯ ಸ್ಥಿತಿ ಗಳಲ್ಲಿಯೂ ಭಾರೀ ಅಂತರವಿದೆ. ಸ್ವಯಂ ಕಾಲ್ಪನಿಕವಾಗಿರುವ ಸಿದ್ಧಾಂತವು ಪರಿಸ್ಥಿತಿ ಎಷ್ಟೇ ಬದಲಾದರೂ ಅದು ಕಾರ್ಯರೂಪ ಪಡೆಯುವ ಪ್ರಮೇಯವೇ ಇಲ್ಲ.

ಸ್ವಯಂ ಕಾರ್ಯಸಾಧ್ಯವಾಗಿದ್ದರೂ ಪ್ರತಿಕೂಲ ಪರಿಸ್ಥಿತಿಯಿಂದಾಗಿ ಜ್ಯಾರಿಗೊಳಿಸ ಲಾಗದ ಸಿದ್ಧಾಂತವಾಗಿದ್ದರೆ ಅದು ಬೇರೆ ವಿಷಯ. ಪ್ರತಿಕೂಲ ಪರಿಸ್ಥಿತಿ ಬದಲಾದಾಗ ಅದನ್ನು ಕಾರ್ಯರೂಪಕ್ಕೆ ತರುವ ಸಾಧ್ಯತೆಯಿದೆ. ಈ ಸಿದ್ಧಾಂತಗಳಲ್ಲಿ ಇಸ್ಲಾಮಿೂ ಸ್ವಭಾವಕ್ಕೆ ಯಾವುದು ಸರಿಹೊಂದುತ್ತದೆ?

ಈ ವಿಷಯವು ಯಾವ ತರ್ಕಕ್ಕೂ ಎಡೆಯಿಲ್ಲದಂತೆ ಸುಸ್ಪಷ್ಟವಾಗಿದೆಯೆಂದು ನಾನು ತಿಳಿಯುತ್ತೇನೆ. ಮಾನವೇತಿಹಾಸದಲ್ಲಿ ಎಂದಾದರೊಮ್ಮೆ ಕಾರ್ಯಗತಗೊಂಡ ಯಾವುದೇ ಪದ್ಧತಿಯು ಕಾರ್ಯಸಾಧ್ಯವೆಂಬುದು ಖಚಿತ. ಅದೇನಿದ್ದರೂ ಕಾಲ್ಪನಿಕ ಮತ್ತು ಅಸಂಭಾವ್ಯವಾಗಿರಲಾರದು. ಮಾನವರು ಅಂದಿನ ಅದೇ ಮಾನವರಾಗಿದ್ದಾರೆ. ಒಮ್ಮೆ ಸಂಭವಿಸಿದ್ದು ಇನ್ನೊಮ್ಮೆ ಸಂಭವಿಸಬಹುದು. ಹಾಗಲ್ಲದಿದ್ದರೆ ಇಸ್ಲಾಮಿನ ಆರಂಭ ಕಾಲದಲ್ಲಿ ಮಾನವರು ಇನ್ನೆಂದಿಗೂ ಸಾಧಿಸಲಾರದಷ್ಟು ಉನ್ನತಿಯನ್ನು ತಲಪಿದ್ದರೆಂದು ಈ ಪ್ರಗತಿಗಾಮಿಗಳು ಹೇಳುತ್ತಾರೆಯೇ? ಹಾಗಾದರೆ ಈ ಸಿದ್ಧಾಂತವು ಮಾನವನು ಪ್ರಗತಿಯತ್ತ ವಿಕಾಸ ಹೊಂದುತ್ತಿರುವನೆಂಬ ಅವರ ಅಭಿಪ್ರಾಯಕ್ಕೇ ವಿರುದ್ಧವಾಗಿದೆ.

ಖಲೀಫರ ಸ್ವರ್ಣಕಾಲವು ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಂತಹ ಅಪೂರ್ವ ಸಂದರ್ಭಗಳನ್ನು ಬಿಟ್ಟರೆ ಆ ಬಳಿಕ ಒಮ್ಮೆಯೂ ಸಾಕ್ಷಾತ್ಕಾರವಾಗಲಿಲ್ಲವೇಕೆ? ಇದು ನ್ಯಾಯೋಚಿತ ಪ್ರಶ್ನೆ. ಐತಿಹಾಸಿಕ ಘಟನೆಗಳು ಅದಕ್ಕೆ ಉತ್ತರ ನೀಡುತ್ತವೆ. ಅವು ಇಸ್ಲಾಮೀ ಲೋಕದಲ್ಲಿ ಸ್ಥಾನೀಯವಾಗಿ ಮತ್ತು ಮಾನವ ಜೀವನದಲ್ಲಿ ಸಾರ್ವತ್ರಿಕವಾಗಿ ಸಂಭವಿಸಿದ ಕೆಲವು ವಿಷಯಗಳಾಗಿವೆ. ಇಲ್ಲಿ ನಾವು ಎರಡು ವಿಷಯಗಳನ್ನು ಪ್ರತ್ಯೇಕವಾಗಿ ಗಮನಿಸಬೇಕು. ಒಂದನೇಯದಾಗಿ, ಪ್ರವಾದಿ ಮತ್ತು ಖಲೀಫರ ಕಾಲದಲ್ಲಿ ಅಧೋಗತಿಯ ಪಾತಾಳದಲ್ಲಿದ್ದ ಮಾನವಕುಲದೊಂದಿಗೆ ಉನ್ನತಿಯ ಉತ್ತುಂಗಕ್ಕೆ ಇಸ್ಲಾಮಿನ ನೆಗೆತವು ಮಾನವೇತಿಹಾಸದಲ್ಲಿಯೇ ಅಸಾಮಾನ್ಯವಾಗಿದೆ. ಅದು ಘಟನಾ ಲೋಕದಲ್ಲಿ ಇಸ್ಲಾಮ್ ಸಾಕ್ಷಾತ್ಕರಿಸಿದ ಪವಾಡವೆಂದು ಭಾವಿಸಬಹುದಾಗಿದೆ. ಆದರೆ ತಮ್ಮ ನಡವಳಿಕೆ ಮತ್ತು ವ್ಯಕ್ತಿತ್ವದಲ್ಲಿ ಪವಾಡ ನಿರ್ಮಿಸಿದ ಆ ಧೀರೋದ್ಧಾತ್ತರನ್ನು ರೂಪಿಸಲು ಕೆಲವು ವಿಶಿಷ್ಟ ತರಬೇತಿ ಮತ್ತು ಸಿದ್ಧತೆಯ ಅಗತ್ಯವಿದ್ದಿತು. ಇತಿಹಾಸದ ಇತರೆಲ್ಲ ಆಂದೋಲನಗಳಿಗಿಂತ ಕ್ಷಿಪ್ರವಾಗಿ ಇಸ್ಲಾಮ್ ಪ್ರಚಾರಗೊಂಡಿತು. ಅದು ಭೌತಿಕವಾದಿಗಳು ಮತ್ತು ಕಮ್ಯೂನಿಸ್ಟರ ಆರ್ಥಿಕ-ಭೌತಿಕ ವ್ಯಾಖ್ಯಾನಗಳಿಗೆ ನಿಲುಕದ ಇಸ್ಲಾಮಿನ ಇನ್ನೊಂದು ಪವಾಡವಾಗಿದ್ದಿತು.

ಆದರೆ ಈ ಕ್ಷಿಪ್ರಗತಿಯಿಂದಾಗಿಯೇ ಇಸ್ಲಾಮಿ ಸ್ಫೂರ್ತಿಯನ್ನು ಸೂಕ್ತ ರೀತಿಯಲ್ಲಿ ಮೈಗೂಡಿಸದ ಅನೇಕ ಸಮುದಾಯಗಳನ್ನೂ ಅದರ ಪರಿಧಿಯೊಳಕ್ಕೆ ತಂದಿತು. ಇಸ್ಲಾಮಿನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯಪದ್ಧತಿಯ ವಾಸ್ತವಿಕತೆಯು ಆ ಸಮುದಾಯಗಳಿಗೆ ಅಜ್ಞಾತವಾಗಿದ್ದಿತು. ಅರೇಬಿಯಾ ಉಪದ್ವೀಪದಲ್ಲಿ ಆರಂಭಕಾಲದ ಮುಸ್ಲಿಮರಿಗೆ ದೊರೆತ ಶಿಕ್ಷಣ ಸುಧಾರಣೆಗಳು ಯಥಾವತ್ತಾಗಿ ಈ ಹೊಸ ವಿಭಾಗಗಳಿಗೆ ನೀಡಲೂ ಸಾಧ್ಯವಾಗಲಿಲ್ಲ. ಈ ಜನವಿಭಾಗಗಳೆಲ್ಲವೂ ಇಸ್ಲಾಮ್ ಪ್ರವೇಶಿಸಿ, ಮುಸ್ಲಿಮ್ ಸಮಾಜದಲ್ಲಿ ಸೇರ್ಪಡೆಗೊಂಡಾಗ ಇಸ್ಲಾಮಿ ಲೋಕದ ವ್ಯಾಪ್ತಿ ಹೆಚ್ಚಿತು. ಆದರೆ, ಅದರ ಶಿಕ್ಷಣ ಶೀಲಗಳಲ್ಲಿ ಸಂಪೂರ್ಣವಾಗಿ ವಿಲೀನವಾಗಲು ನವ ಮುಸ್ಲಿಮರಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಅವರು ಇಸ್ಲಾಮಿನಿಂದ ವಿಮುಖರಾಗುವುದು ತುಂಬಾ ಸುಲಭವಾಗಿತ್ತು. ಅದೇ ಪ್ರಕಾರ ಇಸ್ಲಾಮಿ ವೈಶಿಷ್ಟ್ಯಗಳನ್ನು ಸಂಪೂರ್ಣವಾಗಿ ಮೈಗೂಡಿಸಿಕೊಳ್ಳಲಾಗದ ಉಮವಿಯರು; ಅಬ್ಬಾಸಿಯರು, ಟರ್ಕರು ಮತ್ತು ಮಾಂಡಲೀಕರು ಇಸ್ಲಾಮಿ ಸಿದ್ಧಾಂತಗಳಿಗೆ ಅಗೌರವತೋರಿ ದೈವಿಕ ನಿಯಮಗಳನ್ನು ಗಾಳಿಗೆ ತೂರಲು ಹಿಂಜರಿಯದವರಾಗಿದ್ದರು.

ಎರಡನೇಯದಾಗಿ, ಮಾನವನೊಂದಿಗೆ ಇಸ್ಲಾಮ್ ಸಾಧಿಸಿದ ಆ ಮುನ್ನೆಗೆತವನ್ನು, ಮಾನವನ ವಿಕಾಸದೊಂದಿಗೆ ಹೋಲಿಸಿ ನೋಡಿದಾಗ ಅದು ಸ್ವಾಭಾವಿಕವಾದುದಾಗಿರಲಿಲ್ಲವೆಂದು ವ್ಯಕ್ತವಾಗುತ್ತದೆ. ಮಾನವನು ಈ ತನಕ ಪ್ರಯೋಗಿಸಿರುವ ಎಲ್ಲ ಸಿದ್ಧಾಂತಗಳಿಗಿಂತ ಪ್ರಗತಿಪರವೆಂದು ಖಡಾಖಂಡಿತವಾಗಿ ಹೇಳಬಹುದಾದ ರೀತಿಯಲ್ಲಿ, ಅದು ಗುಲಾಮಗಿರಿಯ ಪಾತಾಳದಲ್ಲಿದ್ದ ಮಾನವರನ್ನು ಒಂದೇ ಬಾರಿಗೆ ಉನ್ನತ ಸಾಮಾಜಿಕ ನ್ಯಾಯದ ಉತ್ತುಂಗಕ್ಕೇರಿಸಿತು. ಹಾಗೆಯೇ ಭೌತಿಕ ಭ್ರಮೆಯಲ್ಲಿ ಮುಳುಗಿದ್ದ ಮಾನವ ಆತ್ಮವನ್ನು ಮಾನವಕುಲವು ಸದಾಕಾಲ ಅಭಿಮಾನಪಡುವಂತಹ ಆಧ್ಯಾತ್ಮಿಕತೆಯ ತುತ್ತತುದಿಗೇರಿಸಿತು.

ಆ ಕಾಲದಲ್ಲಿ ಮಾನವರಿಗೆ ಈ ಪ್ರಗತಿಯನ್ನು ಕ್ಷಿಪ್ರವಾಗಿ ಸಾಧಿಸಲು ಸಾಧ್ಯವಾಯಿತು. ಯಾಕೆಂದರೆ ಪ್ರವಾದಿಗಳಲ್ಲಿಯೂ ಅವರ ಅನುಯಾಯಿಗಳಲ್ಲಿಯೂ ಅಭಿವ್ಯಕ್ತಗೊಂಡ ಆತ್ಮೋನ್ನತಿಯು ಮಾನವನಿಗೆ ಆತನ ಸಾಮಾನ್ಯ ಸಾಮರ್ಥ್ಯಗಳನ್ನು ಮೀರಿಸಿದಂತಹ ಸ್ಥಿತಿಗೇರಿಸಿತು. ಅದು ಅದ್ಭುತಗಳನ್ನು ಸೃಷ್ಟಿಸಬಲ್ಲಂತಹ ಅಯಸ್ಕಾಂತೀಯ ಶಕ್ತಿ ವೈಶಿಷ್ಟ್ಯವಾಗಿದ್ದಿತು. ಶ್ರೇಷ್ಠ ಆತ್ಮೋನ್ನತಿಯು ಸ್ಥಗಿತಗೊಂಡಾಗ ಜನರು ಆ ಉತ್ತುಂಗ ಶಿಖರದಿಂದ ಕೆಳಗಿಳಿಯಲಾರಂಭಿಸಿದರು. ಹಾಗಿದ್ದರೂ ಇಸ್ಲಾಮಿ ಸ್ಫೂರ್ತಿಯಿಂದ ಬೆಳಗಿದ ಜ್ಯೋತಿಯೊಂದನ್ನು ಅವರು ನಂದಿಹೋಗದಂತೆ ಕಾಪಾಡುತ್ತಾ ಬಂದರು. ಮಾನವೇತಿಹಾಸದಲ್ಲಿ ಅದರ ಜೀವಂತ ಸತ್ಫಲಗಳ ಕುರಿತು ನಾವು ಮುಂದೆ ವಿವರಿಸುತ್ತೇವೆ. ಕೆಲವರು ವಾದಿಸುತ್ತಿರುವಂತೆ ಪ್ರವಾದಿಗಳು ಮತ್ತು ಅನುಯಾಯಿಗಳು ಸದಾಕಾಲ

ಜೀವಿಸಿದ್ದರೆ ಮಾತ್ರ, ಇಸ್ಲಾಮನ್ನು ಕನಿಷ್ಠಪಕ್ಷ ಕರ್ಮರಂಗದಲ್ಲಾದರೂ ಜ್ಯಾರಿಗೊಳಿಸಬಹುದೆಂದು ಇದರ ಅರ್ಥವಲ್ಲ. ಯಾಕೆಂದರೆ ಸುದೀರ್ಘವಾದ 13 ಶತಮಾನಗಳ ಹಿಂದೆ ಆಡಳಿತ ವ್ಯವಸ್ಥೆ, ಆರ್ಥಿಕ ನೀತಿ ಮತ್ತು ಸಾಮಾಜಿಕ ಸಂಬಂಧಗಳಲ್ಲಿಯೂ ನಡೆದ ಮಹಾ ಅದ್ಭುತವು ಮಾನವಕುಲದ, ಮುಖ್ಯವಾಗಿ ಮುಸ್ಲಿಮ್ ಸಮುದಾಯದ ನಿರಂತರ ಪರೀಕ್ಷೆಗಳ ಬಳಿಕ ಇಂದು ಹೆಚ್ಚು ಅಂಗೀಕಾರಾರ್ಹವಾಗಿ ಪರಿಣಮಿಸಿದೆ.

ಇಸ್ಲಾಮಿನ ಅತ್ಯುನ್ನತವಾದ ನೈತಿಕ ಮೌಲ್ಯಗಳಿಗೆ ಅದು ವಿಶೇಷ ಗಮನ ನೀಡುತ್ತದೆಯಲ್ಲದೇ ಆ ನೈತಿಕ ಅಂಶಗಳು ಹಾಗೂ ಇಸ್ಲಾಮಿನ ಕರ್ಮರಂಗಗಳು ಪರಸ್ಪರ ಸಂಬಂಧ ಕಡಿದುಕೊಳ್ಳುವುದನ್ನು ಅದು ಯಾವ ರೀತಿಯಿಂದಲೂ ಅಂಗೀಕರಿಸುವುದಿಲ್ಲ. ಆದಿಕಾಲದ ಮುಸ್ಲಿಮರಲ್ಲಿ ಅಭಿವ್ಯಕ್ತಗೊಂಡ ಆ ಉನ್ನತ ನೈತಿಕ ಮೌಲ್ಯಗಳನ್ನು ಗಮನಿಸದೆಯೇ ಇಸ್ಲಾಮಿನ ಕರ್ಮರಂಗಗಳನ್ನು ನಾವು ಇಂದು ಕಾರ್ಯಗತಗೊಳಿಸಲು ಪ್ರಯತ್ನಿಸಿದರೆ ಆರಂಭ ಕಾಲದಲ್ಲಿ ಸಂಭವಿಸಿದಂತಹ ಮುನ್ನಗೆತವು ಇಂದು ಅಗತ್ಯವಿರಲಾರದು. ಯಾಕೆಂದರೆ ಆ ತನಕದ ಪರೀಕ್ಷೆಗಳಿಂದ ದೊರೆತಿರುವ ಅನುಭವಗಳು ಮಾನವನನ್ನು ಆ ಉನ್ನತ ಶಿಖರಕ್ಕೆ ಅಷ್ಟೊಂದು ನಿಕಟಗೊಳಿಸಿದೆ. ಅಲ್ಲಿರುವ ದಾರಿಯ ದೂರವು ಹಿಂದಿಗಿಂತ ತುಂಬಾ ಕಡಿಮೆಯಾಗಿದೆ. ಇಂದು ನಿರ್ದಿಷ್ಟ ಧ್ಯೇಯದೆಡೆಗಿನ ಯಾತ್ರೆಯು ಹೆಚ್ಚು ಸರಳ ಮತ್ತು ಸುಖದಾಯಕವಾಗಿದೆ.

ಆ ಬಗ್ಗೆ ಕೆಲವು ಉದಾಹರಣೆಗಳನ್ನು ನೋಡಿರಿ:

ಸಾರ್ವಜನಿಕ ಚುನಾವಣೆಗಳ ಮೂಲಕ ಆಡಳಿತಗಾರರನ್ನು ಚುನಾಯಿಸಿ, ಅವರು ಸರಿದಾರಿಯಿಂದ ತಪ್ಪಿದಾಗ ಅವರನ್ನು ಪದಚ್ಯುತಗೊಳಿಸುವ ಆಧುನಿಕ ಪದ್ಧತಿಯನ್ನೇ ನೋಡೋಣ. ಇದು ವಾಸ್ತವದಲ್ಲಿ ಇಸ್ಲಾಮಿನ ಆರಂಭ ಹಂತದಲ್ಲಿ ಜ್ಯಾರಿಯಲ್ಲಿದ್ದ ಆಡಳಿತ ಪದ್ಧತಿಯ ಪ್ರತಿರೂಪವಾಗಿದೆ. ಆದರೆ ಅಬೂಬಕರ್ ಮತ್ತು ಉಮರ್‌ರ ಕಾಲದಲ್ಲಿ ಇದೊಂದು ಅದ್ಭುತವೇ ಆಗಿದ್ದಿತು. ಇಂದು, ಆ ರೀತಿಯ ಆಡಳಿತ ಸಂಪ್ರದಾಯವಿರಬೇಕೆಂದು ಬಯಸುವ ಯಾವುದೇ ಸಮುದಾಯಕ್ಕೂ ಅದನ್ನು ಅನಾಯಾಸವಾಗಿ ಜ್ಯಾರಿಗೊಳಿಸಬಹುದಾಗಿದೆ. ಬ್ರಿಟನ್ ಮತ್ತು ಅಮೇರಿಕಗಳ ಅನುಕರಣೆಯಿಂದ ಅದನ್ನು ಜ್ಯಾರಿಗೊಳಿಸಲು ಹಂಬಲಿಸುತ್ತಿರುವ ನಮಗೆ, ಇಸ್ಲಾಮಿನಲ್ಲಿರುವ ಆ ಸಂಪ್ರದಾಯವನ್ನು ಇಸ್ಲಾಮಿನ ಹೆಸರಿನಲ್ಲಿ ಯಾಕೆ ಜ್ಯಾರಿಗೊಳಿಸಬಾರದು? ರಾಷ್ಟ್ರದ ಖಾಸಗಿ ಮತ್ತು ಸಾರ್ವಜನಿಕ ರಂಗಗಳಲ್ಲಿರುವ ಎಲ್ಲ ಕಾರ್ಮಿಕರ ಮೂಲಭೂತ ಹಕ್ಕುಗಳನ್ನು ಪೂರೈಸಬೇಕೆಂಬುದು ಪ್ರವಾದಿವರ್ಯರ ಸ್ಪಷ್ಟ ಆಜ್ಞೆಗಳಲ್ಲಿ ಒಳಗೊಂಡಿವೆ. ಕಮ್ಯೂನಿಸಮ್ ಕೇವಲ 20ನೇ ಶತಮಾನದಲ್ಲಷ್ಟೇ ಅದನ್ನು ಜ್ಯಾರಿಗೊಳಿಸಿತು. ಅದೂ ನಿರಂಕುಶಾಧಿಪತ್ಯದ ವಜ್ರಮುಷ್ಟಿಯ ನೆರವಿನಿಂದ! ಆದರೆ ಇಸ್ಲಾಮ್ ಅದನ್ನು ಸ್ವತಂತ್ರ

ವಾತಾವರಣದಲ್ಲಿ ಜ್ಯಾರಿಗೊಳಿಸಿತ್ತು. ಇಂದು ಆ ಸಿದ್ಧಾಂತವನ್ನು ಜ್ಯಾರಿಗೊಳಿಸಲು ನಮಗೆ ಯಾವ ಕಷ್ಟವೂ ಇಲ್ಲ. ಆದರೆ ನಾವು ಅದನ್ನು ಕಮ್ಯೂನಿಝಮ್‌ನಿಂದ ಯಾಕೆ ಎರವಲು ಪಡೆಯಬೇಕು? ಇಸ್ಲಾಮಿನಿಂದ ಅದನ್ನು ಯಾಕೆ ಸ್ವೀಕರಿಸಬಾರದು?

ಎಲ್ಲ ರಂಗಗಳಲ್ಲಿಯೂ ಇದೇ ಸ್ಥಿತಿಯಿದೆ. ಮಾನವಕುಲದ ಈ ವರೆಗಿನ ಸಂಶೋಧನೆಗಳು ನಮ್ಮನ್ನು ಇಸ್ಲಾಮಿಗೆ ಇನ್ನಷ್ಟು ನಿಕಟಗೊಳಿಸಿದೆ. ಇಂದಿಗೂ ಸಂಪೂರ್ಣವಾಗಿ ಅದನ್ನು ತಲುಪಿಲ್ಲವೆಂಬುದು ನಿಜ. ಪ್ರಸ್ತುತ ಸಿದ್ಧಾಂತಗಳು ಯೂರೋಪಿನ ಮೂಲಕ ಬಂದಾಗ ವ್ಯಾವಹಾರಿಕ ಮತ್ತು ಸಂಭಾವ್ಯವೂ, ಅವು ಇಸ್ಲಾಮಿನ ಮೂಲಕ ಬರುವಾಗ ಕಾಲ್ಪನಿಕ ಮತ್ತು ಸೈದ್ಧಾಂತಿಕವೂ ಆಗುವುದು ಹೇಗೆ?

ನಾವು ಈ ಸಮಸ್ಯೆಯನ್ನು ಮೂಲಭೂತವಾಗಿ ಹೀಗೆ ವಿಶ್ಲೇಷಿಸಬಹುದು:

ಪ್ರಸ್ತುತ ಸಾಮಾಜಿಕ-ಆರ್ಥಿಕ-ರಾಜಕೀಯ ಪದ್ಧತಿಗಳು ವಾಸ್ತವದಲ್ಲಿ ವ್ಯಾವಹಾರಿಕವೇ? ಅದು ಯಾವುದಾದರೊಂದು ಪದ್ಧತಿಯಲ್ಲಿ ಎಲ್ಲಾದರೂ ವ್ಯಾವಹಾರಿಕವಾಗಿದ್ದರೆ ಇಸ್ಲಾಮಿ ಪದ್ಧತಿಯಲ್ಲಿ ವ್ಯಾವಹಾರಿಕವಾಗಿರಬಾರದೇಕೆ? ವಾಸ್ತವದಲ್ಲಿ ಅದು ಪ್ರಸ್ತುತ ಸಿದ್ಧಾಂತಗಳನ್ನು ಲೋಕದಲ್ಲಿ ಪ್ರಥಮವಾಗಿ ಜ್ಯಾರಿಗೊಳಿಸಿದ ಪದ್ಧತಿಯಾಗಿದೆ.

ಇಲ್ಲಿ ಕಮ್ಯೂನಿಸ್ಟರು ಮತ್ತು ಅವರ ಸಂಗಾತಿಗಳು ಪ್ರಚಾರ ಮಾಡುವ ಇನ್ನೊಂದು ಆರೋಪವಿದೆ. ಇದು ತೀರಾ ಬಾಲಿಶ ಆರೋಪ. ಆಧುನಿಕ ಪದ್ಧತಿಗಳು ವೈಜ್ಞಾನಿಕ ಬುನಾದಿಯಲ್ಲಿರುವಾಗ, ಇಸ್ಲಾಮ್ ಮಾನವರ ಭಾವನೆ ಮತ್ತು ಹೃದಯವನ್ನು ಅವಲಂಬಿಸಿರುವುದಂತೆ!

ಈ ವಾದವು ಹಸಿ ಸುಳ್ಳೆಂಬುದಕ್ಕೆ ಇಸ್ಲಾಮಿ ನೀತಿ ಸಂಹಿತೆಯೇ ಪ್ರಥಮ ಸಾಕ್ಷಿಯಾಗಿದೆ. ಖಂಡಿತವಾಗಿಯೂ ಅದು ಮಾನವರ ಭಾವನೆಗಳನ್ನು ಅವಲಂಬಿಸಿರುವಂಥದ್ದಲ್ಲ. ಖಲೀಫರು ಆಡಳಿತ ವ್ಯವಹಾರಗಳ ಬಗ್ಗೆ ಸಮಾಲೋಚನೆ ನಡೆಸಿ, ಅವುಗಳ ಕರ್ಮಶಾಸ್ತ್ರ ವ್ಯಾಖ್ಯಾನಗಳನ್ನು ವಿಶ್ಲೇಷಿಸುವಾಗ ಕನಸು ಕಾಣುತ್ತಿರಲಿಲ್ಲ. ಅದಕ್ಕಾಗಿ ಅವರು ಮಾನವರ ಸದ್ವಿಚಾರ ಮತ್ತು ಸಹೃದಯವನ್ನಷ್ಟೇ ಅವಲಂಬಿಸಲಿಲ್ಲ.

ಇಸ್ಲಾಮ್ ಕೇವಲ ಕಾನೂನನ್ನೇ ಅವಲಂಬಿಸುವುದನ್ನು ಮೆಚ್ಚುವುದಿಲ್ಲ ಎಂಬುದು ನಿಜ. ಕಾನೂನು ನಿರ್ಮಾಣದೊಂದಿಗೆ ಮಾನವನ ಹೃನ್ಮನಗಳ ಪರಿಶುದ್ಧತೆ ಮತ್ತು ಸುಧಾರಣೆಯ ಕಡೆಗೂ ಅದು ಗಮನ ಹರಿಸಿತ್ತು. ತನ್ನಿಮಿತ್ತ ಅವರಲ್ಲಿ ಕಾನೂನಿನ ಬಗ್ಗೆ ಒಲವು ಮತ್ತು ಅದನ್ನು ಜ್ಯಾರಿಗೊಳಿಸುವ ಹಂಬಲ ಅಭಿವ್ಯಕ್ತವಾಯಿತು. ಅಧಿಕಾರಿಗಳ ಭೀತಿಗಿಂತ ಹೆಚ್ಚಾಗಿ ಆಂತರಿಕ ನೈತಿಕ ಪ್ರಜ್ಞೆಯೇ ಅವರನ್ನು ಅದಕ್ಕೆ ಪ್ರೇರೇಪಿಸಿತು.

ಅದು ಮಾನವ ಲೋಕದಲ್ಲಿ ಜ್ಯಾರಿಗೊಳಿಸಲು ಯೋಗ್ಯವಾದ ಅತ್ಯುತ್ತಮ ಆಡಳಿತ ನೀತಿಯಾಗಿದೆ. ಹಾಗಿದ್ದರೂ ಕಾನೂನು ಬೇಕಾದೆಡೆಯಲ್ಲಿ ಸದಾ ಕಾನೂನು ಮತ್ತು

ಕಾನೂನಿನ ಆಳ್ವಿಕೆ ಇರಲೇಬೇಕು. ಜನರಿಗೆ ಮನಸ್ಸಿಲ್ಲದಿದ್ದರೂ ಅದನ್ನು ಜ್ಯಾರಿಗೊಳಿಸಲಾಗುವುದು. ಅದನ್ನೇ ಉಸ್ಮಾನ್(ರ) ಹೇಳಿದ್ದಾರೆ: "ಕುರ್ಆನ್‌ನಿಂದ ಜ್ಯಾರಿಗೊಳಿಸಲಸಾಧ್ಯವಾದುದನ್ನು ಅಲ್ಲಾಹನು ಅಧಿಕಾರದಿಂದ ಜ್ಯಾರಿಗೊಳಿಸುವನು."

******

ಕೆಲವು ಬರೆಹಗಾರರು ಇಸ್ಲಾಮೀ ಪ್ರಚಾರಕರೊಡನೆ ಹೀಗೆನ್ನುತ್ತಾರೆ: "ಉಮರ್‌ರತ್ತ ಬೆರಳು ತೋರಿಸಿ, ನೀವು ಇಸ್ಲಾಮಿನ ಶ್ರೇಷ್ಠತೆಯನ್ನು ಉದಾಹರಿಸಬೇಡಿರಿ. ಇತಿಹಾಸದಲ್ಲಿ ಇನ್ನೆಂದಿಗೂ ಉಮರ್‌ರಂಥವರ ಪುನರಾವರ್ತನೆಯಾಗುವುದಿಲ್ಲ."

ಇದನ್ನು ಕೇಳಿದಾಕ್ಷಣ ಮುಸ್ಲಿಮರು ನಿರುತ್ತರರಾಗುವರೆಂದು ಅವರು ಭಾವಿಸಿದ್ದಾರೆ!

ಇದು ಬಹಳ ಕೆಳಮಟ್ಟದ ವಿಚಾರಧಾರೆಯಾಗಿದೆ. ಉಮರ್‌ರ ವ್ಯಕ್ತಿತ್ವವು ನಮಗೆ ದೃಷ್ಟಾಂತವಲ್ಲ. ವಾಸ್ತವದಲ್ಲಿ ಉಮರ್‌ರ ವ್ಯಕ್ತಿತ್ವವು ಇಸ್ಲಾಮಿನ ಸೃಷ್ಟಿಯಾಗಿದೆ. ಉಮರ್‌ರು ಇಸ್ಲಾಮಿನ ಆತ್ಮಸಂಸ್ಕರಣಾ ಕಾರ್ಯಕ್ರಮ ಮತ್ತು ನೈತಿಕ ಶಿಕ್ಷಣಗಳ ಉತ್ತಮ ನಿದರ್ಶನವಾಗಿದ್ದಾರೆ. ಹಾಗಿದ್ದರೂ ಅವರು ಜ್ಯಾರಿಗೊಳಿಸಿದ ಇಸ್ಲಾಮೀ ಕಾನೂನು ಮತ್ತು ಆಡಳಿತ ಸಂಪ್ರದಾಯಗಳನ್ನಷ್ಟೇ ನಾವು ದೃಷ್ಟಾಂತವಾಗಿ ಸ್ವೀಕರಿಸುತ್ತೇವೆ. ಸಾಮಾಜಿಕ ಮತ್ತು ಆರ್ಥಿಕ ಅವ್ಯವಸ್ಥೆಯು ಕಳ್ಳತನಕ್ಕೆ ಪ್ರೇರಕವಾಯಿತೆಂಬ ಸಂದೇಹದಿಂದ ಓರ್ವ ಆರೋಪಿಯ ಶಿಕ್ಷೆಯನ್ನು ಜ್ಯಾರಿಗೊಳಿಸಬಾರದೆಂದು ಉಮರ್‌ರು(ರ) ಅಜ್ಞಾಪಿಸಿದ್ದಾರೆ. ಇದು ಅವರ ವೈಯಕ್ತಿಕ ಶ್ರೇಷ್ಠತೆಗೆ ಪುರಾವೆಯಾಗುವುದಿಲ್ಲ. ಅದು ಇಸ್ಲಾಮಿನ ಮೂಲಭೂತ ಸಿದ್ಧಾಂತದ ಆಧಾರದಲ್ಲಿ ಅವರು ಜ್ಯಾರಿಗೊಳಿಸಿದ ಒಂದು ಕಾನೂನು ಮಾತ್ರವಾಗಿದೆ. "ಸಂದೇಹಕ್ಕೆ ಆಸ್ಪದವಿರುವಾಗ ಶಿಕ್ಷೆಗಳನ್ನು ಕೈಬಿಡಿರಿ." ಎಂಬ ಪ್ರವಾದಿ ವಚನವೇ ಪ್ರಸ್ತುತ ಸಿದ್ಧಾಂತ. ಈ ಕಾಲದಲ್ಲಿ ಒಂದುವೇಳೆ ನಾವು ಅದನ್ನು ಜ್ಯಾರಿಗೊಳಿಸಿದರೆ, ಉಮರ್ ಇಲ್ಲದಿರುವುದರಿಂದ ಅದನ್ನು ಜ್ಯಾರಿಗೊಳಿಸಬಾರದೆಂದು ಯಾರೂ ನಮ್ಮನ್ನು ತಡೆಯಲಾರರು.

ಶ್ರೀಮಂತರ ಮಿಗತೆ ಹಣವನ್ನು ವಶಪಡಿಸಿ ಬಡವರಿಗೆ ವಿತರಣೆ ಮಾಡುವ ಅಧಿಕಾರ ಆಡಳಿತಗಾರನಿಗೆ ಇದೆಯೆಂದು ಉಮರ್(ರ) ಘೋಷಿಸಿದ್ದರು. ಸಾಮಾನ್ಯವಾಗಿ ಅದೇ ರೀತಿಯ ಕಾನೂನನ್ನು ಬ್ರಿಟನ್ ಇಂದು ಅಂಗೀಕರಿಸಿ ಜ್ಯಾರಿಗೊಳಿಸಿದೆ. ಅದು ಉಮರ್‌ರ ವೈಯಕ್ತಿಕ ಅಭಿಪ್ರಾಯವಾಗಿರಲಿಲ್ಲ. ಇಸ್ಲಾಮಿನ ಒಂದು ಕಾನೂನಾಗಿದ್ದಿತು. ಇಸ್ಲಾಮಿನ ಮೂಲಭೂತ ಸಿದ್ಧಾಂತವೊಂದರ ಆಧಾರದಲ್ಲಿ ಅವರು ಆ ಕಾಯಿದೆಯನ್ನು ಜ್ಯಾರಿಗೊಳಿಸಿದ್ದರು. "ಸಂಪತ್ತು ಕೇವಲ ನಿಮ್ಮ ಧನಿಕರಲ್ಲಿ ಸುತ್ತಾಡದಿರಲಿಕ್ಕಾಗಿ" ಎಂಬ ಕುರ್ಆನ್ ವಾಕ್ಯವೇ ಪ್ರಸ್ತುತ ಮೂಲ ಸಿದ್ಧಾಂತ. ಅದರ ಜ್ಯಾರಿಗೆ ಉಮರ್ ಎಂಬ ವ್ಯಕ್ತಿಯ ಅಗತ್ಯವಿಲ್ಲ. ಉಮರ್ ಇಲ್ಲದೆಯೇ ಬ್ರಿಟನ್ ಅದನ್ನು ಜ್ಯಾರಿಗೊಳಿಸಿತಲ್ಲವೇ!

ಆಡಳಿತಗಾರರು ಪ್ರಜೆಗಳ ಸೊತ್ತನ್ನು ಅಕ್ರಮವಾಗಿ ಕಬಳಿಸಿದ್ದಾರೆಯೇ ಎಂಬುದನ್ನು ತಿಳಿಯಲಿಕ್ಕಾಗಿ ಉಮರ್‌ರು ಅವರ ಸೊತ್ತುಗಳ ತನಿಖೆಗೆ ಆಜ್ಞಾಪಿಸಿದರು. ಇದು ಸದಾಕಾಲವೂ ಜ್ಯಾರಿಯಲ್ಲಿರಬೇಕಾದ ಕಾಯಿದೆಯಾಗಿದೆ. ಉಮರ್ ಎಂಬ ವ್ಯಕ್ತಿಯಿಲ್ಲದಿದ್ದರೂ ಅದು ಬೇಕು!

ರಕ್ಷಕರು ಅಜ್ಞಾತವಾಗಿರುವ ಅನಾಥ ಮಕ್ಕಳ ಸಂರಕ್ಷಣೆಯ ಹೊಣೆಯನ್ನು ಸರಕಾರವೇ ವಹಿಸಬೇಕೆಂದು ಉಮರ್(ರ) ಪ್ರತಿಪಾದಿಸಿದರು. ಮಾತಾಪಿತರು ಮಾಡಿದ ತಪ್ಪಿಗಾಗಿ ನಿರಪರಾಧಿ ಮಕ್ಕಳನ್ನು ಶಿಕ್ಷಿಸಬಾರದೆಂದು ಅವರು ಸಮರ್ಥಿಸಿದ್ದರು. ಯೂರೋಪು ಮತ್ತು ಅಮೇರಿಕಗಳು ಈ ಕಾಯಿದೆಯನ್ನು 20ನೇ ಶತಮಾನದಲ್ಲಷ್ಟೇ ಅಂಗೀಕರಿಸಿದುವು. ನಾವು ಇಂದು ಅದನ್ನು ಜ್ಯಾರಿಗೊಳಿಸುವಾಗ, ಅವರು ಅಂಗೀಕರಿಸಿದಂತೆ, ಅದು ಸರಕಾರದ ಕರ್ತವ್ಯವೆಂದು ಭಾವಿಸಿದರೆ ಸಾಲದೇ? ಉಮರ್‌ರ ವ್ಯಕ್ತಿತ್ವವನ್ನು ಪರಾಮರ್ಶಿಸಬೇಕಾಗಿದೆಯೇ?

ನಾವು ಉಮರ್‌ರನ್ನು ಉದಾಹರಿಸಿ ಸಮರ್ಥಿಸುವ ಇತರ ವಿಷಯಗಳ ಸ್ಥಿತಿಯೂ ಅಷ್ಟೆ. ಇಸ್ಲಾಮಿನ ಆರಂಭಕಾಲದ ಪ್ರತಿಭಾವಂತ ಕಾನೂನು ಪಾರಂಗತ, ಇಸ್ಲಾಮೀ ಸ್ಫೂರ್ತಿಯನ್ನು ಮೈಗೂಡಿಸಿದ್ದ ದಕ್ಷ ಆಡಳಿತಗಾರನೆಂಬ ನೆಲೆಯಲ್ಲಿ ನಾವು ಅವರನ್ನು ಉಲ್ಲೇಖಿಸುತ್ತೇವೆ. ಉಮರ್‌ರ ಅದ್ವಿತೀಯ ವ್ಯಕ್ತಿ ಪ್ರತಿಷ್ಠೆಯ ದೃಷ್ಟಿಯಿಂದಲ್ಲ. ಈ ಬರೆಹಗಾರರ ಮಾತು ಕೇಳಿ ನಾವಂತೂ ಉಮರ್‌ರನ್ನು ಉದಾಹರಿಸುವುದನ್ನು ಕೈ ಬಿಡುವುದಿಲ್ಲ. ಕಾನೂನು ಸಂಬಂಧವಿಲ್ಲದ ಅವರ ವೈಯಕ್ತಿಕ ಮಾದರೀಯೋಗ್ಯ ಜೀವನವನ್ನು ಉದಾಹರಿಸುವುದನ್ನೂ ನಾವು ಬಿಡುವುದಿಲ್ಲ. ಯಾಕೆಂದರೆ ಭಾವೀ ಮುಸ್ಲಿಮ್ ತಲೆಮಾರುಗಳಿಗೆ ಉತ್ತಮ ಮಾದರಿಯಾಗಿ ಕಲಿಯಲು ಮತ್ತು ಅನುಸರಿಸಲು ಅದರ ಅಗತ್ಯವಿದೆ. ಒಂದು ವೇಳೆ ಅವರಿಗೆ ಉಮರ್‌ರ ಮಟ್ಟವನ್ನು ತಲುಪಲು ಸಾಧ್ಯವಾದರೆ ಸ್ವಯಂ ಅವರಿಗೂ ಮಾನವಕುಲಕ್ಕೂ ಉತ್ತಮ. ಇನ್ನು, ಅದು ಸಾಧ್ಯವಾಗದಿದ್ದರೆ, ಅವರ ಆಡಳಿತ ಸಂಪ್ರದಾಯವನ್ನಾದರೂ ಪ್ರಚಲಿತ ಜಗತ್ತಿನಲ್ಲಿ ಕಾರ್ಯಗತಗೊಳಿಸಲು ಸಾಧ್ಯವಾದರೆ ಅದುವೇ ದೊಡ್ಡ ಸಾಧನೆಯೆನಿಸಬಹುದು. ಪರರಾಷ್ಟ್ರಗಳ ಬಾಗಿಲಲ್ಲಿ ನಿಂತು ಭಿಕ್ಷೆಬೇಡಿ ಅವರ ಸಂವಿಧಾನಗಳಿಂದ ತೇಪೆಹಾಕಿ "ಆಡಳಿತ ಸಂವಿಧಾನ" ರಚಿಸುವ ದುರ್ಗತಿ ಬರಲಾರದಷ್ಟೆ!!

*****

ಇಸ್ಲಾಮ್ ಕೇವಲ ಖಲೀಫರ ಕಾಲದಲ್ಲಿ ರೂಢಿಯಲ್ಲಿತ್ತೆಂಬ ಇನ್ನೊಂದು ಕಟ್ಟುಕಥೆಯೂ ಇದೆ! ಆದರೆ ಅದನ್ನು ನಂಬುವ ಮುಸ್ಲಿಮರೂ ಇದ್ದಾರೆನ್ನುವಾಗ ಆಶ್ಚರ್ಯವಾಗುತ್ತದೆ.!!

ಖಲೀಫರ ಕಾಲಾನಂತರ ಇಸ್ಲಾಮಿನ ಸಮಗ್ರ ರೂಪವು, ಉಮರ್ ಬಿನ್ ಅಬ್ದುಲ್ ಅಝೀಝ್‌ರ ಕಾಲದಂತೆ ತೀರಾ ಅಪರೂಪಕ್ಕೊಮ್ಮೆ ಅಸ್ತಿತ್ವದಲ್ಲಿತ್ತು ನಿಜ. ಆದರೆ ಅದರೊಂದಿಗೆ ಇಸ್ಲಾಮ್ ನಾಶವಾಯಿತೆಂದು ಇದರ ಅರ್ಥವಲ್ಲ. ಆಡಳಿತ ಯಂತ್ರವು ಅಂಶಿಕವಾಗಿ ಅಥವಾ ಸಂಪೂರ್ಣವಾಗಿ ಕೆಟ್ಟಾಗಲೂ ರಾಜಧಾನಿಯ ಹೊರತು ಸಂಪೂರ್ಣ ಸಮಾಜವು ನೈಜ ಇಸ್ಲಾಮೀ ಸಮಾಜವಾಗಿಯೇ ಬದುಕುಳಿಯಿತು. ಇಸ್ಲಾಮೀ ಸ್ಫೂರ್ತಿಯನ್ನು ಮೈಗೂಡಿಸಿ ಪರಸ್ಪರ ಸಹಕಾರ ಮತ್ತು ಸಂರಕ್ಷಣೆಯ ವಾತಾವರಣದಲ್ಲಿ ಅವರು ಜೀವನ ಸಾಗಿಸಿದರು. ಅಲ್ಲಿ ಶ್ರೀಮಂತ-ಬಡವ, ನಾಯಕ-ಪ್ರಜೆ ಎಂಬ ಯಾವ ಪಕ್ಷಪಾತವೂ ಇರಲಿಲ್ಲ. ಬದಲಾಗಿ ದುಡಿಮೆ ಮತ್ತು ಪ್ರತಿಫಲಗಳಲ್ಲಿ ಸಮಾನ ಭಾಗೀದಾರರಾಗಿ ಸಹೋದರರಂತೆ ಸೌಹಾರ್ದದಿಂದ ಬಾಳಿದರು.

ಇಸ್ಲಾಮೀ ಜಗತ್ತಿನ ಎಲ್ಲ ಮೂಲೆಗಳಲ್ಲಿಯೂ ಏಕರೀತಿಯ ನೀತಿ-ನ್ಯಾಯ ಪದ್ಧತಿ ರೂಢಿಯಲ್ಲಿತ್ತು. ಇತಿಹಾಸದ ಅದೇ ಹಂತದಲ್ಲಿ ಯೂರೋಪಿನಲ್ಲಿ ಜಾಗೀರುದಾರೀ ದೊರೆಗಳಿಗಾಗಿ ರೂಢಿಯಲ್ಲಿದ್ದಂತಹ ವಿಶೇಷ ನ್ಯಾಯಾಲಯಗಳೇನೂ ಅಲ್ಲಿರಲಿಲ್ಲ. ಯುದ್ಧ ವೇಳೆಯೂ ಮುಸ್ಲಿಮರು ವೈರಿಗಳೊಡನೆ ಇಸ್ಲಾಮೀ ಕಾನೂನುಗಳ ಪ್ರಕಾರವೇ ವರ್ತಿಸುತ್ತಿದ್ದರು. ಶಿಲುಬೆ ಯುದ್ಧದವರೂ-ಮುಖ್ಯವಾಗಿ ಸಲಾಹುದ್ದೀನ್ ಅಯ್ಯೂಬಿಯವರ ಆಡಳಿತ ಕಾಲದಲ್ಲಿ -ಈ ವಾಸ್ತವಿಕತೆಯನ್ನು ಒಪ್ಪಿದ್ದಾರೆ.

ಮುಸ್ಲಿಮರು ಕರಾರು ಪಾಲನೆಯಲ್ಲಿ ತೋರಿದ ನಿಷ್ಠೆಯು ಎಲ್ಲ ಜನಸಮುದಾಯಗಳಲ್ಲಿ ಮನೆಮಾತಾಗಿತ್ತು. ಸ್ಪೈನ್ ಮತ್ತು ಕೋರ್ಡೋವಾಗಳನ್ನೊಳಗೊಂಡ ಮುಸ್ಲಿಮ್ ಲೋಕವು ವಿಜ್ಞಾನ ಮತ್ತು ನಾಗರಿಕತೆಯ ಬಗೆಗಿದ್ದ ಅವರ ಅತ್ಯಾಸಕ್ತಿಯ ಪ್ರತೀಕವಾಗಿದ್ದುವು. ಅವು ಕಲಾ ಪ್ರೇಮಿಗಳ ಹಾಗೂ ಜ್ಞಾನದಾಹಿಗಳ ಕೇಂದ್ರವಾಗಿತ್ತು.

ಸಂಕ್ಷಿಪ್ತದಲ್ಲಿ, ಇಸ್ಲಾಮ್ ಧರ್ಮವು; ಯೂರೋಪು ವಿಜ್ಞಾನದ ದೀಪವನ್ನು ಹಚ್ಚಿದ, ಜೀವನಪದ್ಧತಿಗಳನ್ನು ಸಾಲಪಡೆದ, ಶತಪ್ರಯತ್ನದಿಂದ ಅದರೊಂದಿಗೆ ಮುನ್ನೇರಲು ಪ್ರಯತ್ನಿಸಿದಂತಹ ಜ್ವಾಜಲ್ಯಮಾನ ಜ್ಯೋತಿಯಾಗಿದೆ! ತರುವಾಯ ಯೂರೋಪನ್ನು ಹುಟ್ಟು ದುರ್ಗುಣ ವ್ಯಾಪಿಸಿತು. ಹೀಗೆ ಅದು ಸ್ಪೈನ್‌ನ ಇಸ್ಲಾಮೀ ಜ್ಯೋತಿಯನ್ನು ಶಾಶ್ವತವಾಗಿ ನಂದಿಸಿ ಬಿಟ್ಟಿತು. ಇಸ್ಲಾಮಿನಿಂದ ಸಾಧಿಸಿದ ನವೋದಯದ ಬಳಿಕ ಜಾಗತಿಕ ರಂಗದಲ್ಲಿ ಇಸ್ಲಾಮ್ ಮತ್ತು ಮುಸ್ಲಿಮರನ್ನು ದಮನಿಸಿ ಅವರ ಮುಖಕ್ಕೆ ಮಸಿ ಬಳೆಯುವ ಪ್ರಯತ್ನಕ್ಕೆ ತೊಡಗಿತ್ತು.

ಸಂಕ್ಷಿಪ್ತದಲ್ಲಿ, ಇಂದು ಭಾವಿಸಲಾಗಿರುವಂತೆ, ಇಸ್ಲಾಮ್ ಒಂದು ಅಪಾರ್ಥಿತ ಆದರ್ಶವಾದವಲ್ಲ. ಖಂಡಿತವಾಗಿಯೂ ಅದೊಂದು ಪ್ರಾಯೋಗಿಕ ಪದ್ಧತಿಯಾಗಿದೆ. ಮಾನವಕುಲವು ಅದನ್ನೊಮ್ಮೆ ಸಾಕ್ಷಾತ್ಕಾರಗೊಳಿಸಿದೆ. ಅದು 1400 ವರುಷಗಳ ಹಿಂದೆ

ಇದ್ದುದಕ್ಕಿಂತ ಇಂದು ಹೆಚ್ಚು ವ್ಯಾವಹಾರಿಕವಾಗಿದೆ. ಯಾಕೆಂದರೆ, ಮಾನವಕುಲವು ಈ ತನಕ ನಡೆಸಿದ ಸುದೀರ್ಘ ಪರೀಕ್ಷೆಗಳಿಂದ ಅದರ ಅಂತರವು ಗಣನೀಯವಾಗಿ ಕಡಿಮೆಯಾಗಿದೆ.

ಕಾಲ್ಪನಿಕವೆಂದು ಹೇಳಬಹುದಾದ ಒಂದು ಸಿದ್ಧಾಂತವಿದೆ! ಅದುವೇ ಕಮ್ಯೂನಿಝಮ್! ಕಮ್ಯೂನಿಝಮ್‌ನೆಡೆಗಿನ ತೀರ್ಥಯಾತ್ರೆಯಲ್ಲಿ ನಾವು ಸಮಾಜವಾದವೆಂಬ ಮಧ್ಯಹಾದಿಯನ್ನು ತಲಪಿದ್ದೇವೆ, ಉತ್ಪಾದನೆಯು ಪರಾಕಾಷ್ಠೆಗೆ ತಲಪಿ, ವರ್ಗರಹಿತ ಜಾಗತಿಕ ಸಮುದಾಯವು ಸ್ಥಾಪಿಸಲ್ಪಡುವಾಗ ಮಾನವನ ಕ್ಷೇಮಾಭ್ಯುದಯವನ್ನು ಕಟ್ಟಿ ಬೆಳೆಸುವ ಕಮ್ಯೂನಿಝಮ್‌ನ ಧ್ಯೇಯ ಸಾಧಿತವಾಗುವುದೆಂದೂ ಅವರು ಹೇಳುತ್ತಾರೆ. ಕೇವಲ ಅದರಿಂದಲೇ ಉತ್ಪಾದನಾ ಕೊರತೆಯಿಂದ ಉದ್ಭವಿಸಿರುವ ಅಭಿಶಪ್ತ ಪೈಪೋಟಿಯು ಕೊನೆಗೊಳ್ಳುವುದಂತೆ!

ಇದು ಎಂದೆಂದಿಗೂ ಸಾಕ್ಷಾತ್ಕಾರವಾಗದ ಭಾವನಾತ್ಮಕ ಸಿದ್ಧಾಂತ! ಯಾಕೆಂದರೆ ಅದರ ಬುನಾದಿಯು ಕಾಲ್ಪನಿಕವಾಗಿದೆ. ಮಾನವನ ಸಕಲ ಬೇಡಿಕೆಗಳನ್ನು ಅದೊಂದು ದಿನ ಈಡೇರಿಸಬಹುದೆಂದು ಅದು ನಂಬುತ್ತದೆ! ಈ ಪ್ರಕ್ರಿಯೆಯಲ್ಲಿ ಸೃಷ್ಟಿಸಲ್ಪಟ್ಟಿರುವ ಮಾನವನ ಬೇಡಿಕೆಗಳೇ? ಇಂದು ಆತನ ಎಲ್ಲ ಬೇಡಿಕೆಗಳನ್ನು ಈಡೇರಿಸಿಕೊಟ್ಟರೂ, ನಾಳೆ ಆತ ಹೊಸ ಬೇಡಿಕೆಗಳೊಂದಿಗೆ ಆಗಮಿಸುತ್ತಾನೆ!

ಸಾಕಷ್ಟು ಉತ್ಪಾದನೆಯಾಗಿ (ಕೇವಲ ಊಹೆ) ಸರ್ವಾಧಿಕಾರಿ ರಾಷ್ಟ್ರವು ಸ್ಥಾಪನೆಗೊಂಡು ಸಂಪತ್ತು ಸಮಾನವಾಗಿ ವಿತರಣೆಯಾದಾಗ ಎಲ್ಲ ರೀತಿಯ ವರ್ಗ ಸಂಘರ್ಷ ಮತ್ತು ಪೈಪೋಟಿಗಳು ಕೊನೆಗೊಳ್ಳುವುದೆಂದು ಅವರು ನಂಬುತ್ತಾರೆ. ಮಾನವನ ಸಕಲ ಸಮಸ್ಯೆಗಳಿಗೂ ಕೇವಲ ಅದೊಂದೇ ಪರಿಹಾರವಿರುವುದಂತೆ! ಆದರೆ ಪೈಪೋಟಿಯ ವಿನಾ ಮಾನವನು ಪ್ರಗತಿಯ ಹಾದಿಯಲ್ಲಿ ಒಂದಿಂಚಾದರೂ ಮುಂದೆ ಚಲಿಸಿಲ್ಲವೆಂಬುದೇ ದಿಟ!

ಕೇವಲ ಲೌಕಿಕ ದೃಷ್ಟಿಕೋನದಿಂದ ಹುಟ್ಟಿದ, ವಿಜ್ಞಾನದ ಅನುಭವ ಸಿದ್ಧ ವಾಸ್ತವಿಕತೆಗಳ ಬುನಾದಿಯಲ್ಲಿ ಕಟ್ಟಲ್ಪಟ್ಟ ತಲೆತಿರುಕ ಆದರ್ಶವಾದ!!!

***

# ಇಸ್ಲಾಮ್ ಮತ್ತು ಕಮ್ಯೂನಿಝಮ್

"ಜೀವನದ ಯಶಸ್ಸಿಗೆ ಪೂರಕವಾದ ಸಕಲ ಬುನಾದಿಗಳನ್ನು ಇಸ್ಲಾಮ್ ಹೊಂದಿದೆಯೆಂದು ನಾವು ಒಪ್ಪುತ್ತೇವೆ. ಅದು ಎಲ್ಲ ಜನಾಂಗ ಮತ್ತು ಎಲ್ಲ ಸಮುದಾಯಗಳ ಧರ್ಮವಾಗಿದೆ. ಆದರೆ ಕಳೆದ ನಾಲ್ಕು ಶತಮಾನಗಳಿಂದ ಮುಸ್ಲಿಮ್ ಲೋಕದ ಶಿಥಿಲತೆಯಿಂದಾಗಿ ಇಸ್ಲಾಮೀ ಕರ್ಮಶಾಸ್ತ್ರದ ಆರ್ಥಿಕ ಕಾನೂನುಗಳು ನಿಷ್ಕ್ರಿಯವಾದುವು. ಹಾಗಿದ್ದರೆ ಇನ್ನು ಮುಂದೆ ನಾವು ಇಸ್ಲಾಮನ್ನು ಆತ್ಮಸಂಸ್ಕರಣೆ ಮತ್ತು ಮಾನಸಿಕ ಪರಿಶುದ್ಧಿಯ ಸಿದ್ಧಾಂತವಾಗಿಯೂ ಕಮ್ಯೂನಿಝಮನ್ನು ಆರ್ಥಿಕ ವ್ಯವಸ್ಥೆಯಾಗಿಯೂ ಯಾಕೆ ಸ್ವೀಕರಿಸಬಾರದು. ಕಮ್ಯೂನಿಝಮ್‌ಗೆ ಸಾಮಾಜಿಕ ಅಥವಾ ರಾಜಕೀಯ ವ್ಯವಸ್ಥೆಯಲ್ಲಿ ಯಾವ ಸ್ಥಾನವನ್ನೂ ನೀಡಬೇಕಾಗಿಲ್ಲ. ಹಾಗಾದರೆ ನಾವು ನಮ್ಮ ಸದಾಚಾರ ಮತ್ತು ಸಂಸ್ಕೃತಿ ಹಾಗೂ ಆಚಾರ - ಸಂಪ್ರದಾಯಗಳನ್ನೂ ಆಚರಿಸಬಹುದು. ಅದರೊಂದಿಗೆ ಆರ್ಥಿಕ ಲೋಕದ ಅತಿ ನೂತನ ಪದ್ಧತಿಯನ್ನೂ ಸ್ವೀಕರಿಸಬಹುದು?......."

ಇದು ಪೌರ್ವಾತ್ಯ ಜಗತ್ತಿನಲ್ಲಿ ಕಮ್ಯೂನಿಸ್ಟರು ಬಹುಕಾಲದಿಂದ ಪ್ರಚಾರ ಮಾಡುತ್ತಿರುವ ಒಂದು ಸಂದೇಶವಾಗಿದೆ. ಆರಂಭದಲ್ಲಿ ಅವರು ಬಹಿರಂಗ ಸಂಘರ್ಷಕ್ಕೆ ಹೊರಟಿದ್ದರು. ಆದರೆ ಅದರಿಂದ ಮುಸ್ಲಿಮರು ಇಸ್ಲಾಮಿಗೆ ಇನ್ನಷ್ಟು ನಿಕಟವಾಗುತ್ತಿರುವುದನ್ನು ಕಂಡಮೇಲೆ ತಮ್ಮ ತಂತ್ರ ಬದಲಾಯಿಸಿದರು; ವಂಚನಾತ್ಮಕವಾದ ಹೊಸ ತಂತ್ರವನ್ನು ರೂಪಿಸಿದರು. ಅವರು ಹೇಳಿದರು: "ಕಮ್ಯೂನಿಝಮ್ ಇಸ್ಲಾಮಿಗೆ ವಿರುದ್ಧವಾಗಿಲ್ಲ. ಅದು ವ್ಯಾಪಕವಾದ ಸಾಮಾಜಿಕ ನೀತಿಯಾಗಿದೆ. ರಾಷ್ಟ್ರದ ಸಕಲ ಪ್ರಜೆಗಳ ಸಾಮಾನ್ಯ ಭದ್ರತೆಯಾಗಿದೆ: ಸಾಮಾಜಿಕ ನೀತಿಯನ್ನು ಇಸ್ಲಾಮ್ ವಿರೋಧಿಸುತ್ತದೆಯೇ?"

ಹಿಂದೆ ಪಾಶ್ಚಾತ್ಯ ಸಾಮ್ರಾಜ್ಯ ಶಾಹಿಯು ಈ ವಂಚನಾತ್ಮಕ ಮಾರ್ಗವನ್ನೇ ಬಳಸಿತ್ತು. ಮೊದಲು ಅವರು ಮುಸ್ಲಿಮರನ್ನು ನೇರವಾಗಿ ಆಕ್ರಮಿಸಿದರು. ಅದರಿಂದ ಮುಸ್ಲಿಮರು ಜಾಗೃತರಾಗಿ ಪ್ರಜ್ಞಾವಂತರಾದರು. ಆದರೆ ಇದು ಅವರ ಧ್ಯೇಯವಾಗಿರಲಿಲ್ಲ. ಆಗ ಅವರು ತಮ್ಮ ತಂತ್ರ ಬದಲಾಯಿಸಿಕೊಂಡರು. ಅವರು ಜನರಿಗೆ ಹೀಗೆ ಮನಗಾಣಿಸಿದರು: "ಪಾಶ್ಚಾತ್ಯ ಲೋಕವು ಪೌರ್ವಾತ್ಯ ಲೋಕದ ಸಾಂಸ್ಕೃತಿಕ

ವಿನಿಮಯವನ್ನಷ್ಟೇ ಬಯಸುತ್ತದೆ. ಸಂಸ್ಕೃತಿಯ ಉಗಮ ಕೇಂದ್ರವಾಗಿರುವ ಇಸ್ಲಾಮ್, ಸಂಸ್ಕೃತಿಯನ್ನು ಕೈಬಿಟ್ಟರಾದೀತೇ? ನೀವು ಮುಸ್ಲಿಮರಾಗಿಯೇ ಬಾಳುತ್ತಾ ನಮಾಝ್, ಉಪವಾಸ, ಪ್ರಾರ್ಥನೆ, ಜಪ-ತಪಗಳನ್ನು ನಿರ್ವಿಘ್ನವಾಗಿ ನಿರ್ವಹಿಸಬಹುದು. ಅದೇವೇಳೆ ಪಾಶ್ಚಾತ್ಯ ಸಂಸ್ಕೃತಿಯನ್ನೂ ಅಳವಡಿಸಿಕೊಳ್ಳಬಹುದು."

ಈ ಸಂಸ್ಕೃತಿಯನ್ನು ಮುಸ್ಲಿಮರು ಸ್ವೀಕರಿಸಿಬಿಟ್ಟರೆ ತರುವಾಯ ಮುಸ್ಲಿಮರು ಮುಸ್ಲಿಮರಾಗಿ ಉಳಿಯಲಾರರೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು. ಕೆಲವೇ ತಲೆಮಾರುಗಳಲ್ಲಿ ಆ ಸಂಸ್ಕೃತಿಯು ಅವರನ್ನು ವ್ಯಾಪಿಸಿ, ಅವರಿಗರಿವಿಲ್ಲದೆಯೇ ಅವರು ಅದರ ಗುಲಾಮರಾಗುವರೆಂದು ಭಾವಿಸಿದರು. ಹಾಗೆಯೇ ಆಯಿತು...... ಇಸ್ಲಾಮಿನ ಕುರಿತು ಏನೂ ತಿಳಿಯದ, ಶಿಕ್ಷಣ, ಸನ್ಮಾರ್ಗ ಅಥವಾ ಮೂಲಭೂತ ತತ್ವಗಳೇನೆಂದರಿಯದೆ ಅದರಿಂದ ವಿಮುಖರಾಗುವ ಹೊಸ ಮುಸ್ಲಿಮ್ ಜನಾಂಗ ಹುಟ್ಟಿಕೊಂಡಿತು.

ಇಂದು ಕಮ್ಯೂನಿಸ್ಟರು ಅದೇ ವಂಚನೆಯನ್ನು ಪುನರಾವರ್ತಿಸುತ್ತಿದ್ದಾರೆ: "ಎಲೈ ಮುಸ್ಲಿಮರೇ! ನೀವು ಮುಸ್ಲಿಮರಾಗಿಯೇ ಬಾಳಿರಿ. ನಮಾಝ್, ಉಪವಾಸ, ಆರಾಧನೆ, ಜಪ-ತಪಗಳ ಸಹಿತ ಜೀವಿಸಿರಿ. ನಾವು ನಿಮ್ಮ ವಿಶ್ವಾಸಗಳಲ್ಲಿ ಹಸ್ತಕ್ಷೇಪ ನಡೆಸುವುದಿಲ್ಲ. ಕಮ್ಯೂನಿಝಮ್‌ನ ಆರ್ಥಿಕ ಪದ್ಧತಿಯನ್ನು ಜ್ಯಾರಿಗೊಳಿಸುವುದೇ ನಮ್ಮ ಉದ್ದೇಶ; ವಾಸ್ತವದಲ್ಲಿ ಅದು ಇಸ್ಲಾಮೀ ಸಿದ್ಧಾಂತದ ಒಂದು ಭಾಗವೇ ಆಗಿದೆ. ಅದು ಪಾಶ್ಚಾತ್ಯ ಪಂಡಿತರ ಹಾಗೂ ಪಾಶ್ಚಾತ್ಯ ಜನತೆಯ ಮೂಲಕ ಬೆಳೆದು ವಿಕಾಸ ಹೊಂದಿದೆಯಷ್ಟೇ. ಆದ್ದರಿಂದ ನೀವು ಅದನ್ನು ಸಂತೋಷದಿಂದ ಸ್ವೀಕರಿಸಬಹುದಾಗಿದೆ!" ಮುಸ್ಲಿಮರು ಕಮ್ಯೂನಿಝಮನ್ನು ಸ್ವೀಕರಿಸಿದ ಬಳಿಕ ಮುಸ್ಲಿಮರಾಗಿ ಉಳಿಯಲಾರರೆಂದು ಅವರು ತಿಳಿದಿದ್ದರು. ಕೆಲವೇ ವರ್ಷಗಳಲ್ಲಿ (ಇದು ಸ್ಪುಟ್ನಿಕ್ ಯುಗ) ಕಮ್ಯೂನಿಝಮ್ ಅವರಲ್ಲಿ ವ್ಯಾಪಿಸಿ, ತಮಗರಿವಿಲ್ಲದೆಯೇ ಅವರು ಇಸ್ಲಾಮಿನಿಂದ ಹೊರ ಹೋಗುವರೆಂದೂ ಅವರು ಊಹಿಸಿದ್ದರು.

ಅದೇವೇಳೆ, ಅನೇಕಾರು ಮುಸ್ಲಿಮರು ಈ ವಂಚನೆಯ ಜಾಲಕ್ಕೆ ಸಿಲುಕಿದ್ದಾರೆ. ಯಾಕೆಂದರೆ, ಅವರಿಗೆ ಸಕಲ ಸಮಸ್ಯೆಗಳಿಗೆ ಏಕೈಕ ಸಿದ್ಧೌಷಧ ಬೇಕಾಗಿದೆ. ತರುವಾಯ ಅಲ್ಲಿ ಚರ್ಚೆ, ಅಧ್ಯಯನ ಅಥವಾ ರಚನಾತ್ಮಕ ಪ್ರಯತ್ನಗಳ ಅಗತ್ಯವಿರುವುದಿಲ್ಲವಷ್ಟೆ. ಮಾದಕ ವಸ್ತುಗಳ ಮಾಯಾಲೋಕದಲ್ಲಿ ಮೈಮರೆತವರಂತೆ, ಸ್ವಪ್ನಲೋಕದಲ್ಲಿ ಸೋಮಾರಿಗಳಾಗಿ ಜೀವಿಸುತ್ತಾ, ಅನ್ಯರಿಂದ ಮುನ್ನಡೆಸಲ್ಪಡುವುದೇ ಅವರಿಗೆ ಮೆಚ್ಚುಗೆಯಾಗಿದೆ.

******

ಮೂಲಭೂತ ಸಿದ್ಧಾಂತವೆಂಬಂತೆ ಒಂದು ವಿಷಯವನ್ನು ನಾನು ಮೊದಲೇ ಹೇಳಿಬಿಡುತ್ತೇನೆ. ಇಸ್ಲಾಮಿನ ಮೂಲ ಸಿದ್ಧಾಂತಗಳಿಗೆ ಬದ್ಧವಾಗಿ ಮುಸ್ಲಿಮ್ ಸಮಾಜದ ಹೊಸ ಬೇಡಿಕೆಗಳಿಗೆ ಯೋಗ್ಯವಾದ ರಚನಾತ್ಮಕ ಪದ್ಧತಿಗಳನ್ನು ಕಟ್ಟಿ ಬೆಳೆಸುವುದನ್ನು ಇಸ್ಲಾಮ್ ಸ್ವಾಗತಿಸುತ್ತದೆ. ಆದರೆ ಆ ರಚನಾತ್ಮಕ ವಿಧಾನಗಳು ಪ್ರಸ್ತುತ ಮೂಲಭೂತ ಸಿದ್ಧಾಂತಗಳಿಗೆ ವಿರುದ್ಧವಾಗಿರಬಾರದು.

ಹಾಗಿದ್ದರೆ, ವಾಸ್ತವಿಕವಾಗಿ ಇಸ್ಲಾಮ್ ಮತ್ತು ಕಮ್ಯೂನಿಝುಮ್‌ಗಳು ಎಂದೆಂದಿಗೂ ಪರಸ್ಪರ ಸರಿಹೊಂದುವುದಿಲ್ಲ. ಕೇವಲ ಕೆಲವು ಬಾಹ್ಯ ಸಾಮ್ಯತೆಗಳು ಕಂಡುಬರಬಹುದು. ಅದಕ್ಕಾಗಿ ಅತ್ಯುತ್ಕೃಷ್ಟ ಪದ್ಧತಿಯನ್ನು ಸ್ವಯಂ ಹೊಂದಿರುವ ಮುಸ್ಲಿಮ್ ಸಮಾಜವು, ಕಮ್ಯೂನಿಝುಮ್, ಭಂಡವಾಳ ಶಾಹಿತ್ವ ಅಥವಾ ಲೌಕಿಕ ಸಮಾಜವಾದಗಳನ್ನು ಅಂಗೀಕರಿಸುವಂತಿಲ್ಲ. ವಿವರಣೆಗಳಲ್ಲಿ ತಾದಾತ್ಮ್ಯವಿರಬಹುದೆಂಬುದು ನಿಜ. ಆದರೆ ಕುರ್‌ಆನ್ ಸ್ಪಷ್ಟವಾಗಿ ಹೀಗೆ ಹೇಳಿದೆ:

"ಅಲ್ಲಾಹನು ಅವತೀರ್ಣಗೊಳಿಸಿರುವುದಕ್ಕೆ ಅನುಸಾರವಾಗಿ ಯಾರು ತೀರ್ಪು ನೀಡುವುದಿಲ್ಲವೋ ಅವರೇ ಕಾಫಿರರು." (ಕುರ್‌ಆನ್)

ಅಲ್ಲಾಹನು ಅವತೀರ್ಣಗೊಳಿಸಿದಂಥವುಗಳಿಗೆ ಅನುಸಾರವಾಗಿ ತೀರ್ಪು ನೀಡದವರೆಂದು ಹೇಳಿಲ್ಲ!

ಕಮ್ಯೂನಿಝುಮನ್ನು ಅಂಗೀಕರಿಸಿದ ಬಳಿಕ ನೈಜ ಮುಸ್ಲಿಮರಾಗಿರಲು ನಮ್ಮಿಂದ ಸಾಧ್ಯವೇ? ಕಮ್ಯೂನಿಸ್ಟರು ಹೇಳುತ್ತಿರುವಂತೆ, ನಾವು ಕಮ್ಯೂನಿಝುಮ್‌ನ ಆರ್ಥಿಕ ಪದ್ಧತಿಯನ್ನು ಅಳವಡಿಸಿಕೊಂಡರೆ ಅದು ಇಸ್ಲಾಮಿನ ನೀತಿಸಂಹಿತೆ ಮತ್ತು ವ್ಯವಹಾರಗಳೊಂದಿಗೆ ಸಂಘರ್ಷಿಸುವುದಂತೂ ಖಚಿತ. ಆ ಸಂಘರ್ಷ ಅನಿವಾರ್ಯವೂ ಆಗಿದೆ.

ನೀತಿಸಂಹಿತೆಗೆ ಸಂಬಂಧಿಸಿದ ಹಲವಾರು ವಿಷಯಗಳಿವೆ. ಒಂದನೇಯದಾಗಿ, ಕಮ್ಯೂನಿಝುಮ್ ಲೌಕಿಕ ತತ್ವಶಾಸ್ತ್ರವನ್ನು ಅವಲಂಬಿಸಿದೆ. ಪಂಚೇಂದ್ರಿಯಗಳಿಗೆ ಗ್ರಾಹ್ಯವಾಗಿರುವುದನ್ನು ಮಾತ್ರ ಅದು ನಂಬುತ್ತದೆ. ಇಂದ್ರಿಯಗಳಿಗೆ ಅಗೋಚರವಾದುದು ಮೂಢನಂಬಿಕೆ ಮತ್ತು ಕಟ್ಟುಕಥೆಯಾಗಿದೆ; ಅಥವಾ ಕನಿಷ್ಟಪಕ್ಷ ಅವುಗಳಿಗೆ ಯಾವ ಪ್ರಾಧಾನ್ಯವೂ ಇಲ್ಲ. ಏಂಜೆಲ್ಸ್ ಹೇಳುತ್ತಾನೆ: "ಲೋಕದ ವಾಸ್ತವಿಕತೆಯು ಅದರ ಭೌತಿಕತೆಗೆ ಸೀಮಿತವಾಗಿದೆ." ಭೌತಿಕ ವಾದಿಗಳು ಹೇಳುತ್ತಾರೆ: "ಬುದ್ಧಿಯು ಬಾಹ್ಯ ಪ್ರಕ್ರಿಯೆಯ ಪ್ರತಿರೂಪವಾಗಿರುವ ಕೇವಲ ಒಂದು ವಸ್ತುವಾಗಿದೆ." ಹಾಗೆಯೇ ಆತ್ಮವು,

"ಸ್ವತಂತ್ರ ಅಸ್ತಿತ್ವವಲ್ಲ. ಕೇವಲ ಪದಾರ್ಥದ ವರ್ಗಭೇದ"ವೆಂದು ಅವರು ಹೇಳುತ್ತಾರೆ. ಹೀಗೆ ಆಧ್ಯಾತ್ಮಿಕತೆಯನ್ನು ಅವೈಜ್ಞಾನಿಕವೆಂದು ತುಚ್ಛೀಕರಿಸುವ ಸಂಪೂರ್ಣ ಪದಾರ್ಥ ಮಯವಾದ ವಾತಾವರಣವಲ್ಲಿ ನಾವು ಕಮ್ಯೂನಿಝುಮ್‌ನಲ್ಲಿ ದಿನ ದೂಡುತ್ತೇವೆ;ಇಸ್ಲಾಮ್ ಈ ಸಂಕುಚಿತ ವಲಯದಲ್ಲಿರಲು ಒಪ್ಪುವುದಿಲ್ಲ. ಮಾನವನ ಶ್ರೇಷ್ಠತೆಯನ್ನು ನುಚ್ಚುನೂರು ಗೊಳಿಸುವ, ಆತ್ಮ ಮತ್ತು ವಿಚಾರಗಳಿಂದ ಆಕಾಶ ಲೋಕವನ್ನು ಕಾತರದಿಂದ ನೋಡುತ್ತಾ ಭೂಮಿಯಲ್ಲಿ ಸಂಚರಿಸುವ ಮಹೋನ್ನತ ಸೃಷ್ಟಿಯಾಗಿರುವ ಮಾನವನನ್ನು, ಕಾರ್ಲ್‌ಮಾರ್ಕ್ಸ್ ಸೂಚಿಸಿರುವ ಆಹಾರ, ವಸತಿ ಮತ್ತು ಲೈಂಗಿಕ ಅಗತ್ಯಗಳನ್ನೊಳಗೊಂಡ 'ಮೂಲ ಬೇಡಿಕೆ'ಗಳಿಗಾಗಿ ಜೀವಿಸುವ ಕೇವಲ ಲೌಕಿಕ ಪ್ರಾಣಿಯಾಗಿಸಲು ಅದು ಬಯಸುವುದಿಲ್ಲ!

"ನಾವು ಈ ಲೌಕಿಕ ವಿಚಾರದ ಬಂಧಿಗಳಲ್ಲ. ಕಮ್ಯೂನಿಸ್ಟ್ ಆರ್ಥಿಕ ಕ್ರಮವನ್ನು ಅಂಗೀಕರಿಸಿದರೆ, ಅದನ್ನು ಸ್ವೀಕರಿಸಲೇಬೇಕು ಎಂಬ ಅಗತ್ಯವೂ ಇಲ್ಲ. ಆಗಲೂ ನಮಗೆ ನಮ್ಮ ವಿಶ್ವಾಸಗಳು, ನಮ್ಮ ದೇವ ಮತ್ತು ಪ್ರವಾದಿಗಳೂ ಇರುತ್ತಾರೆ. "ಆರ್ಥಿಕ ಪದ್ಧತಿಯು ಇವೆಲ್ಲಕ್ಕಿಂತ ಭಿನ್ನವಾದ ಒಂದು ಅಸ್ತಿತ್ವವಾಗಿದೆ." ಅದನ್ನು ಯಾರಿಗೂ ಹೇಳಲಸಾಧ್ಯವಾದುದಾಗಿದೆ. ಯಾಕೆಂದರೆ ಅದು ಅಸಾಧ್ಯವಾಗಿರುವುದೆಂದು ಕಮ್ಯೂನಿಸ್ಟರು ಅಂಗೀಕರಿಸಿದ್ದಾರೆ. ಆರ್ಥಿಕ ಪದ್ಧತಿಗೂ ಅದಕ್ಕೆ ಸಂಬಂಧಿಸಿದ ವಿಶ್ವಾಸ, ವಿಚಾರಧಾರೆ ಮತ್ತು ನೀತಿಸಂಹಿತೆಗಳಿಗೂ ನಿಕಟ ಸಂಬಂಧವಿರುವುದೆಂದೂ ಅವರು ವಾದಿಸುತ್ತಾರೆ. ವಿಶ್ವಾಸ, ವಿಚಾರಧಾರೆ ಮತ್ತು ನೀತಿಸಂಹಿತೆಗಳಿಗೆ ಆರ್ಥಿಕ ಪದ್ಧತಿಯೇ ಪೂರಕವಾಗಿದೆಯೆಂದೂ ಅವರು ಹೇಳುತ್ತಾರೆ. ಹಾಗಿದ್ದರೆ (ಮಾರ್ಕ್ಸ್ ಮತ್ತು ಏಂಜೆಲ್ಸ್ ಅಂಗೀಕರಿಸಿರುವಂತೆ) ಕೇವಲ ಲೌಕಿಕವಾದ, ಆರ್ಥಿಕ ಪದ್ಧತಿಯಿಂದ ಆಧ್ಯಾತ್ಮಿಕ ವಿಚಾರ ಹುಟ್ಟಲಾರದು ಅಥವಾ ಆಧ್ಯಾತ್ಮಿಕ ತತ್ವಶಾಸ್ತ್ರದೊಂದಿಗೆ ಅದಕ್ಕೆ ಹೊಂದಿಕೊಳ್ಳಲು ಸಾಧ್ಯವಾಗಲಾರದು.

ಉದಾಹರಣೆಗಾಗಿ, ಕಮ್ಯೂನಿಸ್ಟರು ವಿರೋಧಾಷ್ಠಿತ ಲೌಕಿಕ ವಾದವನ್ನು ನಂಬುತ್ತಾರೆ. ವೈರುಧ್ಯಗಳ ಸಂಘರ್ಷವೇ ಆರ್ಥಿಕ ಮತ್ತು ಮಾನವೀಯ ವಿಕಾಸಗಳ ಹಿಂದೆ ಕಾರ್ಯೋನ್ಮುಖವಾಗಿರುವ ನಿಗೂಢಶಕ್ತಿ. ಪ್ರಾಚೀನ ಕಮ್ಯೂನಿಝುಮ್, ಗುಲಾಮಗಿರಿ, ಜಾಗೀರುದಾರೀ ಪದ್ಧತಿ, ಭಂಡವಾಳ ಶಾಹಿತ್ವ, ಆಧುನಿಕ ಕಮ್ಯೂನಿಝುಮ್ ಮುಂತಾದ ಎಲ್ಲ ಬದಲಾವಣಾ ಹಂತಗಳಲ್ಲಿಯೂ ಈ ಸಂಘರ್ಷವೇ ನಡೆಯುತ್ತದೆ.

ಈ ವಿರೋಧಾಷ್ಠಿತ ಲೌಕಿಕ ವಾದದ ಆಧಾರದಲ್ಲಿಯೇ ಅಂತಿಮವಾಗಿ ಕಮ್ಯೂನಿಝುಮ್ ಸ್ಥಾಪಿಸಲ್ಪಡಬೇಕೆಂದು ಅವರು ವಾದಿಸುತ್ತಾರೆ. ವಿರೋಧಾಷ್ಠಿತ

ಭೌತಿಕವಾದ ಮತ್ತು ಕಮ್ಯೂನಿಝಮ್‌ಗಳಿಗೆ 'ವೈಜ್ಞಾನಿಕ' ಸಂಬಂಧವಿದೆಯೆಂದು ಅವರು ಹೇಳುತ್ತಾರೆ. ಈ ವಿರೋಧಾಷ್ಮಿತ ಭೌತಿಕ ವಾದದಲ್ಲಿ ಅಲ್ಲಾಹ್, ಪ್ರವಾದಿ ಅಥವಾ ಅವರ ರಾಯಭಾರಕ್ಕೆ ಯಾವ ಸ್ಥಾನವೂ ಇಲ್ಲ. ಯಾಕೆಂದರೆ ಅವರ ಕಲ್ಪನೆಯಂತೆ, ಅಂತಹ ಊಹೆ ರಾಯಭಾರಗಳಿಗೆ ಆರ್ಥಿಕ ವಿಕಾಸವನ್ನು ಮೀರಿಸಲು ಅಥವಾ ಅದಕ್ಕೆ ಪೂರಕವಾಗಲು ಸಾಧ್ಯವಿಲ್ಲ. ಅವು ಪ್ರಸ್ತುತ ವಿಕಾಸ ಶ್ರೇಣಿಯ ನಿರ್ದಿಷ್ಟ ಬಿಂದುವಿನಲ್ಲಷ್ಟೇ ಪ್ರತ್ಯಕ್ಷ ವಾಗುವುದು. ಆದ್ದರಿಂದಲೇ ಇಸ್ಲಾಮಿ ದೃಷ್ಟಿ ಕೋನದಲ್ಲಿರುವ ಅದರ ಮೌಲ್ಯವು ನಷ್ಟವಾಗುತ್ತದೆ.

ಎಲ್ಲಕ್ಕಿಂತ ಹೆಚ್ಚಾಗಿ ವಿರೋಧಾಷ್ಮಿತ ಭೌತಿಕ ವಾದವು ಮಾನವನ ಪ್ರಗತಿಯ ಎಲ್ಲ ಸೋಪಾನಗಳನ್ನು-ಅದು ಅರೇಬಿಯದಲ್ಲಿಯೂ ಇಸ್ಲಾಮಿ ಪೂರ್ವ ಲೋಕದಲ್ಲಿಯೂ-ಉತ್ಪಾದನಾ ಮೂಲದ ಬದಲಾವಣೆಗೆ ಸೀಮಿತಗೊಳಿಸುತ್ತದೆ. ಪ್ರವಾದಿ ಮುಹಮ್ಮದರು(ಸ) ನವೀನ ಪದ್ಧತಿಯೊಂದಿಗೆ ಆಗತವಾಗಿರುವುದಕ್ಕೂ ಅದೇ ಪ್ರೇರಕವಾಗಿದೆ

ಹಾಗಾದರೆ ಈ ಎರಡೂ ದೃಷ್ಟಿಕೋನಗಳು ಪರಸ್ಪರ ಹೊಂದಿಕೆಯಾಗುವುದು ಹೇಗೆ? ಸೃಷ್ಟಿಗಳನ್ನು ಅಲ್ಲಾಹನೇ ಸಂರಕ್ಷಿಸುತ್ತಾನೆ: ಆತನೇ; ಪ್ರವಾದಿಗಳ ಮೂಲಕ ಅವರನ್ನು ಸನ್ಮಾರ್ಗದೆಡೆಗೊಯ್ಯುತ್ತಾನೆ ಮತ್ತು ಇಸ್ಲಾಮ್ ಆರ್ಥಿಕ ಪರಿಸ್ಥಿತಿಗಳ ಒತ್ತಡಕ್ಕೆ ಬದ್ಧವಲ್ಲವೆಂದೂ ನಂಬುವ ಮುಸ್ಲಿಮರ ವಿಶ್ವಾಸಗಳ ಮೇಲೆ ಅದು ಪ್ರಭಾವ ಬೀರದಿರಲು ಹೇಗೆತಾನೇ ಸಾಧ್ಯ? ......... ಪ್ರತಿಯೊಂದು ಹಂತದಲ್ಲಿಯೂ ಕೇವಲ ವೈರುದ್ಯಗಳ ಸಂಘರ್ಷವೇ ವಿಕಾಸಕ್ಕೆ ಹೇತುವಾಗಿದೆ, ಆರ್ಥಿಕ ಪರಿಸ್ಥಿತಿಗಳೇ ಅದರ ಚಾಲಕಶಕ್ತಿ. ಅಲ್ಲಾಹನಿಗೆ ಅದರಲ್ಲಿ ಯಾವೊಂದು ಸ್ಥಾನವೂ ಇಲ್ಲವೆಂದು ಒತ್ತಿಹೇಳುವಂತಹ ಆರ್ಥಿಕ ಪದ್ಧತಿಯನ್ನು ಅಂಗೀಕರಿಸಿದರೆ ಅದು ನಮ್ಮ ವಿಶ್ವಾಸ ಸಿದ್ಧಾಂತಗಳ ಮೇಲೆ ಪರಿಣಾಮ ಬೀರದಿದ್ದೀತೇ?!

ಎರಡನೇಯದಾಗಿ, ಕಮ್ಯೂನಿಸ್ಟ್ ತತ್ವ ಸಿದ್ಧಾಂತದಂತೆ ಮಾನವನು ಲೌಕಿಕ-ಆರ್ಥಿಕ ಶಕ್ತಿಗಳ ಮುಂದೆ ಸ್ವಂತ ಇಚ್ಛಾಶಕ್ತಿಯಿಲ್ಲದಂತಹ ನಿಷ್ಕ್ರಿಯ ಜೀವಿಯಾಗಿದ್ದಾನೆ. ಮಾರ್ಕ್ಸ್ ಹೇಳುತ್ತಾನೆ: "ಮಾನವನ ಸಾಮಾಜಿಕ, ರಾಜಕೀಯ ಮತ್ತು ಬೌದ್ಧಿಕವೇ ಮುಂತಾದ ಸಕಲ ಸಂಬಂಧಗಳನ್ನು, ಅಸ್ತಿತ್ವಕ್ಕೆ ಆಧಾರವಾಗಿರುವ ಲೌಕಿಕ ಉತ್ಪಾದನೆಗಳೇ ನಿಯಂತ್ರಿಸುತ್ತವೆ. ಅದು ಅವರ ಇಚ್ಛಾಶಕ್ತಿಗೆ ಮೀರಿದ್ದಾಗಿದೆ. ಜನರ ಅಸ್ತಿತ್ವಕ್ಕೆ ಅವರ ಪ್ರಜ್ಞೆಯು ಆಧಾರವಲ್ಲ. ಬದಲಾಗಿ ಅವರ ಸಾಮಾಜಿಕ ಅಸ್ತಿತ್ವವೇ ಪ್ರಜ್ಞೆಯನ್ನು ರೂಪಿಸುತ್ತದೆ."

ಇಸ್ಲಾಮಿನ ದೃಷ್ಟಿಯಲ್ಲಿ ಮಾನವನು ಸ್ವಂತ ಇಚ್ಛಾಶಕ್ತಿಯಿರುವಂತಹ ಸಕ್ರಿಯ

ಶಕ್ತಿಯಾಗಿದ್ದಾನೆ. ಆತನ ಇಚ್ಛಾಶಕ್ತಿಯು ಸ್ವಾಭಾವಿಕವಾಗಿ ದೇವೇಚ್ಛೆಗೆ ಬದ್ಧವಾಗಿದೆ. ಕುರ್‌ಆನ್ ಹೇಳುತ್ತದೆ:-

"ಭೂಮಿ-ಆಕಾಶಗಳಲ್ಲಿರುವುದೆಲ್ಲವನ್ನೂ ನಿಮಗಾಗಿ ನಿಯಂತ್ರಿಸಿಕೊಟ್ಟನು."
(ಅಲ್‌ಜಾಸಿಯಃ 13)

ಮಾನವನೇ ಪ್ರಪಂಚದ ಅತಿ ಶ್ರೇಷ್ಠ ಶಕ್ತಿಯಾಗಿದ್ದು, ಲೌಕಿಕ ಆರ್ಥಿಕ ಶಕ್ತಿಗಳು ಆತನ ಇಚ್ಛೆಗೆ ವಿಧೇಯವಾಗಿವೆಯೇ ಹೊರತು ಆತನು ಅವುಗಳಿಗೆ ವಿಧೇಯನಾಗಿ ರುವುದಲ್ಲವೆಂದು ಪ್ರಸ್ತುತ ವಾಕ್ಯ ದೃಢಪಡಿಸುತ್ತದೆ. ಅದಕ್ಕೆ ಇಸ್ಲಾಮೇ ಅತೀ ದೊಡ್ಡ ದೃಷ್ಟಾಂತವಾಗಿದೆ. ಅದು ವಿರೋಧಾಷ್ಮಿತ ಲೌಕಿಕ ವಾದವು ಚಿತ್ರಿಸುವ 'ಯಾಂತ್ರಿಕ' ಮಾರ್ಗದ ಮೂಲಕ ಚಲಿಸುವುದಿಲ್ಲ. ಇಸ್ಲಾಮಿನ ಪ್ರಾರಂಭ ಹಂತದಲ್ಲಿ-ಮಾನವರು ಮುಸ್ಲಿಮರಾಗಿದ್ದಾಗ-ಆರ್ಥಿಕ ವಿಕಾಸವು ಮಾನವ ಜೀವನವನ್ನು ನಿಯಂತ್ರಿಸುವ ಮೇಧಾಶಕ್ತಿಯೆಂದು ಅವರಿಗೆ ಅನಿಸಿರಲಿಲ್ಲ. ಮಾರ್ಕ್ಸ್ ಹೇಳುವಂತೆ, 'ಅದು ನಮ್ಮ ಇಚ್ಛಾಶಕ್ತಿಗೆ ಮೀರಿದ್ದೆಂದೂ' ಅವರಿಗೆ ತೋಚಿರಲಿಲ್ಲ.

ಪ್ರವಾದಿಯ ಮೂಲಕ ಅಲ್ಲಾಹನು ತೋರಿದ ಮಾರ್ಗದಲ್ಲಿ ಆರ್ಥಿಕ ರಂಗವನ್ನು ನಾವೇ ನಡೆಸುತ್ತಿರುವೆವೆಂದೂ ಅವರಿಗೆ ಭಾಸವಾಗಿದ್ದಿತು. ಸಾಮಾಜಿಕ ಸಂಬಂಧಗಳನ್ನು ಇಸ್ಲಾಮೀ ಮಾರ್ಗದರ್ಶನದಂತೆ ಅವರೇ ರೂಪಿಸಿದ್ದರು. ಹೀಗೆ ಆರ್ಥಿಕ ಪರಿಸ್ಥಿತಿಯ ಯಾವ ಒತ್ತಡವೂ ಇಲ್ಲದೆ ಗುಲಾಮನನ್ನು ಸ್ವತಂತ್ರಗೊಳಿಸಿ, ಯೂರೋಪ್ ಮತ್ತು ಇಸ್ಲಾಮೇತರ ರಾಷ್ಟ್ರಗಳಲ್ಲಿ ಶತಮಾನಗಳಿಂದ ರೂಢಿಯಲ್ಲಿದ್ದ ಜಾಗೀರುದಾರೀ ಪದ್ಧತಿಯನ್ನು ಪ್ರತಿಭಟಿಸಿದ್ದರು.

ಕಮ್ಯೂನಿಝಮ್‌ನ ಆರ್ಥಿಕ ಪದ್ಧತಿಯನ್ನು ಸ್ವೀಕರಿಸಿದ ಮೇಲೆ ಅದರ ತತ್ವ ಸಿದ್ಧಾಂತವನ್ನೂ ನಾವು ಅಂಗೀಕರಿಸಬೇಕಾಗುತ್ತದೆ. ಹೌದು, ಮಾನವನನ್ನು ಆರ್ಥಿಕ ಶಕ್ತಿಯ ಕೇವಲ ಆಟಿಕೆಯೆಂದು ಭಾವಿಸುವ ತತ್ವ ಸಿದ್ಧಾಂತ, ಮಾನವನ ಇಚ್ಛಾಶಕ್ತಿಗತೀತವಾಗಿ ಮುನ್ನಡೆಯುವ ಆ ವಿಕಾಸವನ್ನು ಸ್ವಇಚ್ಛೆಯಿಂದ ಅಥವಾ ಇಸ್ಲಾಮೀ ಇಚ್ಛೆಯಂತೆ ಬದಲಾಯಿಸುವ ಬಗ್ಗೆ ಯೋಚಿಸಬೇಕಾಗಿಲ್ಲ. ಯಾಕೆಂದರೆ ಅದು ಅಸಾಧ್ಯ ಮತ್ತು ಅಸಂಭವ!

ಮೂರನೇಯದಾಗಿ, "ಖಾಸಗಿ ಒಡೆತನ" ಎಂಬ ಅಧ್ಯಾಯದಲ್ಲಿ ನಾವು ವಿವರಿಸಿರುವಂತೆ, ಯಾವುದೇ ಆರ್ಥಿಕ ಪದ್ಧತಿಯನ್ನು ಅದರ ಹಿಂದಿರುವ ನಿಗೂಢ ಸಾಮಾಜಿಕ ತತ್ವ ಸಿದ್ಧಾಂತದಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ಹಾಗೆಯೇ ಕಮ್ಯೂನಿಸ್ಟ್ ಆರ್ಥಿಕ ಪದ್ಧತಿಯನ್ನು ಅಂಗೀಕರಿಸುವಾಗ, ಸಮಾಜವೇ ಮೂಲಭೂತವಾಗಿದ್ದು, ವ್ಯಕ್ತಿಗೆ ಆ ಮಹಾ ಯಂತ್ರದ ಕೇವಲ ಒಂದು ಗಾಲಿಗಿಂತ ಹೆಚ್ಚಿನ ಅಸ್ತಿತ್ವವಿಲ್ಲವೆಂಬುದನ್ನೂ

ಅದರ ಇತರ ಸಾಮಾಜಿಕ ತತ್ವ ಸಿದ್ಧಾಂತಗಳನ್ನೂ ಅಂಗೀಕರಿಸಬೇಕಾಗುವುದು. ವ್ಯಕ್ತಿಗೆ ವಿಶೇಷ ಪ್ರಾಮುಖ್ಯ ನೀಡುವ ಇಸ್ಲಾಮಿ ಶಿಕ್ಷಣಗಳಿಗೆ ಅದು ಮೂಲಭೂತವಾಗಿಯೇ ವಿರುದ್ಧವಾಗಿದೆ. ಅದು ಮಾನವನ ಆತ್ಮಸಾಕ್ಷಿಯನ್ನು ಸಂಸ್ಕರಿಸಿ ಸಾಮಾಜಿಕ ಕರ್ತವ್ಯಗಳ ನಿರ್ವಹಣೆಗೆ ಅದನ್ನು ಬದ್ಧಗೊಳಿಸುತ್ತದೆ. ಸ್ವಂತ ಜೀವ, ಇಚ್ಛಾಶಕ್ತಿ ಮತ್ತು ಆಸಕ್ತಿಯಿರುವ ಘಟಕವೆಂಬ ಪ್ರಜ್ಞೆಯಿಂದ ತನ್ನ ಕೆಲಸವನ್ನು ಆತ ಸ್ವಯಂ ಆರಿಸಿಕೊಳ್ಳುತ್ತಾನೆ. ಕೆಲಸದ ಸ್ಥಳವನ್ನು ಸ್ವಯಂ ನಿರ್ಧರಿಸುತ್ತಾನೆ. ಆಡಳಿತಗಾರನಿಗೆ ಮಾರ್ಗನಿರ್ದೇಶನ ನೀಡುವ ಹಾಗೂ ಆತನು ದೇವನನ್ನು ಧಿಕ್ಕರಿಸಿದರೆ ಆತನನ್ನು ವಿರೋಧಿಸುವ ಅಧಿಕಾರವೂ ಇದೆ. ಸಮಾಜದ ಒಂದು ಅಂಗವಾಗಿರುತ್ತಾ, ವ್ಯಕ್ತಿಗೆ ಈ ವಿಶೇಷ ಸ್ಥಾನಮಾನಗಳನ್ನು ನೀಡುವ ಮೂಲಕ ಆತನು, ಪ್ರತೀಯೊಬ್ಬ ವ್ಯಕ್ತಿ ಮತ್ತು ಸಮಾಜವನ್ನು ಕೆಡುಕಿನಿಂದ ರಕ್ಷಿಸುವ ನೈತಿಕತೆಯ ಕಾವಲುಗಾರನಾಗಬೇಕೆಂದು ಇಸ್ಲಾಮ್ ಬಯಸುತ್ತದೆ. ವ್ಯಕ್ತಿಯು ಸಾಮಾಜಿಕ ಜೀವನದ ಕೇವಲ ಅಪ್ರಸಕ್ತ ಮತ್ತು ಕ್ಷುಲ್ಲಕ ಕಣವಾಗಿರುವಾಗ, ಮಾನಸಿಕವಾಗಿಯೂ ವ್ಯಾವಹಾರಿಕವಾಗಿಯೂ ಅದು ಅಸಾಧ್ಯವಾಗಿರುವುದು. ಆರ್ಥಿಕ ವಿಷಯಗಳಲ್ಲಿ ರಾಷ್ಟ್ರವನ್ನು ಅನುಸರಿಸಬೇಕಾದ ಆತನಿಗೆ, ಆ ಮೇಲೆ ಅದರ ಎಲ್ಲ ಅಂಶಗಳಿಗೂ ತಲೆ ಬಾಗಬೇಕಾಗುತ್ತದೆ.

ಕೊನೆಯದಾಗಿ: ಕಮ್ಯೂನಿಸ್ಟ್ ತತ್ವ ಸಿದ್ಧಾಂತವು ಕೇವಲ ಆರ್ಥಿಕ ಘಟಕದ ಆಧಾರದಿಂದ ನೆಲೆನಿಂತಿದೆ. ಸಂಕ್ಷಿಪ್ತದಲ್ಲಿ, ಸಂಪತ್ತೇ ಸಾಮಾಜಿಕ ಜೀವನದ ಮುನ್ನಡೆ ಹಾಗೂ ಸಾಮಾಜಿಕ ಸಂಬಂಧಗಳ ಸ್ಥಾಪನೆಯ ಪರಮ ಶಕ್ತಿಯೆಂದು ಅದು ಸಮರ್ಥಿಸುತ್ತದೆ.

ಮಾನವ ಜೀವನದಲ್ಲಿ ಆರ್ಥಿಕತೆಯ ಪ್ರಾಧಾನ್ಯವನ್ನು ಇಸ್ಲಾಮ್ ನಿರಾಕರಿಸುವುದಿಲ್ಲ. ಹಾಗೆಯೇ ನೈತಿಕ ಮತ್ತು ಸಾಮಾಜಿಕ ಸದ್ಗುಣಗಳ ಬೆಳವಣಿಗೆಗೆ ಶುದ್ಧ ಆರ್ಥಿಕ ಬುನಾದಿಯಲ್ಲಿ ಸಮಾಜವನ್ನು ಕಟ್ಟುವ ಅಗತ್ಯವನ್ನೂ ಅದು ನಿಷೇಧಿಸುವುದಿಲ್ಲ. ಅದೇ ವೇಳೆ ಜೀವನವೆಂದರೆ ಕೇವಲ ಸಂಪತ್ತೆಂದು ಅದು ನಂಬುವುದಿಲ್ಲ.ಹಾಗೆಯೇ ಸಮಾಜದ ಸಕಲ ಸಮಸ್ಯೆಗಳಿಗೆ ಆರ್ಥಿಕತೆಯೇ ಏಕೈಕ ಪರಿಹಾರವೆಂದೂ ಅದು ಭಾವಿಸುವುದಿಲ್ಲ.

ಉದಾಹರಣೆಗಾಗಿ ಈರ್ವರು ಯುವಕರನ್ನು ತೆಗೆದುಕೊಳ್ಳೋಣ. ಅವರು ಆರ್ಥಿಕ ಮಟ್ಟದಲ್ಲಿ ಸಮಾನರಾಗಿದ್ದಾರೆ. ಆದರೆ ಅವರಲ್ಲೋರ್ವನು ಸದಾಕಾಲವೂ ಸುಖಾಡಂಬರಗಳಲ್ಲಿಯೇ ಮೈ ಮರೆತಿರುತ್ತಾನೆ. ಕ್ಷಣಕಾಲವಾದರೂ ಅದರಿಂದ ಎಚ್ಚೆತ್ತು ಆತ್ಮನಿಯಂತ್ರಣ ಸಾಧಿಸುವ ಶಕ್ತಿಯಿಲ್ಲ. ಇನ್ನೊಬ್ಬನು ಜೀವನದ ಸುಖಾನಂದಗಳಲ್ಲಿ ಕೇವಲ ತನ್ನ ಪಾಲಿನದನ್ನು ಸವಿಯುತ್ತಾನೆ. ಉಳಿದ ಕ್ರಿಯಾಶಕ್ತಿಯನ್ನು ವಿಜ್ಞಾನ, ಕಲೆ ಮತ್ತು ಆದರ್ಶದ ರಂಗದಲ್ಲಿ ವ್ಯಯಿಸುತ್ತಾನೆ.

ಇವರೀರ್ವರೂ ಸಮಾನರಾದಾರೇ? ಈರ್ವರಿಗೂ ಜೀವನದಲ್ಲಿ ಸಮಾನ ಒಳಿತು, ಶ್ರೇಷ್ಠತೆ ಮತ್ತು ಯಶಸ್ಸು ಲಭ್ಯವಾದೀತೇ?

ಸ್ವಂತಿಕೆಯಿರುವ ಓರ್ವ ವ್ಯಕ್ತಿ. ಜನರು ಆತನ ಮಾತುಗಳನ್ನು ಅನುಸರಿಸುತ್ತಾರೆ. ಆತನ ಆದೇಶಗಳನ್ನು ಪಾಲಿಸುತ್ತಾರೆ. ಸ್ವಂತ ವ್ಯಕ್ತಿತ್ವವಿಲ್ಲದ ಇನ್ನೋರ್ವನಿದ್ದಾನೆ. ಆತನು ಸಂಗಾತಿಗಳ ಅಪಹಾಸ್ಯಕ್ಕೆ ಗುರಿಯಾಗುತ್ತಾನೆ. ಕೊನೆಯಲ್ಲಿ ಹೇಳಿದ ವ್ಯಕ್ತಿಯ ದೌರ್ಬಲ್ಯಗಳನ್ನು ಸಂಪತ್ತಿನಿಂದ ನಿವಾರಿಸಲು ಸಾಧ್ಯವಿದೆಯೇ? ಮೊದಲಿನ ವ್ಯಕ್ತಿಯಂತೆ ಆತನಿಗೆ ಜೀವನದಲ್ಲಿ ಯಶಸ್ಸು ಲಭ್ಯವಾದೀತೇ?

ಕೋಮಲಾಂಗಿಯಾದ ಓರ್ವ ಸುಂದರಿ; ಕುರೂಪಿಯಾದ ಇನ್ನೋರ್ವ ಹೆಣ್ಣು! ಉಭಯತ್ರರಲ್ಲಿರುವ ದೈಹಿಕ ಭಿನ್ನತೆಯನ್ನು ಸಂಪತ್ತಿನಿಂದ ಹೋಗಲಾಡಿಸಲಾದೀತೇ?

ಆದ್ದರಿಂದಲೇ ಇಸ್ಲಾಮೀ ವಿಚಾರವು, ಆರ್ಥಿಕತೆಯಿಂದ ಹೊರತಾದ ಇತರ ಕೆಲವು ಮೌಲ್ಯಗಳಿಗೆ, ಮುಖ್ಯವಾಗಿ ನೈತಿಕ ಮೌಲ್ಯಗಳಿಗೆ ಪ್ರಾಮುಖ್ಯ ನೀಡುತ್ತದೆ. ಜೀವನದಲ್ಲಿ ಮೂಲಭೂತವಾಗಿ ಕೆಲವು ಆರ್ಥಿಕೇತರ ಮೌಲ್ಯಗಳಿವೆಯೆಂದು ಅದು ನಂಬುತ್ತದೆ. ಆರ್ಥಿಕ ಸಮತೋಲನಕ್ಕೆ ಅಗತ್ಯವಿರುವಂತೆಯೇ ಪ್ರಸ್ತುತ ಮೌಲ್ಯಗಳ ಸುವ್ಯವಸ್ಥೆಗಾಗಿಯೂ ತೀವ್ರ ಪ್ರಯತ್ನಗಳ ಅಗತ್ಯವಿದೆ. ಸೃಷ್ಟಿಕರ್ತ ಮತ್ತು ಸೃಷ್ಟಿಗಳಲ್ಲಿ ಪರಸ್ಪರ ನಿತ್ಯನಿಕಟ ಸಂಬಂಧವನ್ನು ಬೆಳೆಸಲು ಅದು ಪ್ರಯತ್ನಿಸುತ್ತದೆ. ಯಾಕೆಂದರೆ ಅದು, ನೈತಿಕ ಮೌಲ್ಯಗಳ ಭದ್ರತೆಗೂ ಜೀವನದ ಬೇಡಿಕೆಗಳ ಸಂಕುಚಿತ ವಲಯದಿಂದ ಹಾಗೂ ಅಸೂಯೆ ಮತ್ತು ದ್ವೇಷದ ಹೊಗೆಯಿಂದ ಮಾನವನನ್ನು ಪ್ರೀತಿ ಸೌಹಾರ್ದಗಳು ಅರಳುವ ವಿಶಾಲ ದಿಗಂತಕ್ಕೇರಿಸುವ ಅತ್ಯುತ್ಕೃಷ್ಟ ಮಾರ್ಗವಾಗಿದೆ.

ಮತ್ತೊಂದೆಡೆ, ಮಾನವನ ಆಧ್ಯಾತ್ಮಿಕ ಶಕ್ತಿಯೇ ಜೀವನದಲ್ಲಿ ಭಾರೀ ಪ್ರಭಾವ ಬೀರುವ ಅಮೂಲ್ಯ ಶಕ್ತಿ ವೈಶಿಷ್ಟ್ಯವೆಂದು ಇಸ್ಲಾಮ್ ನಂಬುತ್ತದೆ. ನಿಷ್ಠೆಯಿಂದ ಅದನ್ನು ಪೋಷಿಸಿ ಬೆಳೆಸಿದರೆ, ಅದು ಇತರ ಸಾಮಾಜಿಕ ಅಂಶಗಳಿಗಿಂತ ಕಡಿಮೆಯಿಲ್ಲದ ಪ್ರಭಾವ ಬೀರುವುದು. ಮಾತ್ರವಲ್ಲದೇ, ಅದು ಕೆಲವೊಮ್ಮೆ ಇತರೆಲ್ಲ ಶಕ್ತಿಗಳನ್ನು ಮೀರಿಸುವಷ್ಟು ಶಕ್ತವಾಗಿರುವುದು. ಈ ವಾಸ್ತವಿಕತೆಯ ಸಾಕ್ಷಾತ್ಕಾರವನ್ನು ಮುಸ್ಲಿಮರಿಗೆ ತಮ್ಮ ಇತಿಹಾಸದಲ್ಲಿಯೇ ಕಾಣಬಹುದು. ಧರ್ಮ ಪರಿತ್ಯಾಗ ಸಮಸ್ಯೆಯ ಬಗ್ಗೆ ಅಬೂಬಕರ್‌ರು(ರ) ಅಂಗೀಕರಿಸಿದ ದಿಟ್ಟ ನಿಲುಮೆಯು ಅದಕ್ಕೆ ಸಾಕ್ಷಿಯಾಗಿದೆ. ಧರ್ಮ ವಿರೋಧಿಗಳ ವಿರುದ್ಧ ಹೋರಾಡಬೇಕೆಂದು ಅವರು ಪ್ರಬಲವಾಗಿ ಪ್ರತಿಪಾದಿಸಿದ್ದಾರೆ. ಉಮರ್‌ರೂ(ರ) ಸೇರಿದಂತೆ ಇತರೆಲ್ಲ ಮುಸ್ಲಿಮರು ಅದಕ್ಕೆ ವಿರುದ್ಧವಾಗಿದ್ದರು. ಅಬೂಬಕರ್‌ರು(ರ) ಕೊನೆಯ ತನಕ ತನ್ನ ನಿಲುಮೆಯಲ್ಲಿಯೇ ಅಚಲರಾಗಿ ನಿಂತು, ಅವರೆಲ್ಲರನ್ನು ತನ್ನ ಪರವಾಗಿ ಮಾಡಿ ಕೊಳ್ಳುತ್ತಾರೆ. ಇಲ್ಲಿ ಅವರಿಗೆ ಯಾವ ಶಕ್ತಿಯು ಆಧಾರ ವಾಗಿದ್ದಿತು? ಲೌಕಿಕ ಶಕ್ತಿಯೇ? ಆರ್ಥಿಕ ಶಕ್ತಿಯೇ? ಮಾನವೀಯ ಶಕ್ತಿಯೇ? ಅವೆಲ್ಲವೂ ಅವರನ್ನು ಯುದ್ಧದಿಂದ

ಹಿಂಜರಿಸಬಹುದಾಗಿತ್ತು. ಆದರೆ ಅದು ತನ್ನ ಸೃಷ್ಟಿಕರ್ತನೊಡನೆ ನಿಕಟ ಸಂಬಂಧವನ್ನು ಸ್ಥಾಪಿಸಿದ್ದ ಅಬೂಬಕರ್‌ರ(ರ) ಅತ್ಯದ್ಭುತ ಆಧ್ಯಾತ್ಮಿಕ ಶಕ್ತಿಯಾಗಿದ್ದಿತು. ಅದು ಚಂಚಲಚಿತ್ತರನ್ನು ಧೀರೋದ್ಧಾತ್ತಗೊಳಿಸಿದ, ಪ್ರಜ್ಞಾವಂತ ಆಧ್ಯಾತ್ಮಿಕ ಶಕ್ತಿಯನ್ನು ಲೌಕಿಕ -ಆರ್ಥಿಕ ಶಕ್ತಿಯಾಗಿ ಬದಲಾಯಿಸಿದ ಮಾನವೇತಿಹಾಸದ ಅದ್ವಿತೀಯ ಘಟನೆ ಯಾಗಿತ್ತು. ಅಮವಿಯವರು ಆರಂಭಿಸಿದ್ದ ಸಾಮಾಜಿಕ ರಾಜಕೀಯ ದಬ್ಬಾಳಿಕೆಗಳ ವಿರುದ್ಧ ಅಚಲರಾಗಿ ನಿಂತ ಉಮರ್ ಬಿನ್ ಅಬ್ದುಲ್ ಅಝೀಝ್‌ರ ನಿಲುಮೆಯಲ್ಲಿಯೂ ಅದೇ ಆಧ್ಯಾತ್ಮಿಕ ಶಕ್ತಿಯಿದ್ದಿತು. ಅದು ಎಲ್ಲ ಅಕ್ರಮ ಚಟುವಟಿಕೆಗಳನ್ನು ಕೊನೆಗೊಳಿಸಿ ನ್ಯಾಯ ನೀತಿಯನ್ನು ಸಂಸ್ಥಾಪಿಸಿದಾಗ ಆರ್ಥಿಕ ಇತಿಹಾಸದಲ್ಲಿಯೇ ಸರಿಸಾಟಿಯಿಲ್ಲದ ಮಹಾ ಅದ್ಭುತಕ್ಕೆ ಅದು ಪ್ರೇರಕವಾಯಿತು. ಹೌದು, ಬಡತನವಿಲ್ಲದಂತಹ ಸಮಾಜ ಜನ್ಮತಾಳಿತು.

ಆದ್ದರಿಂದ ಆಧ್ಯಾತ್ಮಿಕ ಶಕ್ತಿಗೆ ಇಸ್ಲಾಮ್ ಪ್ರಾಮುಖ್ಯ ನೀಡುತ್ತದೆ. ಅಧ್ಯಾತ್ಮಿಕ ಶಕ್ತಿಯಿಂದ ಸಾಧಿಸಬಲ್ಲ ಅತಿಮಾನುಷ ಸಾಧನೆಗಳನ್ನು ವಿಫಲಗೊಳಿಸಲು ಇಸ್ಲಾಮ್ ಎಂದೆಂದಿಗೂ ಬಯಸುವುದಿಲ್ಲ. ಅದೇ ವೇಳೆ ಆ ಅತಿಮಾನುಷ ಶಕ್ತಿಯ ನಿರೀಕ್ಷೆಯಿಂದ "ವಸ್ತುನಿಷ್ಠವಾದ" ಅದರ ಕರ್ಮಬಲವನ್ನು ಹೆಪ್ಪುಗಟ್ಟಿಸುವುದಿಲ್ಲ. ಅದರ ಚಿರ ಘೋಷಣೆ ಹೀಗಿದೆ: "ಅಲ್ಲಾಹನು ಕುರ್‌ಆನ್‌ನಿಂದ ಸಾಧಿಸಲಾಗದುದನ್ನು ಅಧಿಕಾರ ಬಲದಿಂದ ಸಾಧಿಸುತ್ತಾನೆ." ಮಾನವನು ಕಮ್ಯೂನಿಝಮ್‌ನ ಆರ್ಥಿಕ ನೀತಿಯನ್ನು ಅಂಗೀಕರಿಸುತ್ತಿರುವಾಗ, ಆತನಿಗೆ ನೈತಿಕ ಮೌಲ್ಯಗಳಿಗೆ ಅಥವಾ ಆಧ್ಯಾತ್ಮಿಕ ಅಂಶಕ್ಕೆ ಪ್ರಾಮುಖ್ಯ ನೀಡಲು ಸಾಧ್ಯವಿಲ್ಲ. ಯಾಕೆಂದರೆ, ಕಮ್ಯೂನಿಝಮ್ ಆರ್ಥಿಕತೆಗೆ ನೀಡುವ ಅತಿ ಪ್ರಾಧಾನ್ಯವು, ದೇಹದ ಹೃದಯ, ಕರುಳು ಮುಂತಾದ ಅಂಗಗಳ ಅತಿ ಬೆಳವಣಿಗೆಗೆ ತುಲ್ಯವಾಗಿದೆ. ಅತಿಯಾಗಿ ಬೆಳೆಯುವ ಅಂಗದಿಂದ ಅದರ ಸ್ವಕರ್ತವ್ಯಗಳನ್ನು ಸಂಪೂರ್ಣವಾಗಿ ನಿರ್ವಹಿಸಲಾಗುವುದಿಲ್ಲ. ಮಾತ್ರವಲ್ಲದೇ, ಅದು ಇತರ ಅವಯವಗಳ ಕೆಲಸ ನಿರ್ವಹಣೆಗೂ ಅಡ್ಡಿಯಾಗುವುದು.

*****

ಇಸ್ಲಾಮ್ ಮತ್ತು ಕಮ್ಯೂನಿಝಮ್‌ನ ಈ ತಾತ್ವಿಕ ಚರ್ಚೆಯಿಂದ ಕೆಲವರಿಗೆ ಜಿಗುಪ್ಸೆಯಾಗಬಹುದೆಂದು ನನಗೆ ತಿಳಿದಿದೆ. ಯಾಕೆಂದರೆ ಅವರು ತಾತ್ವಿಕ ಸಮಸ್ಯೆಗಳನ್ನು ನಂಬುವುದಿಲ್ಲ. ಅದು ವ್ಯರ್ಥ ಕಾಲಹರಣವೆಂದು ಅವರು ಭಾವಿಸುತ್ತಾರೆ. ಅಥವಾ ವ್ಯಾವಹಾರಿಕ ಸಮಸ್ಯೆಗಳನ್ನೇ ಗಮನಿಸಬೇಕೆಂದು ಅವರ ಧೋರಣೆಯಾಗಿದೆ. ವ್ಯಾವಹಾರಿಕ ಮಟ್ಟದಲ್ಲಿ ಕಾರ್ಯಗತಗೊಳಿಸಲು ಸಾಧ್ಯವಾದರೆ, ಯಾವುದೇ ಸಮಸ್ಯೆಯನ್ನು ಬಗೆಹರಿಸಲು ಸುಲಭವಂತೆ. ಆದ್ದರಿಂದ ವ್ಯಾವಹಾರಿಕ ಮಟ್ಟದಲ್ಲಿ ಇಸ್ಲಾಮ್ ಮತ್ತು ಕಮ್ಯೂನಿಝಮ್‌ಗಳು ಪರಸ್ಪರ ಎಲ್ಲಿ ಸಂಘರ್ಷಿಸುತ್ತದೆಂದು ಅವರು ಪ್ರಶ್ನಿಸುತ್ತಾರೆ.

ತಾತ್ವಿಕ ಮತ್ತು ವೈಚಾರಿಕ ಅಂಶಗಳನ್ನು ಅಪಮೌಲ್ಯಗೊಳಿಸುವ ನಿಟ್ಟಿನಲ್ಲಿ ನಮಗೆ ಸಹಮತವಿಲ್ಲ. ಯಾಕೆಂದರೆ ತಾತ್ವಿಕ-ವ್ಯಾವಹಾರಿಕ ಕ್ಷೇತ್ರಗಳ ಪರಸ್ಪರ ಸಂಬಂಧವು ಅಭೇದ್ಯವಾಗಿದೆ. ಅದೇನಿದ್ದರೂ, ವ್ಯಾವಹಾರಿಕ ವೈರುಧ್ಯಗಳನ್ನು ತೋರಿಸಿ ನಾವು ಅವರಿಗೆ ಉತ್ತರ ಹೇಳೋಣ. ಅದು ಹಲವಾರು ವಿಷಯಗಳನ್ನು ಒಳಗೊಂಡಿದೆ.

ಒಂದನೇಯದಾಗಿ, ಕುಟುಂಬ ಸಂರಕ್ಷಣೆ ಮತ್ತು ಶಿಶುಪಾಲನೆಯು ಸ್ತ್ರೀಯರ ಪ್ರಾಥಮಿಕ ಧರ್ಮವೆಂದು ಇಸ್ಲಾಮ್ ತಿಳಿಯುತ್ತದೆ. ಆಕೆಯು ತನ್ನ ಸಾಮ್ರಾಜ್ಯದಿಂದ, ಫ್ಯಾಕ್ಟರಿ ಅಥವಾ ಗದ್ದೆಗಳಿಗೆ ಅನಿವಾರ್ಯ ಪರಿಸ್ಥಿತಿಯ ವಿನಾ ಹೊರಹೋಗಬಾರದು. ಅನಿವಾರ್ಯ ಪರಿಸ್ಥಿತಿಯೆಂದರೆ, ಸಂರಕ್ಷಣೆಗೆ ಪಿತ, ಪತಿ, ಸಹೋದರ ಅಥವಾ ನಿಕಟ ಸಂಬಂಧಿಕರಿಲ್ಲದ ಸ್ಥಿತಿ.

ಆದರೆ ಸ್ತ್ರೀಯರು ಪುರುಷರಂತೆ ಪೂರ್ಣಾವಧಿ ಕೆಲಸ ಮಾಡಬೇಕೆಂದು ಕಮ್ಯೂನಿಝಮ್‌ನ ಆರ್ಥಿಕ ಸಿದ್ಧಾಂತ ವಿಧಿಸುತ್ತದೆ. ಈ ಕುರಿತಾದ ಕಮ್ಯೂನಿಸ್ಟ್ ತತ್ವ ಸಿದ್ಧಾಂತವನ್ನೂ ಸ್ತ್ರೀ-ಪುರುಷರಲ್ಲಿರುವ ಮಾನಸಿಕ ಮತ್ತು ನೈಸರ್ಗಿಕ ಭಿನ್ನತೆಗಳ ನಿರಾಕರಣೆಯನ್ನೂ ಸದ್ಯ ಬದಿಗಿರಿಸೋಣ. ಗರಿಷ್ಠ ಲೌಕಿಕ ಉತ್ಪಾದನೆಯೇ ಕಮ್ಯೂನಿಸ್ಟ್ ಆರ್ಥಿಕ ಪದ್ಧತಿಯ ಮೂಲ ಆಧಾರವಾಗಿದೆ. ಸಮಾಜದ ಪ್ರತಿಯೊಬ್ಬರೂ ಫ್ಯಾಕ್ಟರಿ, ಕಾರ್ಖಾನೆ ಮತ್ತು ಗದ್ದೆಗಳಲ್ಲಿ ಕೆಲಸ ಮಾಡಿದರೆ ಮಾತ್ರವೇ ಆ ಉದ್ದೇಶ ಈಡೇರಬಹುದು. ಅಲ್ಲಿ ಕೇವಲ ಪ್ರಸವದ ವೇಳೆ ಸ್ತ್ರೀಯರಿಗೆ ಕೆಲಸದಿಂದ ವಿನಾಯಿತಿಯಿರುವುದು. ತರುವಾಯ ಸಾಮೂಹಿಕ ಉತ್ಪಾದನಾ ಯೋಜನೆಯಂತೆ ಆ ಮಗುವಿನ ಪೋಷಣೆಯನ್ನು ರಾಷ್ಟ್ರದ ಕೈಕೆಳಗಿರುವ ನರ್ಸರಿಗಳು ನೋಡಿಕೊಳ್ಳುತ್ತವೆ.[1]

ನಾವು ಕಮ್ಯೂನಿಸ್ಟ್ ಆರ್ಥಿಕ ಪದ್ಧತಿಯನ್ನು ಜ್ಯಾರಿಗೊಳಿಸಿದರೆ, ಸ್ತ್ರೀಯರನ್ನು ಸಾಮೂಹಿಕವಾಗಿ ಕಾರ್ಮಿಕ ರಂಗಕ್ಕೆ ಇಳಿಸಬೇಕಾದೀತು. ತನ್ನಿಮಿತ್ತ ಇಸ್ಲಾಮಿನ, ಸಾಮಾಜಿಕ-ಆರ್ಥಿಕ-ರಾಜಕೀಯ ರಂಗಗಳ ಮೂಲ ಆಧಾರವಾಗಿರುವ ಕುಟುಂಬದ ಆಂತರಿಕ ಆಡಳಿತವನ್ನು ಸ್ತ್ರೀ-ಪುರುಷರಿಗೆ ನೀಡುವ ಹಾಗೂ ಸ್ತ್ರೀ-ಪುರುಷರಿಗೆ ಅವರ ವೈಶಿಷ್ಟ್ಯಗಳನ್ನು ಗಮನಿಸಿ ಕೆಲಸ ನಿಶ್ಚಯಿಸುವ ಪದ್ಧತಿಯು ನುಚ್ಚುನೂರಾಗಬಹುದು.[2]

---

1. ಶಿಶು ಪಾಲನಾ ಕೇಂದ್ರಗಳ ಕುರಿತು "ಮಹಿಳೆ ಇಸ್ಲಾಮಿನಲ್ಲಿ" ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ.

2. ಇದು ಸ್ವಾಭಾವಿಕವಾಗಿ ಕುಟುಂಬದ ಆಂತರಿಕ ರಂಗದಲ್ಲಿರುವ ಪರಸ್ಪರ ಸಹಕಾರಕ್ಕೆ ವಿರುದ್ಧವಾಗಿರುವುದಿಲ್ಲ. ಯಾಕೆಂದರೆ, ಅದು ಸಮಾಜದ ವಿವಿಧ ರಂಗಗಳಲ್ಲಿರುವ ವೈದ್ಯರು, ಇಂಜಿನಿಯರ್, ಉದ್ದಿಮೆದಾರ ಮತ್ತು ರೈತರ ಪರಸ್ಪರ ಸಹಕಾರಕ್ಕೆ ತುಲ್ಯವಾಗಿದೆ.

ಹಾಗೆಯೇ, ಸ್ತ್ರೀಯರು ಫ್ಯಾಕ್ಟರಿ ಮುಂತಾದೆಡೆಗಳಲ್ಲಿ ದುಡಿಯ ಬೇಕಾಗಿಲ್ಲವೆಂದು ಹೇಳುವವರು ಕಮ್ಯೂನಿಝುಮ್‌ನಿಂದ ಭ್ರಷ್ಟರಾಗುತ್ತಾರೆ. (ಹೀಗೆಂದು ನಾವು ಹೇಳುವುದಲ್ಲ. ಕಮ್ಯೂನಿಸ್ಟರೇ ಹೇಳುತ್ತಾರೆ.) ತರುವಾಯ ಕೇವಲ ಅಧಿಕ ಉತ್ಪಾದನೆಯ ಸಮಸ್ಯೆಯು ಉಳಿಯುತ್ತದೆ. ಅದಾದರೋ ಜೀವಂತ ಹಾಗೂ ಮೂಲಭೂತ ಬೇಡಿಕೆಯಾಗಿದೆ. ಆದರೆ ಅದಕ್ಕಾಗಿ ಕಮ್ಯೂನಿಝುಮ್‌ನ ಆರ್ಥಿಕ ಸಿದ್ಧಾಂತವನ್ನೇ ಹಮ್ಮಿ ಕೊಳ್ಳಬೇಕಾಗಿಲ್ಲ. ಅಧಿಕ ಉತ್ಪಾದನೆಯ ಪಾಠವನ್ನು ಕಮ್ಯೂನಿಝುಮ್ ಐರೋಪ್ಯ ಭಂಡವಾಳಶಾಹಿತ್ವದಿಂದಲೇ ಕಲಿತುಕೊಂಡಿದೆ.[1]

ಕೃಷಿ ಮತ್ತು ಕೈಗಾರಿಕಾ ರಂಗದಲ್ಲಿ ಅಧಿಕ ಉತ್ಪಾದನೆಗಾಗಿ ಅತ್ಯಾಧುನಿಕ ವಿಧಾನಗಳನ್ನು ಅಳವಡಿಸಿಕೊಳ್ಳುವುದನ್ನು ಇಸ್ಲಾಮೀ ಆಡಳಿತವು ಎಂದೆಂದಿಗೂ ಅಡ್ಡಿಪಡಿಸದು.

ಎರಡನೇಯದಾಗಿ; ಕಮ್ಯೂನಿಸ್ಟ್ ಆರ್ಥಿಕ ಪದ್ಧತಿಯು ಸಂಪೂರ್ಣವಾಗಿ ಸರ್ವಾಧಿಕಾರದಲ್ಲಿ ಅಧಿಷ್ಠಿತವಾಗಿದೆ. ಉದ್ಯೋಗವನ್ನು ರಾಷ್ಟ್ರವೇ ನಿರ್ಧರಿಸುತ್ತದೆ. ಉದ್ಯೋಗದ ಸ್ಥಳ ಮತ್ತು ಉದ್ಯೋಗದ ಸ್ವರೂಪದ ಕುರಿತು ಕಾರ್ಮಿಕರ ಹಿತಾಸಕ್ತಿಗಳನ್ನು ನಿರ್ಲಕ್ಷಿಸಿ ಸರಕಾರವೇ ಅವರನ್ನು ನೇಮಿಸುತ್ತದೆ. ಇದು ಅಂತಿಮವಾಗಿ ರಾಷ್ಟ್ರದ ಸರ್ವಾಧಿಕಾರಕ್ಕೆ ತಲಪುತ್ತದೆ. ಉದ್ಯೋಗ, ವಿಚಾರಧಾರೆ, ಅಭಿಪ್ರಾಯ ಮತ್ತು ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳೆಲ್ಲವೂ ರಾಷ್ಟ್ರದ ಮೇಲ್ವಿಚಾರಣೆ ಮತ್ತು ಹತೋಟಿಗೆ ಬದ್ಧವಾಗಿರುವುದು, ಯಾಕೆಂದರೆ, ಯಾವುದೇ ರಂಗದಲ್ಲಿ ಸ್ವಾತಂತ್ರ ನೀಡಿದರೆ, ಕ್ರಮೇಣ ಉದ್ಯೋಗದ ಸ್ವರೂಪ ಮತ್ತು ಸ್ಥಳವನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನೂ ಕಾರ್ಮಿಕನಿಗೆ ನೀಡಬೇಕಾಗುವುದು, ಇದು ಸರ್ವಾಧಿಕಾರೀ ಸಮಾಜದಲ್ಲಿ ಅಸಾಧ್ಯಕೋಟಿಯ ಮಾತು. ಇಲ್ಲಿ ವ್ಯಕ್ತಿಯ ಸರ್ವಾಧಿಕಾರ ಮತ್ತು ರಾಷ್ಟ್ರದ ಸರ್ವಾಧಿಕಾರಗಳನ್ನು ಪರಸ್ಪರ ಪ್ರತ್ಯೇಕಿಸಿ ನೋಡಬೇಕಾಗಿದೆ. ಕೆಲವೊಮ್ಮೆ ವ್ಯಕ್ತಿಯು ಅರ್ಥಾತ್ ಆಡಳಿತಗಾರನು ಸಭ್ಯ ಮತ್ತು ವಿನಯಶೀಲನಾಗಿದ್ದು ರಾಷ್ಟ್ರ ಕಲ್ಯಾಣದ ಕಾಳಜಿ ಹೊಂದಿರಬಹುದು. ಆಡಳಿತ ವ್ಯವಹಾರಗಳಲ್ಲಿ ಅನ್ಯರೊಡನೆ ಸಮಾಲೋಚನೆ ನಡೆಸಿ ನಿರ್ಧಾರ ಕೈಗೊಳ್ಳುವವನಾಗಿರ ಬಹುದು. ಜನಪ್ರತಿನಿಧಿಗಳೊಂದಿಗೆ-ಅವರು ಅಧಿಕೃತ ಪ್ರತಿನಿಧಿಗಳಾಗಿರಲಿ ಅಥವಾ ಬಡವರಾಗಿರಲಿ-ವಿಚಾರ ವಿನಿಮಯ ನಡೆಸಿದ ಬಳಿಕವೇ ನಿರ್ಧಾರ ಕೈಗೊಳ್ಳುತ್ತಾನೆ. ಆದರೆ ರಾಷ್ಟ್ರದ ಸರ್ವಾಧಿಕಾರದಲ್ಲಿ ಅದಕ್ಕೆ ಅವಕಾಶವಿಲ್ಲ. ಅಲ್ಲಿ 'ಬಲ'ವೇ ಆರ್ಥಿಕ ಪದ್ಧತಿಯ

---

1. ಕಮ್ಯೂನಿಸ್ಟ್ ಆಂದೋಲನದ ಆರಂಭ ಹಂತದಲ್ಲಿ ರಷ್ಯಾವು ಕೈಗಾರಿಕಾ ರಂಗದಲ್ಲಿ ಬಹಳ ಹಿಂದುಳಿದಿತ್ತು. ತರುವಾಯ ಯುರೋಪಿನಿಂದ ಅಧಿಕ ಉತ್ಪಾದನೆಯ ಸಕಲ ವಿಧಾನಗಳನ್ನೂ ಎರವಲು ಪಡೆಯಲಾಯಿತು.

ವ್ಯವಹಾರ ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು. ಇದು ಕಮ್ಯೂನಿಸ್ಟರು "ಕಾರ್ಮಿಕ ಸರ್ವಾಧಿಕಾರ"ವೆಂಬ ಮುದ್ದು ಹೆಸರಿನಿಂದ ಬಹಿರಂಗವಾಗಿ ಒಪ್ಪಿರುವ ವಾಸ್ತವಿಕತೆಯಾಗಿದೆ.

ಇವೆಲ್ಲವುಗಳ ಹೊರತು, ಕಮ್ಯೂನಿಝುಮ್ ಇಂದಿಗೂ ಕತ್ತಲೆಯಲ್ಲಿ ಪರದಾಡುತ್ತಿರುವ ಪದ್ಧತಿಯಾಗಿದೆ. ಅದು ಖಾಸಗೀ ಒಡೆತನದ ಎಲ್ಲ ರೂಪಗಳನ್ನೂ ಬಹಿಷ್ಕರಿಸಿ, ಕಾರ್ಮಿಕರೆಲ್ಲರಿಗೂ ಸಮಾನ ವೇತನ ನಿಗದಿ ಪಡಿಸಿ ಪಯಣ ಆರಂಭಿಸಿತು. ತರುವಾಯ ವ್ಯಾವಹಾರಿಕ ಅಡೆ-ತಡೆ ಮತ್ತು ಒತ್ತಡಗಳಿಂದಾಗಿ ಖಾಸಗೀ ಒಡೆತನದಲ್ಲಿ ಕೆಲವೊಂದು ಸೀಮಿತ ವಿನಾಯಿತಿಗಳನ್ನು ನೀಡಿತು. ವೇತನಮಟ್ಟದಲ್ಲಿಯೂ ಅಂತರ ಪ್ರತ್ಯಕ್ಷವಾಯಿತು. ತನ್ಮೂಲಕ ಮಾರ್ಕ್ಸ್‌ನ ಎರಡು ಮೂಲಭೂತ ಸಿದ್ಧಾಂತಗಳನ್ನು ಕೈಬಿಟ್ಟು, ಎರಡು ಹೆಜ್ಜೆ ಇಸ್ಲಾಮಿಗೆ ಹತ್ತಿರವಾಯಿತು! ಹೊಸ ಅನುಭವಗಳಿಂದ ತಪ್ಪನ್ನು ಮನಗಂಡು, ಮರಳಬೇಕಾದ ಮೂಲ ಆದರ್ಶವನ್ನು ನಾವು ಕೈ ಬಿಡುವುದಾದರೂ ಹೇಗೆ? ಎಷ್ಟೇ ಕ್ಷಿಪ್ರವಾಗಿ ಮುನ್ನಡೆದರೂ ಎಷ್ಟೇ ಸುಲಭದಲ್ಲಿ ದಾರಿ ತಪ್ಪಿದರೂ, ಅದಕ್ಕೆ ಮರಳಬಹುದೆಂಬ ಮೂಲ ಸತ್ಯವನ್ನು ನಮ್ಮಿಂದ ತಿರಸ್ಕರಿಸಲಾದೀತೇ?

# ಮಾರ್ಗವೇನು?

ಇಸ್ಲಾಮನ್ನು ಸಾಕ್ಷಾತ್ಕರಿಸುವ ಮಾರ್ಗ ಯಾವುದು?

ಇಸ್ಲಾಮ್, ಲೋಕದ ಅತ್ಯುತ್ಕೃಷ್ಟ ಪದ್ಧತಿಯೆಂದು ನಾವು ನಂಬುತ್ತೇವೆ. ಆತ್ಮಾಭಿಮಾನ ಮತ್ತು ಸಾಮಾಜಿಕ ನ್ಯಾಯ ಸಾಧನೆಗೆ ಅದುವೇ ಏಕೈಕ ಮಾರ್ಗವೆಂದು ನಮ್ಮ ಐತಿಹಾಸಿಕ, ಭೌಗೋಳಿಕ ಮತ್ತು ರಾಜಕೀಯ ಸ್ಥಿತಿಯು ಸಾರಿ ಹೇಳುತ್ತಿವೆ. ಆದರೆ, ಇಸ್ಲಾಮೀ ವಿಚಾರಗಳ ಬಗ್ಗೆ ದ್ವೇಷ ಬೆಳೆಸುತ್ತಿರುವಂತಹ ಲೋಕದಲ್ಲಿ, ಇಸ್ಲಾಮಿನೊಂದಿಗೆ ಮುಸ್ಲಿಮೇತರರಿಗಿಂತ ಹೆಚ್ಚು ವೈರತ್ವ ಮತ್ತು ವಿರೋಧವಿರುವ ದುರಾಡಳಿತಗಾರರ ಆಶ್ರಯದಲ್ಲಿ ಇಸ್ಲಾಮನ್ನು ಸಾಕ್ಷಾತ್ಕರಿಸುವ ಮಾರ್ಗ ಯಾವುದು?...

ಅದಕ್ಕೆ ಕೇವಲ ಒಂದೇ ಮಾರ್ಗವಿದೆ. ಲೋಕದ ಸಕಲ ಸಂದೇಶಗಳ ಏಕೈಕ ಮಾರ್ಗ ಅರ್ಥಾತ್, ವಿಶ್ವಾಸ!

ಈ ಧರ್ಮದ ಆದಿಯು ಯಾವುದರಿಂದ ಉತ್ತಮಗೊಂಡಿತೋ, ಅದರಿಂದಲೇ ಅದರ ಅಂತ್ಯವೂ ಉತ್ತಮವಾಗಬಹುದು...

ಆರಂಭ ಹಂತದಲ್ಲಿ ಇಸ್ಲಾಮ್ ಎದುರಿಸುತ್ತಿದ್ದ ಪರಿಸ್ಥಿತಿಯನ್ನೇ ಇಂದು ನಾವು ಎದುರಿಸುತ್ತಿದ್ದೇವೆ. ಅಂದು ಮುಸ್ಲಿಮರು ಕೇವಲ ಬೆರಳೆಣಿಕೆಯಲ್ಲಿದ್ದರು. ಅವರು ಅಂದಿನ ಎರಡು ಪ್ರಬಲ ಶಕ್ತಿಗಳನ್ನು ಎದುರಿಸಬೇಕಾಗಿತ್ತು. ಎಡಗಡೆ ರೋಮನ್ ಸಾಮ್ರಾಜ್ಯ, ಬಲಗಡೆ ಪರ್ಶಿಯನ್ ಸಾಮ್ರಾಜ್ಯ. ಉಭಯ ಸಾಮ್ರಾಜ್ಯಗಳ ಜನಬಲ, ಯುದ್ಧ ಸನ್ನಾಹ, ಹಣ, ಯುದ್ಧತಂತ್ರ, ಸೈನಿಕ ಮತ್ತು ರಾಜಕೀಯ ಪರಿಣತಿಯು ಮುಸ್ಲಿಮರಿಗಿಂತ ಎಷ್ಟೋಪಟ್ಟು ಅಧಿಕವಿತ್ತು!

ಆದರೂ...............ಆದರೂ ಪವಾಡವೇ ನಡೆಯಿತು. ಅದು ಇತಿಹಾಸದಲ್ಲಿಯೇ ಅತ್ಯದ್ಭುತವಾದ ಅತಿಮಾನುಷ ಘಟನೆಯಾಗಿದ್ದಿತು. ಈ ನಗಣ್ಯ ಮುಸ್ಲಿಮರು ಕಿಸ್ರಾ ಮತ್ತು ಕೈಸರನನ್ನು ಸೋಲಿಸಿದರು. ಅರ್ಧ ಶತಮಾನದಲ್ಲಿ ಅವುಗಳ ಮೇಲಿನ ಹಿಡಿತವನ್ನು ಪೂರ್ಣವಾಗಿ ಬಿಗಿಗೊಳಿಸಿ ದಿಗಂತದ ತನಕ ಅದರ ಅಧಿಕಾರ ಸೀಮೆಯನ್ನು ಹಬ್ಬಿಸಿದರು.

ಇದು ಹೇಗೆ ಸಾಧ್ಯವಾಯಿತು?

ಇತಿಹಾಸದ ಲೌಕಿಕ-ಆರ್ಥಿಕ ವಿವರಣೆಗಳಿಂದ ಅದನ್ನು ವ್ಯಾಖ್ಯಾನಿಸಲು ಸಾಧ್ಯವಿಲ್ಲ. ಅದನ್ನು ವ್ಯಾಖ್ಯಾನಿಸಲು ಕೇವಲ ಒಂದರಿಂದಲೇ ಸಾಧ್ಯ......... ವಿಶ್ವಾಸ!

ಪ್ರಸ್ತುತ ವಿಶ್ವಾಸವೇ ಪೂರ್ವಕಾಲ ಮುಸ್ಲಿಮರನ್ನು ಮುನ್ನಡೆಸಿತ್ತು. "ಮುಸ್ಲಿಮರ ವಿರುದ್ಧ ಹೋರಾಡುವ ಅವಿಶ್ವಾಸಿಗಳನ್ನು ವಧಿಸುವುದು; ಅಥವಾ ಸ್ವಯಂ ವಧಿಸಲ್ಪಡುವುದು, ತನ್ನ ಮತ್ತು ಸ್ವರ್ಗದ ಮಧ್ಯೆ ಕೇವಲ ಅಷ್ಟೇ ಅಂತರ ಇರುವುದಲ್ಲವೇ?" ಈ ವಿಶ್ವಾಸದಿಂದ ಆತ ರಣಾಂಗಣಕ್ಕೆ ಧುಮುಕುತ್ತಾನೆ. ತನ್ನ ನವ ವಧುವನ್ನು ಅಪ್ಪಿಕೊಳ್ಳಲೋ ಎಂಬಂತೆ. ಆ ವಿಶ್ವಾಸಿಯು ತನ್ನ ಮುಂದೆ ವಿಜಯವನ್ನು ಕಾಣುತ್ತಾನೆ, ಅದು ತಪ್ಪಿದರೆ ಹುತಾತ್ಮಗಿರಿ. ಅವೆರಡರಲ್ಲಿ ಯಾವುದನ್ನು ಸಾಧಿಸಿದರೂ ಸಾರ್ಥಕ್ಯವೆಂಬ ವಿಶ್ವಾಸದಿಂದ ಆತ ರಣಾಂಗಣಕ್ಕೆ ಇಳಿಯುತ್ತಾನೆ.

ಅದುವೇ ಮಾರ್ಗ. ಏಕೈಕ ಮಾರ್ಗ.

ಭೂಮಿಯಲ್ಲಿ ಯಾವುದೇ ಆದರ್ಶಕ್ಕೂ ಅದಲ್ಲದ ಅನ್ಯಮಾರ್ಗವಿಲ್ಲ.

******

ಕೆಲವರು ನಿಸ್ವಾರ್ಥರಾಗಿದ್ದಾರೆ ಅಥವಾ ವಂಚಿತರಾಗಿದ್ದಾರೆ. ಅವರು ಕೇಳುತ್ತಾರೆ: "ಆಯುಧ! ಎಲ್ಲಿದೆ ಆಯುಧ!"

ನಿಜ, ನಮಗೆ ಆಯುಧ ಬೇಕು, ಆದರೆ ಆಯುಧವು ನಮ್ಮ ಪ್ರಥಮ ಅಗತ್ಯವಲ್ಲವೆಂಬುದನ್ನು ಮರೆಯಬಾರದು. ಕೇವಲ ಆಯುಧದಿಂದಲೇ ಏನೂ ಸಾಧಿಸಲಾಗದು. ಕಳೆದ ಮಹಾಯುದ್ಧದಲ್ಲಿ ಇಟೆಲಿಯ ಬಳಿ ಅತ್ಯಾಧುನಿಕವಾದ ಧಾರಾಳ ಆಯುಧಗಳಿದ್ದುವು. ಆದರೂ ಅವರಿಗೆ ರಣಾಂಗಣದಲ್ಲಿ ಅಚಲರಾಗಿರಲು ಅಥವಾ ಜಯಗಳಿಸಲು ಸಾಧ್ಯವಾಗಲಿಲ್ಲ. ಅವರು ಕ್ಷಿಪ್ರವಾಗಿ ಹಿಂಜರಿದರು. ತಮ್ಮ ಆಯುಧಗಳನ್ನೆಲ್ಲ ಶತ್ರುಗಳಿಗೆ ಅರ್ಪಿಸಿ ಸೋಲೊಪ್ಪಿಕೊಂಡರು!

ಅವರಿಗೆ ಆಯುಧದ ಅಭಾವವಿರಲಿಲ್ಲ. ಅದರಲ್ಲಿ ಆಧ್ಯಾತ್ಮಿಕ ಸ್ಫೂರ್ತಿ ಮತ್ತು ವಿಶ್ವಾಸದ ಕೊರತೆಯಿದ್ದಿತು. ಹಾಗೆಯೇ ಬೆರಳೆಣಿಕೆಯ ನಿಷ್ಠಾವಂತ ಗೆರಿಲ್ಲಾ ಯೋಧರು ಮುಪ್ಪಡರಿದ್ದ ಮಹಾ ಸಾಮ್ರಾಜ್ಯವನ್ನು ಮೊಣ ಕಾಲೂರಿಸಿದ ಘಟನೆಯೂ ನಮ್ಮ ಮುಂದಿದೆ.

ಅವರ ಬಳಿ ಯಾವ ಮಾರಕಾಸ್ತ್ರವೂ ಇರಲಿಲ್ಲ. ಪ್ರಬಲ ಟ್ಯಾಂಕು, ಫಿರಂಗಿ ಅಥವಾ ರಾಕೇಟುಗಳಿರಲಿಲ್ಲ. ಕೇವಲ ಕೆಲವು ರಿವಾಲ್ವರ್, ಬಂದೂಕು ಮತ್ತು ರೈಫಲ್‌ಗಳಿದ್ದುವು. ಆದರೆ ಅತ್ಯಂತ ಮಾರಕಾಸ್ತ್ರವೊಂದು ಅವರ ಬಳಿಯಿದ್ದಿತು. ಅವರು ವಿಶ್ವಾಸಿಗಳಾಗಿದ್ದರು. ಕೇವಲ ಬೆರಳೆಣಿಕೆಯಷ್ಟಿದ್ದ ಆರಂಭಕಾಲ ಮುಸ್ಲಿಮರ ಆಧ್ಯಾತ್ಮಿಕ ಸ್ಫೂರ್ತಿಯು ಅವರಲ್ಲಿತ್ತು. ಅವರು ದೇವಮಾರ್ಗದಲ್ಲಿ ಹೋರಾಡಿದರು; ಅಂಗಚ್ಛೇದಿಸಿದರು; ವಧಿಸಿದರು, ಹುತಾತ್ಮರಾದರು. ತನ್ಮೂಲಕ ಮಹಾ ಸಾಮ್ರಾಜ್ಯವನ್ನು ನೆಲಸಮಗೊಳಿಸಲು ಅವರಿಂದ ಸಾಧ್ಯವಾಯಿತು.

ನಮ್ಮ ಮುಂದಿರುವ ಮಾರ್ಗವು ಹೂವಿನ ಹಾಸಿಗೆಯೆಂದು ಯಾರೂ ಹೇಳಲಾರರು; ಯಾವ ಸಂದೇಶಕ್ಕೂ ತ್ಯಾಗದ ಅಗತ್ಯವಿದೆ; ತ್ಯಾಗಗಳಿಂದಲೇ ವಿಜಯ ಸಾಧ್ಯ. ನಾವು ನಮ್ಮ ಮುಂದೆ ಗೌರವ, ಅಭಿಮಾನ ಮತ್ತು ಸಾಮಾಜಿಕ ನ್ಯಾಯವನ್ನು ಧ್ಯೇಯವಾಗಿರಿಸಿಕೊಂಡಿದ್ದೇವೆ. ಪ್ರಸ್ತುತ ಧ್ಯೇಯವು ಖಂಡಿತವಾಗಿಯೂ ತ್ಯಾಗ ಬಲಿದಾನಗಳನ್ನು ಬಯಸುತ್ತದೆ. ಅದೇನಿದ್ದರೂ, ನಾವಿಂದು ಅರ್ಪಿಸುತ್ತಲಿರುವ ತ್ಯಾಗಗಳಿಗಿಂತ ಹೆಚ್ಚೇನೂ ಅದಕ್ಕೆ ಬೇಕಾಗದು. ಹೀನತೆ, ಭ್ರಷ್ಟತೆ, ಹಸಿವು, ಅನೈಕ್ಯದ ಹಾದಿಯಲ್ಲಿ ನಾವಿಂದು ಅರ್ಪಿಸಬೇಕಾಗಿರುವಷ್ಟು ತ್ಯಾಗವೂ ಅದಕ್ಕೆ ಅಗತ್ಯವಿರಲಾರದು.

ಕಳೆದ ಮಹಾ ಯುದ್ಧದಲ್ಲಿ ಈ ಮುಸ್ಲಿಮ್ ಜನತೆಯು ಅದೆಷ್ಟು ತ್ಯಾಗಗಳನ್ನು ಸಹಿಸಿದೆ? ಅದೆಷ್ಟು ಲಕ್ಷ ಮಂದಿ ವಧಿಸಲ್ಪಟ್ಟಿದ್ದಾರೆ! ಮೈತ್ರಿ ಬಣದ ಆಕ್ರಮಣದಿಂದ ಸತ್ತ ಜನರೆಷ್ಟು? ಗೌರವಾಭಿಮಾನಗಳ ಉಲ್ಲಂಘನೆಗೆ ಲೆಕ್ಕಮಿತಿಯಿದೆಯೇ? ಸೊತ್ತು ವಿತ್ತಗಳ ಕೊಳ್ಳೆ ಹೊಡೆದಿರುವುದಕ್ಕೆ ಮಿತಿಯಿತ್ತೇ?........ ಆ ಮೇಲೆ? ಆದರೂ ಚರ್ಚಿಲ್ ನಮ್ಮನ್ನು ನೋಡಿ ಹೇಳಿದರು: "ನಾವೇ ನಿಮ್ಮನ್ನು ಕಾಪಾಡಿದ್ದೇವೆ. ಅದರ ಬೆಲೆ ಕೊಡಿ!" ಸಂಯುಕ್ತ ರಕ್ಷಣಾ ಒಪ್ಪಂದದ ಹೆಸರಿನಲ್ಲಿ ನಮ್ಮನ್ನು ಅಧೀನಗೊಳಿಸಲು ಪಾಶ್ಚಾತ್ಯ ಲೋಕವು ಬಯಸಿತ್ತು. ಹೌದು 'ಬಿಳಿಯ' ಅಮೇರಿಕನರು ಮತ್ತು ಬ್ರಿಟಿಷರು ತಲಪುವುದಕ್ಕಿಂತ ಮುಂಚೆ ಮಾರಕಾಸ್ತ್ರಗಳ ಸವಿ ನೋಡಲು ನಮ್ಮ ಐದು ಲಕ್ಷ ಮಂದಿಯನ್ನು ಬಲಿ ನೀಡುವುದು! ಅದಕ್ಕೆ ಪ್ರತಿಯಾಗಿ ಅವರು ನಮ್ಮ ಸೊತ್ತು, ವಿತ್ತ, ಮಾನ, ಮರ್ಯಾದೆಗಳನ್ನು ಕೊಳ್ಳೆ ಹೊಡೆಯುವುದು. ಆ ಮೇಲೆ? ಕೊನೆಗೆ ಸೋತರೂ ಗೆದ್ದರೂ ಅವರು ಸುರಕ್ಷಿತರಾಗುವರು.

ಮರಣವು ಶತಸಿದ್ಧವೆಂದಾದರೆ, ಮಾನವರು ನಿಂದನೆ ಮತ್ತು ಅಪಮಾನದ ಹಾದಿಯಲ್ಲಿ ಯಾಕೆ ಸಾಯಬೇಕು?

ಐದು ಲಕ್ಷ ಮಂದಿ 'ಮೈತ್ರಿಕೂಟ'ಗಳಿಗಾಗಿ ಜೀವ ತೆತ್ತರು.

ಆದರೆ, ಇಸ್ಲಾಮಿನ .ಹಾದಿಯಲ್ಲಿ ಐದು ಲಕ್ಷ ಮಂದಿ ಪ್ರಾಣಾರ್ಪಣೆ ಮಾಡಿದರೆ ಈ ಪವಿತ್ರ ಮಣ್ಣಿನಲ್ಲಿ ಒಬ್ಬನೇ ಒಬ್ಬ ಸರ್ವಾಧಿಕಾರಿಯೂ ಉಳಿಯಲಾರನು. ಯಾವುದೇ ಸಾಮ್ರಾಜ್ಯ ಶಕ್ತಿಯೂ ಈ ಭೂಮುಖದಲ್ಲಿ ಉಳಿಯಲಾರದು.

ಅದುವೇ ಮಾರ್ಗ...

******

....... ಕಮ್ಯೂನಿಝಮ್‌ನ ಪ್ರಚಾರವನ್ನು ನೋಡಿ ಕೆಲವರು ಇಸ್ಲಾಮಿನ ಬಗ್ಗೆ ಭಯವಿಹ್ವಲರಾಗುತ್ತಾರೆ......... ಅವರು ಭಯಪಡುವುದೇಕೆ?

ಇಸ್ಲಾಮಿನ ಮಟ್ಟಿಗೆ ಇಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಇಂದು ಕಮ್ಯೂನಿಝಮ್ ವ್ಯಾಪಿಸುತ್ತಿರುವ ಲೋಕವು ಹಿಂದೆ ಇಸ್ಲಾಮಿನ ವಿರುದ್ಧ ವೈರತ್ವ ಬೆಳೆಸಿದ್ದ ಕ್ರೈಸ್ತ ಸಾಮ್ರಾಜ್ಯದ ಒಂದು ಭಾಗವಾಗಿದೆ.

ಕಮ್ಯೂನಿಝಮ್‌ನ ನಾಂದಿ ಹಾಡಿದ ರಶ್ಯವೇ ಮುಸ್ಲಿಮ್ ಲೋಕದ ವಿರುದ್ಧ ಜನರನ್ನು ಉದ್ರೇಕಿಸುವುದು ರೂಢಿಯಾಗಿತ್ತು. ಮುಸ್ಲಿಮ್ ರಾಷ್ಟ್ರಗಳನ್ನು ಕೆಡಹಿ ಧ್ವಂಸಗೊಳಿಸಲಿಕ್ಕಾಗಿ; ಯೂರೋಪು ಶಿಲುಬೆ ಸಾಮ್ರಾಜ್ಯದ ಆಡುಂಬೊಲವಾಗಿತ್ತು; ಇಂದಿಗೂ ಹಾಗೆಯೇ ಇದೆ. ಆದರೂ ಅಲ್ಲಿ ಯಾವ ಬದಲಾವಣೆಯುಂಟಾಯಿತು?

ಇಲ್ಲ! ಯಾವ ಬದಲಾವಣೆಯೂ ಆಗಿಲ್ಲ.

ಇಕ್ಕೆಲಗಳಲ್ಲಿದ್ದ ಎರಡು ಮಹಾ ಸಾಮ್ರಾಜ್ಯಗಳ ವಿರುದ್ಧ ಆದಿಕಾಲ ಮುಸ್ಲಿಮರು ಅಂಗೀಕರಿಸಿದ ನೀತಿಯೇ ನಮ್ಮದೂ ಆಗಿದೆ.

ಮುಸ್ಲಿಮ್ ಲೋಕದಲ್ಲಿ ಕ್ರೂರದಬ್ಬಾಳಿಕೆ ನಡೆಸುತ್ತಿರುವ ಆಡಳಿತಗಾರರ ಮರಣ ಗಂಟೆಯು ಮೊಳಗತೊಡಗಿದೆ....

ಅಕ್ರಮಿಯಾಗಿದ್ದ ಫಾರೂಕ್ ಸಿಂಹಾಸನದಿಂದ ಕಿತ್ತೆಸೆಯಲ್ಪಡುವನೆಂದು ಯಾರಾದರೂ ಭಾವಿಸಿದ್ದರೇ?

ಒಮ್ಮೆ ಸಂಭವಿಸಿದ್ದು, ಯಾವಾಗಲೂ ಸಂಭವಿಸಬಹುದು.

ಪಾಶ್ಚಾತ್ಯ ಅಥವಾ ಪೌರ್ವಾತ್ಯ ಬಣವನ್ನು ಸೇರದೆ, ಅಥವಾ ಅವರಿಗೆ ಶರಣಾಗದೆ, ಇಸ್ಲಾಮಿೀ ಹಾದಿಯಿಂದ ಸಾಮಾಜಿಕ ನ್ಯಾಯವನ್ನು ಅರಸುವ ಇಸ್ಲಾಮಿೀ ನೀತಿಯು ಒಂದು ವಾಸ್ತವಿಕತೆಯಾಗಿದೆ.

ಇಸ್ಲಾಮ್ ನಾಲ್ದೆಸೆಗಳಿಂದಲೂ ಆಕ್ರಮಣವನ್ನು ಎದುರಿಸುತ್ತಾ ಸಕ್ರಿಯ ಹಾದಿಯಲ್ಲಿಯೇ ಮುನ್ನಡೆಯುತ್ತಿದೆ. ಹೌದು, ವಸ್ತು ಸ್ಥಿತಿಗಳು ಇಸ್ಲಾಮಿನ ನವೋದಯದ ಡಂಗುರ ಸಾರುತ್ತಿವೆ. ಮಾನವಕುಲದ ಬೆಳವಣಿಗೆಯಲ್ಲಿ ಇಸ್ಲಾಮಿನ ಆರಂಭ ಹಂತದಲ್ಲಿ ಅದು ವಹಿಸಿದ ಪಾತ್ರಕ್ಕಿಂತ ಸ್ವಲ್ಪವೂ ಕ್ಷುಲ್ಲಕ ಅಥವಾ ಅಪ್ರಾಮಾಣಿಕವಲ್ಲದ ಪಾತ್ರವನ್ನು ಇಂದೂ ವಹಿಸಲಿಕ್ಕಿದೆ.

ಅದು ನವಲೋಕದ ಸುವಾರ್ತೆ ನೀಡುತ್ತಿದೆ. ಆ ಲೋಕವನ್ನು ಭೌತಿಕತೆ ಆಳುವುದಲ್ಲ. ಆರ್ಥಿಕತೆಯ ಸಂಘರ್ಷವು ಅದನ್ನು ಅಧೀನಗೊಳಿಸಲಾರದು. ಬದಲಾಗಿ ಅಲ್ಲಿ ಆಧ್ಯಾತ್ಮಿಕತೆ ಮತ್ತು ಭೌತಿಕತೆ ಸಮ್ಮಿಲನಗೊಂಡಂತಹ ಸುಂದರ ಪದ್ಧತಿಯು ಆಡಳಿತ ನಡೆಸುವುದು.

ಭೌತಿಕತೆಯಲ್ಲಿ ಮುಳುಗಿದ ಲೋಕಕ್ಕೆ ಆತ್ಮದಾಹವನ್ನು ತಣಿಸಲಾಗಲಿಲ್ಲ. ಮನಶ್ಶಾಂತಿ ಗಳಿಸಲಾಗಲಿಲ್ಲ. ಮಾತ್ರವಲ್ಲದೇ ಅದು ನಿರಂತರ ತೀವ್ರ ಸಂಘರ್ಷಕ್ಕೆ ಗುರಿಯಾಗುತ್ತಿದೆ....... ಅದೊಂದು ದಿನ ಭೌತಿಕತೆಯನ್ನು ನಿರ್ಲಕ್ಷಿಸದ ಹಾಗೂ ಆತ್ಮವನ್ನೂ ಕೈಬಿಡದಂಥ ಪದ್ಧತಿಗೆ ಅದು ತಲಪದಿರದು. ಅದು ಇಸ್ಲಾಮಿಗೆ ಮರಳದಿದ್ದರೂ ಇಸ್ಲಾಮೀ ವಿಚಾರಗಳಿಗೆ ಮರಳದೆ ನಿರ್ವಾಹವಿಲ್ಲ.

ಹಾಗಿದ್ದರೆ...

ನಾವು ಸಂಚರಿಸಬೇಕಾದ ಮಾರ್ಗವು ಪುಷ್ಪಾಲಂಕೃತವಲ್ಲ. ಅದು ತ್ಯಾಗದ ಮಾರ್ಗ. ಇಸ್ಲಾಮಿನ ಗುಣ ಮತ್ತು ಶ್ರೇಷ್ಠತೆಯನ್ನು ಲೋಕವು ಅಂಗೀಕರಿಸುವಂತೆ ಮಾಡಲು, ನಮ್ಮ ಪೂರ್ವಜರಾದ ಆದಿಕಾಲ ಮುಸ್ಲಿಮರು ಅರ್ಪಿಸಿದ ಘನ ತ್ಯಾಗಗಳನ್ನು ನಾವು ಅರ್ಪಿಸಲೇ ಬೇಕಾಗಿದೆ...

ಸತ್ವ ಪರೀಕ್ಷೆ ಮತ್ತು ಸಂಕಷ್ಟಗಳಿಂದ ತುಂಬಿದ ಆ ಹಾದಿಯಲ್ಲಿ ಅರ್ಪಿಸಲಾಗುವ ತ್ಯಾಗಗಳಿಗೆ ಭೂಮಿ-ಆಕಾಶಗಳಲ್ಲಿ ಯಶಸ್ಸಿದೆ. ಆ ಯಶಸ್ಸಿನ ಕುರಿತು ವಾಗ್ದಾನ ನೀಡಲಾಗಿದೆ:

"...ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನೂ ಖಂಡಿತ ಸಹಾಯ ಮಾಡುವನು, ಅಲ್ಲಾಹ್ ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ."

(ಅಲ್‌ಹಜ್ಜ್:40)

❀